# ಗೊಂದಲಿಗರ ಕಥನ ಸಾಹಿತ್ಯದ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

**ಶ್ರೀಮತಿ. ಮೀನಾಕ್ಷಿ ಎಸ್. ಮುಂಡಗನೂರ.**





ಮಾರ್ಗದರ್ಶಕರು

**ಡಾ. ಗಂಗಾಧರ ದೈವಜ್ಞ**

ಪ್ರಾಧ್ಯಾಪಕರು







ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬.

೨೦೧೬

# ಗೊಂದಲಿಗರ ಕಥನ ಸಾಹಿತ್ಯದ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು
ಶ್ರೀಮತಿ.ಮೀನಾಕ್ಷಿ.ಎಸ್.ಮುಂಡಗನೂರ.

ಮಾರ್ಗದರ್ಶಕರು
ಡಾ. ಗಂಗಾಧರ ದೈವಜ್ಞ
ಪ್ರಾಧ್ಯಾಪಕರು




ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೬

# ಪ್ರಮಾಣ ಪತ್ರ

**'ಗೊಂದಲಿಗರ ಕಥನ ಸಾಹಿತ್ಯದ ಸಾಂಸ್ಕೃತಿಕ ಅಧ್ಯಯನ'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪ್ರೊ. ಗಂಗಾಧರ ದೈವಜ್ಞ, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Mundaganur

ಸ್ಥಳ: ವಿದ್ಯಾರಣ್ಯ.
ದಿನಾಂಕ: 26-04-2016

(ಶ್ರೀಮತಿ.ಮೀನಾಕ್ಷಿ.ಎಸ್.ಮುಂಡಗನೂರ)
ಸಂಶೋಧಕರು.

# ದೃಢೀಕರಣ ಪತ್ರ

ಶ್ರೀಮತಿ. ಮೀನಾಕ್ಷಿ. ಎಸ್. ಮುಂಡಗನೂರ. ಇವರು **'ಗೊಂದಲಿಗರ ಕಥನ ಸಾಹಿತ್ಯದ ಸಾಂಸ್ಕೃತಿಕ ಅಧ್ಯಯನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಪ್ರಸ್ತುತ ಮಹಾಪ್ರಬಂಧವನ್ನು ಸಲ್ಲಿಸಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಇವರು ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**(ಡಾ. ಗಂಗಾಧರ. ದೈವಜ್ಞ.)**
**ಮಾರ್ಗದರ್ಶಕರ, ಪ್ರಾಧ್ಯಾಪಕರು**
**ಬುಡಕಟ್ಟು ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ಸ್ಥಳ: ವಿದ್ಯಾರಣ್ಯ.**
**ದಿನಾಂಕ:** 26/04/2016

## ಕೃತಜ್ಞತೆಗಳು

ಗೊಂದಲಿಗರ ಕಥನ ಸಾಹಿತ್ಯದ ಸಾಂಸ್ಕೃತಿಕ ಅಧ್ಯಯನ ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಮರ್ಪಿಸುವುದು ನನಗೆ ಅತ್ಯಂತ ಹರ್ಷವೆನಿಸುತ್ತದೆ. ಈ ಸಂದರ್ಭದಲ್ಲಿ ನನಗೆ ಸಹಾಯ ಮಾಡಿದ ಎಲ್ಲರನ್ನು ನೆನಪಿಸಿಕೊಳ್ಳುವುದು ನನ್ನ ಕರ್ತವ್ಯ ಎಂದು ಭಾವಿಸಿದ್ದೇನೆ. ನನ್ನ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಮಾನ್ಯ ಕುಲಪತಿಗಳಾದ ಡಾ. ಮಲ್ಲಿಕಾ ಘಂಟಿ ಇವರಿಗೆ,

ನನ್ನ ಈ ಅಧ್ಯಯನಕ್ಕೆ ಮಾರ್ಗದರ್ಶಕರಾಗಿ ಒಪ್ಪಿಕೊಂಡು ಪ್ರತಿ ಹಂತದಲ್ಲೂ ನನ್ನ ಬರವಣಿಗೆಯನ್ನು ತಿದ್ದುತ್ತಾ ನನಗೆ ಸಂಶೋಧನೆಯಲ್ಲಿ ಆಸಕ್ತಿ ಮೂಡುವಂತೆ ಮಾಡಿದ ಡಾ. ಗಂಗಾಧರ ದೈವಜ್ಞ ಅವರಿಗೆ, ಅವರ ಪತ್ನಿ ಸರೋಜಾ ಹಾಗೂ ಅವರ ಮಗಳಾದ ಭಾಗೀರಥಿಗೆ,

ಅಧ್ಯಯನದ ಆರಂಭದಿಂದಲೂ ಅನೇಕ ಸಲಹೆ ಸೂಚನೆ ನೀಡಿದ ಬುಡಕಟ್ಟು ವಿಭಾಗದ ಪ್ರಾಧ್ಯಾಪಕರಾದ ಡಾ. ಚೆಲುವರಾಜು, ಡಾ. ಕೆ.ಎಂ. ಮೇತ್ರಿ, ಡಾ.ಎ.ಎಸ್. ಪ್ರಭಾಕರ. ವಿಭಾಗದ ಹಿರಿಯ ಸಹಾಯಕರಾದ ವಿರುಪಾಕ್ಷಯ್ಯ ಅವರಿಗೆ, ಹಸ್ತಪ್ರತಿ ವಿಭಾಗದ ಪ್ರಾಧ್ಯಾಪಕರಾದ ಡಾ.ವೀರೇಶ ಬಡಿಗೇರ ಅವರಿಗೆ, ಈ ಸಂಶೋಧನೆಯಲ್ಲಿ ಪ್ರೋತ್ಸಾಹ ನೀಡಿ ಗ್ರಂಥಗಳ ನೆರವನ್ನು ಒದಗಿಸಿದ ಡಾ. ಪ್ರಕಾಶ. ಖಾಡೆ ಹಾಗೂ ಪ್ರಾಂಶುಪಾಲರಾದ ಶ್ರೀ.ವಿಜಯಕುಮಾರ ಕಟಗಿಹಳ್ಳಿಮಠ ಮತ್ತು ಶ್ರೀ.ವಾಯ್.ವಾಯ್.ಬೆಳ್ಳೆರಿ ಅವರಿಗೆ, ಪಿಎಚ್.ಡಿ ಅಧ್ಯಯನಕ್ಕೆ ಪ್ರೋತ್ಸಾಹಿಸಿದ ನನ್ನ ತಾಯಿ ಅನ್ನಪೂರ್ಣ ಮುಂಡಗನೂರ ಹಾಗೂ ಕ್ಷೇತ್ರ ಕಾರ್ಯದಲ್ಲಿ ಬೆಂಬಲವಾಗಿ ನಿಂತಿದ್ದ ಹಾಗೂ ಅಕಾಲದಲ್ಲಿ ನಮ್ಮನ್ನಗಲಿದ ಪ್ರೀತಿಯ ತಮ್ಮ ಮಲ್ಲಿಕಾರ್ಜುನ ಮುಂಡಗನೂರ ಇವನನನ್ನು ನೆನಪಿಸಿಕೊಳ್ಳದೇ ಇರಲಾರೆ.

ಪಿಎಚ್.ಡಿ ನೋಂದಣಿಯಿಂದ ಅಂತಿಮ ಹಂತದವರೆಗೆ ಸದಾ ಪ್ರೋತ್ಸಾಸ ನೀಡಿದ ಪತಿ ಮಹಾಂತೇಶ ಅವರಿಗೆ, ನನ್ನ ಮಗ ಸೂರಜನಿಗೆ, ಈ ಅಧ್ಯಯನದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ ಮಾಡಿದ ಎಲ್ಲರಿಗೂ ಪ್ರೀತಿ ಪೂರ್ವಕ ನೆನಕೆಗಳು.

ಶ್ರೀಮತಿ ಮೀನಾಕ್ಷಿ.ಎಸ್.ಮುಂಡಗನೂರ.

## ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

## ೧.೧ ಪೀಠಿಕೆ

"ಜನವಾಣಿಯೇ ಜನಾರ್ಧನ ವಾಣಿ" ಎಂಬಂತೆ ಯಾವುದೇ ಒಂದು ಭಾಷೆಗೆ ಹೆಚ್ಚಿನ ಸೊಬಗು, ಸೌಂದರ್ಯ, ಅರ್ಥ ಪ್ರಾಪ್ತವಾಗುವುದು ಆ ನಾಡಿನ ಮೌಖಿಕ ಪರಂಪರೆಯಿಂದ, ಜಾನಪದ ಮಾನವನ ಬದುಕಿನ ಅಪ್ಪಟ ಸಂಸ್ಕೃತಿಯ ಪ್ರತಿರೂಪವಾಗಿದೆ. ಒಂದು ಸಂಸ್ಕೃತಿ ಮತ್ತು ಅದರ ಹಿನ್ನೆಲೆ ತಿಳಿಯಬೇಕಾದರೆ ಜನಪದರ ವಿವಿಧ ರಂಗಗಳ ಮಜಲುಗಳನ್ನು ನಾವು ನೋಡಲೇಬೇಕು. ಆ ಮಜಲುಗಳನ್ನು ಕಾಣಬೇಕಾದರೆ ಹಲವಾರು ಜನಸಮುದಾಯಗಳಲ್ಲಿ ತಲೆತಲಾಂತರದಿಂದ ಬೆಳೆದು ಬಂದ ಕಲೆ, ಆಚಾರ, ವಿಚಾರ, ಸಂಪ್ರದಾಯಗಳ ಅರಿವು ಅಗತ್ಯವಾಗುತ್ತದೆ. ಆ ಜನಸಮುದಾಯಗಳ ಒಡಲಿನಲ್ಲಿ ಸಂಸ್ಕೃತಿಯ ಕುರುಹುಗಳನ್ನು ಕಾಣುತ್ತೇವೆ. ಈ ನಿಟ್ಟಿನಲ್ಲಿ ಸಮುದಾಯಗಳ ಅಧ್ಯಯನ ತುಂಬಾ ಅವಶ್ಯವಾಗಿದೆ. ಸಂಸ್ಕೃತಿ ಎನ್ನುವುದು ಮಾನವ ಸಮುದಾಯದ ಸಮಷ್ಟಿ ಸೃಷ್ಟಿಯಾಗಿದೆ. ಇದು ಸಾಮಾಜಿಕ ಜೀವನದ ಸಂಕೇತ, ಭಾರತೀಯ ಸಂಸ್ಕೃತಿಯ ತಾಯಿಬೇರು. ಅದು ಜನಸಾಮಾನ್ಯರ ಬದುಕಿನ ಶೃತಿ, ಸ್ಮೃತಿಯಾಗಿದೆ. ಇಂಥಹ ಜನಪದ ಸಾಹಿತ್ಯ ಮತ್ತು ಕಲೆಯನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡ ಅನೇಕ ಸಮುದಾಯಗಳು ನಾಡಿನ ತುಂಬ ಕಂಡುಬರುತ್ತವೆ. ಭಾರತದಲ್ಲಿ ಕಂಡು ಬರುವ ಅನೇಕ ಸಮುದಾಯಗಳು ಒಂದಕ್ಕಿಂತ ಒಂದು ಭಿನ್ನವಾಗಿವೆ. ವಿಶಿಷ್ಟವಾದ ಭಾಷೆ, ಸಂಸ್ಕೃತಿ, ಆಚರಣೆ, ಪರಂಪರೆಗಳನ್ನು ಅವರಲ್ಲಿ ಕಾಣುತ್ತೇವೆ. ಪ್ರತಿಯೊಂದು ಸಮುದಾಯ ತನ್ನ ಸಂಸ್ಕೃತಿಗೆ ಅನುಗುಣವಾಗಿ ಆಚಾರ, ವಿಚಾರ, ಸಂಪ್ರದಾಯ, ದೈವೀ ಆರಾಧನೆ, ಆಹಾರ, ರೀತಿ, ನೀತಿ, ವೇಷ ಭೂಷಣಗಳು, ಮುಂತಾದವುಗಳಲ್ಲಿ ಭಿನ್ನತೆ ಕಂಡುಬರುತ್ತದೆ. ಇಂತಹ ಸಮುದಾಯಗಳ ಅಧ್ಯಯನವನ್ನು ಹಲವಾರು ಮಾನವ ಶಾಸ್ತ್ರಜ್ಞರು, ಜಾನಪದ ತಜ್ಞರು, ಸಮಾಜಶಾಸ್ತ್ರಜ್ಞರು ಮಾಡುತ್ತಾ ಬಂದಿದ್ದಾರೆ.

ಗೊಂದಲಿಗರು ಅಲೆಮಾರಿ ಮತ್ತು ಅರೆ ಅಲೆಮಾರಿ ಸಮುದಾಯದವರು. ಅನೇಕ ವಿದ್ವಾಂಸರು ಗೊಂದಲಿಗರನ್ನು ಕನ್ನಡದವರೆಂದು ಹೇಳುತ್ತಾರೆ. "ರೇಣುಕಾ ಮಹಾತ್ಮೆಯಲ್ಲಿ ಈ

ಗೊಂದಲಿ ನೃತ್ಯವು ಕರ್ನಾಟಕದಲ್ಲಿ ಹುಟ್ಟಿದ್ದು, ಗೊಂದಲಿಗರು ಕನ್ನಡದವರೇ ಎಂದು ಹೇಳಲಾಗಿದೆ. "ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್‌ನಲ್ಲಿ ರೇಣುಕಾ ಮತ್ತು ಜಮದಗ್ನಿ ಗೊಂದಲಿಗರ ಮೂಲ ಪುರುಷರು ಎಂಬ ಮಾಹಿತಿ ದೊರೆಯುತ್ತದೆ." (ಎಡ್ಗರ್ ಥರಸ್ಟನ್ ಮತ್ತು ಕೆ. ರಂಗಾಚಾರಿಯವರ "Castes and Tribes at Southern India Vol III; ೨೪೩)

ಡಾ. ನಿಂಗಣ್ಣ ಸಣ್ಣಕ್ಕಿಯವರು, ಗೊಂದಲಿಗರು ಕನ್ನಡ ನೆಲದಲ್ಲಿ ಅತೀ ಪ್ರಾಚೀನ ಕಾಲದಿಂದಲೂ ನೆಲೆಸಿದ ಒಂದು ಬುಡಕಟ್ಟು ಸಮುದಾಯ, ಇವರು ಮಾತೃ ಮೂಲದವರು ಎಂದು ಹೇಳುತ್ತಾರೆ. ಡಾ. ಗದ್ದಿಗಿಮಠರು "ಗೊಂದಲಿಗರ ಪ್ರಾಚೀನತೆಯನ್ನು ೭-೮ ನೇ ಶತಮಾನದಷ್ಟು ಹಿಂದೆಯೇ ಕನ್ನಡ ನೆಲದಲ್ಲಿ ಇದ್ದರು ಎಂದು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಜ್ಯೋತಿ ಹೊಸೂರವರು ಗೊಂದಲಿಗರನ್ನು ಕನ್ನಡ ಮೂಲದವರೆಂದು ನಿರೂಪಿಸಿದ್ದಾರೆ. ಗೊಂದಲ ಶಬ್ಧದ ಹಿನ್ನೆಲೆಯ ಮೂಲಕ ತಮ್ಮ ವಾದ ಮಂಡಿಸುತ್ತಾರೆ. ೯-೧೦ ಶತಮಾನದಲ್ಲಿ ರಚನೆಯಾದ ಕನ್ನಡ ಕಾವ್ಯಗಳಲ್ಲಿ 'ಗೊಂದಲ' ಶಬ್ಧವು ಸಮೂಹ, ಸಮೂಹ ಕುಣಿತ ಎನ್ನುವ ಅರ್ಥದಲ್ಲಿ ವಿಫುಲವಾಗಿ ಪ್ರಯೋಗವಾಗಿದ್ದು ಕಂಡು ಬರುತ್ತದೆ."[೧] ಗೊಂದಲಿಗರ ಪ್ರಾಚೀನತೆಯನ್ನು ಗಮನಿಸಿದಾಗ ಅವರು ಅಲೆಮಾರಿತನದ ಬದುಕಿನಲ್ಲಿಯೇ ತಮ್ಮ ಪಾರಂಪರಿಕ ವೃತ್ತಿಯಲ್ಲಿ ವಿಶಿಷ್ಟ ಕಲೆಯನ್ನು ಹೊಂದಿದ ವೃತ್ತಿಗಾಯಕರಾಗಿದ್ದರು ಎಂದು ಹೇಳಬಹುದು.

ವೃತ್ತಿಗಾಯಕರಾದ ಗೊಂದಲಿಗರು ವಾಕ್ಸಂಪ್ರದಾಯವನ್ನು ವಿಶಿಷ್ಟ ರೀತಿಯಲ್ಲಿ ನಡೆಸಿಕೊಂಡು ಬಂದಿದ್ದಾರೆ. ಅವರ ಸಾಹಿತ್ಯ ಸಾಮಾಜಿಕ ಬದುಕನ್ನು ಕಟ್ಟಿಕೊಡುವುದಾಗಿದೆ. ಗೊಂದಲಿಗರು ಪ್ರಾದೇಶಿಕವಾಗಿ ಆ ಸ್ಥಳೀಯ ಭಾಷೆಯನ್ನು ಬಲ್ಲವರಾಗಿದ್ದಾರೆ. ಗೊಂದಲದ ಕಲಾವಿದರನ್ನು ವಿಭಿನ್ನ ಭಾಷಾ ಪಂಡಿತರೆಂದು ಕರೆಯಬಹುದು. ಜನಸಾಮಾನ್ಯರ ಒಡನಾಟದ ಸಂಬಂಧವನ್ನು ಇಟ್ಟುಕೊಂಡ ಇವರು, ಕಲಾ ಸಂಸ್ಕೃತಿಯ ಸಂಪತ್ತನ್ನೇ ತಮ್ಮ ಕಥೆಗಳಲ್ಲಿ ತುಂಬಿದ್ದಾರೆ. ಕವಿರಾಜ ಮಾರ್ಗಕಾರ "ನಾಳ್ನುಡಿಯ ಬೆಡಂಗು" ಎನ್ನುವಂತೆ ಜನಪದರು ಬದುಕಿನ ವಾಸ್ತವ ಸಾರವನ್ನು ತಮ್ಮ ಕಥೋಪ ಸಾಗರದಲ್ಲಿ ಕ್ರಿಯಾ ಶೀಲತೆಯನ್ನು ತುಂಬುತ್ತಾ ಬಂದಿದ್ದಾರೆ.

ಗೊಂದಲಿಗರ ಚರಿತ್ರೆ, ಸಂಸ್ಕೃತಿ ಮತ್ತು ಪರಂಪರೆ ಇತರೆ ಸಮುದಾಯಗಳಿಗಿಂತ ವಿಶಿಷ್ಟ ರೀತಿಯಲ್ಲಿದೆ. ಶಕ್ತಿ ದೇವತೆಯ ಆರಾಧಕರಾದ ಇವರು ಧಾರ್ಮಿಕ ಹಾಗೂ ಲೌಕಿಕ ವೃತ್ತಿಗಾಯಕರಾಗಿರುವುದು ಕಂಡು ಬರುತ್ತದೆ. ಧಾರ್ಮಿಕ ಆಚರಣೆಯಾದ ಗೊಂದಳವನ್ನು ಹಾಕುವುದು ಇವರ ಮೂಲವೃತ್ತಿಯಾಗಿದೆ. ಗೊಂದಳದ ಆಚರಣೆಯಲ್ಲಿ ಅಂಬಾಭವಾನಿಯ ಆರಾಧನೆಯ ಜೊತೆಗೆ, ಕಥೆಗಳನ್ನು ಹೇಳುವುದರ ಮೂಲಕ ಒಂದು ಸಾಹಿತ್ಯಿಕ ಪರಂಪರೆಯನ್ನೇ ಬೆಳೆಸಿಕೊಂಡು ಬಂದಿದ್ದಾರೆ. ಇವರ ಸಾಹಿತ್ಯದಲ್ಲಿ ಅಗಾಧವಾದ ಸಾಂಸ್ಕೃತಿಕ ಭಂಡಾರವೇ ಇದೆ. ನೀತಿಯ ಹರಿವು, ಬೋಧನೆಯ ಶೈಲಿ, ಸಂಸ್ಕೃತಿಯ ಉಳಿವು, ಸಾಮಾಜಿಕ ಅರಿವು, ಪೌರಾಣಿಕ ಸತ್ವ, ಇತಿಹಾಸದ ತಿರುಳು, ಜನಪದ ಸೊಗಡು, ಹೀಗೆ ಅನೇಕ ಅಂಶಗಳನ್ನು ಇವರ ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. 'ಗೊಂದಲಿಗರು ತಮ್ಮ ಗೊಂದಲ ಪ್ರದರ್ಶನಕ್ಕೆ

ಬನ್ನಿಮಹಾಂಕಾಳಿ ಮತ್ತು ರೇಣುಕಾ ಮಹಾತ್ಮೆಯಂತಹ ಭಕ್ತಿ ಪ್ರಧಾನ ಕಥೆಗಳನ್ನು ಆಯ್ದುಕೊಳ್ಳುವುದರ ಜೊತೆಗೆ ಜಯರಾಣಿ, ಬಾಳಾವತಿ, ರಸ್ತಾಳರಾಜ, ಶೀಲಾವತಿ, ಬಾಳಭಿಕ್ಷುಕ, ಅರಣ್ಯಕುಮಾರ, ಮುಂತಾದ ನೀತಿಪರ ಕಥೆಗಳನ್ನು ಹೇಳುವುದುಂಟು. ಗೊಂದಲದ ಆಟಗಳಲ್ಲಿ ದೇವಿಸ್ತುತಿ ಮತ್ತು ಕುಣಿತಗಳಿಗೆ ಪ್ರಾಧಾನ್ಯತೆ ಹೆಚ್ಚು. ಆಟದ ಮಧ್ಯೆ ಉಪಕಥೆ, ತತ್ವಪದಗಳು ಬೇಸರ ಯಾಂತ್ರಿಕತೆಯನ್ನು ನೀಗಿ ಮನರಂಜನೆಯ ಮೂಲಕ ನಡುರಾತ್ರಿ ಕಳೆಯುವುದಕ್ಕೆ ನೆರವಾಗುತ್ತವೆ.'[2] ಹೀಗೆ ಗೊಂದಲಿಗರ ಕಥನ ಸಾಹಿತ್ಯವು ದೈವಿ ಆರಾಧನೆ, ಸಾಮಾಜಿಕ ವಿಡಂಬಣೆಯ ಮೂಲಕ ಕೆಲ ಧಾರ್ಮಿಕ ಆಚರಣೆಗಳಲ್ಲಿ ಪ್ರದರ್ಶನಗೊಳ್ಳುತ್ತಿರುವುದು ಕಂಡು ಬರುತ್ತದೆ.

'ಗೊಂದಲಿಗರ ಕಥನ ಸಾಹಿತ್ಯದ ಪ್ರಸಾರತೆಯನ್ನು ನೋಡಿದಾಗ ಅದು ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿರದೆ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದ ಅನೇಕ ಪ್ರದೇಶಗಳಲ್ಲಿ ಗೊಂದಲಿಗರು ತಮ್ಮ ಗೊಂದಲ ಕಾರ್ಯಗಳನ್ನು ನಡೆಸಿಕೊಡುವುದು ಕಂಡು ಬರುತ್ತದೆ ಎಂದು ಮುದೇನೂರ ಸಂಗಣ್ಣವರು ತಮ್ಮ 'ಗೊಂದಲಿಗರ ದೇವೇಂದ್ರಪ್ಪನ ಆಟಗಳು' ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. ಅಂದರೆ ಅವರ ಸಾಹಿತ್ಯದ ಒಳಹರಿವು ಹಾಗೂ ಅವರ ಧಾರ್ಮಿಕ ಆಚರಣೆಯು ನಮ್ಮ ಪ್ರಾಚೀನ ಸಾಹಿತ್ಯವನ್ನು ಹೊಕ್ಕು, ನಾಡಿನ ಹಲವು ಸಮುದಾಯಗಳಲ್ಲಿ ಮೈದಳೆದು, ಹಲವು ಭಾಷೆಗಳ ಸೊಗಡನ್ನು ತುಂಬಿಕೊಂಡು, ಒಂದು ಇತಿಹಾಸವನ್ನೇ ಸೃಷ್ಟಿಮಾಡಿದೆ ಎಂದು ಹೇಳಬಹುದು. ಗೊಂದಲಿಗರು ಆಯಾ ಪ್ರಾದೇಶಿಕ ಭಾಷೆಯಲ್ಲಿಯೇ ದೇವತಾ ಆರಾಧನೆಯನ್ನು ಮಾಡುತ್ತ, ಕಾಲಕ್ಕೆ ತಕ್ಕಂತೆ ಕಥಾ ಸಾರವನ್ನು ಬದಲಾವಣೆ ಮಾಡುತ್ತ ಪೌರಾಣಿಕ, ನೀತಿ ಕಥೆಗಳ ಜೊತೆಗೆ ವಾಸ್ತವಿಕ ಸ್ಥಿತಿಯನ್ನು ತಿಳಿಸುವ ನೀತಿ ಬೋಧಕರಾಗಿದ್ದಾರೆ ಎಂದು ಹೇಳಬಹುದು.

ಗೊಂದಲಿಗರು ತಮ್ಮ ಕಲೆ, ಸಾಹಿತ್ಯದ ಮೂಲಕ ಜನರನ್ನು ಎಚ್ಚರಿಸುವ, ನೀತಿ ಹೇಳುವುದಕ್ಕಾಗಿ ಹಲವಾರು ಜನಪದ ಕಥೆ, ಹಾಡುಗಳನ್ನು ಬಳಸಿಕೊಂಡು ಆ ಮೂಲಕ ಜನರನ್ನು ಜಾಗೃತಗೊಳಿಸುವುದನ್ನು ಕಾಣುತ್ತೇವೆ. ವಿಶೇಷವಾಗಿ ಅವರ ಹಾಡುಗಳ ವಸ್ತು ದೇವಿ ಆರಾಧನೆ, ರಾಜರ ಕಥೆ, ನೀತಿಪದ, ಬಂಜೆಯ ಬವಣೆ, ಮಲತಾಯಿಯ ಮತ್ಸರ, ಅತಿಮಾನುಷ ಶಕ್ತಿಗಳು, ಮಾಟಮಂತ್ರ, ಮುಂತಾದವು.

ಗೊಂದಲಿಗರ ಕಥನ ರೂಪದ ಸಾಹಿತ್ಯವನ್ನು ಅಧ್ಯಯನ ಮಾಡುವುದರ ಮೂಲಕ ಅವರಿಂದ ಮರೆಯಾಗುತ್ತಿರುವ ಸಾಹಿತ್ಯ, ಇತಿಹಾಸ, ಸಂಸ್ಕೃತಿಯನ್ನು ಜನರಿಗೆ ಮುಟ್ಟಿಸುವ ಕಾರ್ಯ ನಡೆಯಬೇಕಾಗಿದೆ. ಗೊಂದಲಿಗರ ಕಥೆಯ ನಿರೂಪಣಾ ಶೈಲಿ ತುಂಬಾ ಸೊಗಸಾಗಿರುತ್ತದೆ. ಹಾಡು, ಸಂಭಾಷಣೆ, ಹಾಗೂ ಉಪಕಥೆಗಳನ್ನು ಹೇಳುವುದರ ಮೂಲಕ ಪ್ರೇಕ್ಷಕರ ಮನಸ್ಸನ್ನು ಆಕರ್ಷಿಸುವುದು ಅವರ ಕಥನ ಶೈಲಿಯಲ್ಲಿ ಕಂಡು ಬರುತ್ತದೆ. ಪ್ರೇಕ್ಷಕರು

ಆ ಘಟನೆ ತನ್ನ ಮುಂದೆಯೇ ನಡೆಯುತ್ತಿದೆಯೋ ಏನೋ ಎಂಬಂತೆ ಭಾವೋದ್ವೇಗಕ್ಕೆ ಒಳಗಾಗುತ್ತಾರೆ. ಗೊಂದಲಿಗರು ಪ್ರೇಕ್ಷಕರನ್ನು ಕಲ್ಪನಾ ವಿಲಾಸಕ್ಕೆ ಕರೆದುಕೊಂಡು ಹೋಗುವ ಪ್ರಯತ್ನ ಮಾಡುತ್ತಿರುತ್ತಾರೆ.

ಗೊಂದಲಿಗರು ವೃತ್ತಿಗಾಯಕರಲ್ಲಿ ಅತ್ಯಂತ ಆಕರ್ಷಣೆಯವಾದ ಸಾಹಿತ್ಯವನ್ನು ತುಂಬಿಕೊಂಡವರು. ಸಂಪ್ರದಾಯಿಕ ವೃತ್ತಿಯಿಂದಲೇ ಜೀವನ ಸಾಗಿಸುವ ಗೊಂದಲಿಗರ ಸಾವಿರಾರು ಅಲೆಮಾರಿ ಕುಟುಂಬಗಳನ್ನು ಕರ್ನಾಟಕದ ಎಲ್ಲ ಭಾಗಗಳಲ್ಲಿ ಕಾಣುತ್ತೇವೆ. ಗೊಂದಲಿಗರ ಮೂಲ ಉದ್ದೇಶ ದೈವಿ ಕಥೆ ಹೇಳುವುದಾದರೂ ಅದು ಹಾಡಿನ ಮೂಲಕ ನಿರೂಪಿಸಲ್ಪಡುವುದೇ ಅದರ ವೈಶಿಷ್ಟ್ಯತೆ. “ಜಾನಪದದ ಇತಿಹಾಸದ ಪರಂಪರೆಯನ್ನು ಗಮನಿಸಿದರೆ ವಯೋಮಾನದ ದೃಷ್ಟಿಯಿಂದ ಮೊದಲು ಕಥೆ ನಂತರ ಕಥನಕಾವ್ಯ ಹುಟ್ಟಿರಬೇಕೆಂಬುದು ಸ್ಪಷ್ಟಪಡುತ್ತದೆ. ಭಾವಗೀತೆ–ಕಥೆ–ನಾಟಕ ಈ ಮೂರು ಪ್ರಕಾರಗಳ ಕೆಲವು ಗುಣಗಳನ್ನು ಮೈಗೂಡಿಸಿಕೊಂಡು ಈ ಕಥನ ಕಾವ್ಯ ಹುಟ್ಟಿರಬೇಕು.”[೩] ಇಂಥಹ ಭಾವ, ಕಥೆ, ನಾಟಕೀಯತೆಯ ಅಭಿವ್ಯಕ್ತಿ ಮೂರನ್ನು ಅಳವಡಿಸಿಕೊಂಡ ಗೊಂದಲಿಗರ ಕಥನ ಸಾಹಿತ್ಯವು, ಅತ್ಯಂತ ವಿಶಿಷ್ಟತೆಯಿಂದ ಕೂಡಿದೆ. ಮರೆಯಾಗುತ್ತಿರುವ ಗೊಂದಲಿಗರ ಕಥನ ಸಾಹಿತ್ಯದಲ್ಲಿಯ ಸಾಂಸ್ಕೃತಿಕ ಹಾಗೂ ಸಾಹಿತ್ಯ ಅಧ್ಯಯನ ಮಾಡುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಗೊಂದಲಿಗರ ಕಥನ ಶೈಲಿ, ಸ್ತುತಿ ಪದ್ಯಗಳು, ಸೃಷ್ಟಿ ಪುರಾಣಗಳು, ಪೌರಾಣಿಕ ಮತ್ತು ಐತಿಹಾಸಿಕ ಕಥೆಗಳು, ಸಾಮಾಜಿಕ ನೀತಿಕಥೆಗಳು, ರಮ್ಯಕಥೆಗಳು, ಮನೋರಂಜನ ಕಥೆಗಳು, ಉಪಕಥೆಗಳು, ದೈವ ಮತ್ತು ಧರ್ಮದ ಆರಾಧನೆ, ಮಾತೃದೇವತೆಗಳು, ಪಿತೃದೇವತೆಗಳು, ಹರಕೆಪದಗಳು, ಜೀವಾತ್ಮ ಪರಮಾತ್ಮ, ಬಂಜೆತನ, ಮಲತಾಯಿ ಧೋರಣೆ, ಪಾತಿವೃತ್ಯ, ಬಲಿದಾನ, ಹಾಸ್ಯ, ವಿಡಂಬನೆ, ಗಾದೆಮಾತುಗಳು, ನುಡಿಗಟ್ಟುಗಳು, ಭಾಷೆ ನಾಣ್ಣುಡಿಗಳು, ಮುಂತಾದ ಅಂಶಗಳನ್ನು ಅವರ ಕಥಾಸಾರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಗೊಂದಲಿಗರು ತಮ್ಮ ಬದುಕಿನ ಹಿನ್ನೆಲೆಯಲ್ಲಿ ಕಥನ ಕಾವ್ಯಗಳನ್ನು ಕಟ್ಟಿಕೊಟ್ಟಿದ್ದಾರೆ. ಹಾಗೂ ಸಮಾಜದ ಹಿತಕಾಯುವ ಇವರ ವೃತ್ತಿ ಬದುಕಿನ ಸ್ಥಿತ್ಯಂತರಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

### ೧.೨ ಅಧ್ಯಯನದ ಉದ್ದೇಶ

ಗೊಂದಲಿಗರು ನಾಡಿನಾದ್ಯಂತ ತಮ್ಮ ಕಲಾ ವೃತ್ತಿಯನ್ನು ವಿಸ್ತರಿಸಿಕೊಂಡಿದ್ದಾರೆ. ಧಾರ್ಮಿಕ ಹಾಗೂ ಸಾಮಾಜಿಕ ಪರಿಸರದಲ್ಲಿ ಗೊಂದಲಿಗರು ಒಂದು ಘಟ್ಟದಲ್ಲಿ ಪೂಜ್ಯ ಸ್ಥಾನ ಪಡೆದುಕೊಂಡಿದ್ದರು. ಗೊಂದಲ ಕಾರ್ಯಗಳನ್ನು ಮಾಡುವುದರ ಮೂಲಕ ಇವರು ಸಮಾಜದ ಕಳಕಳಿಯನ್ನು ತೋರುವ ಧರ್ಮೋಪಾಸಕರಾಗಿದ್ದರು. ಇವರ ಕಥೆಗಳಲ್ಲಿ ನೀತಿ ಪ್ರಧಾನವಾದ

ಅಂಶಗಳೇ ಹೆಚ್ಚು ಜನಪ್ರಿಯವಾದವು. ಮೌಖಿಕ ಪರಂಪರೆಯಲ್ಲಿಯೇ ಕಥನ ಕಾವ್ಯಗಳನ್ನು ಹೇಳುತ್ತ, ತಮ್ಮ ಬದುಕನ್ನು ಕಟ್ಟಿಕೊಂಡು ಬಂದಿರುವ ಗೊಂದಲಿಗರ ಈ ವೃತ್ತಿ ಆಧುನಿಕತೆಯಲ್ಲಿ ಹೇಗೆ ತನ್ನ ಅಸ್ಥಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಮತ್ತು ಅವರ ಕಥನಗಳು ಮಾನವನ ಬದುಕಿಗೆ ಹೇಗೆ ದಾರಿದೀಪಗಳಾಗಿವೆ, ಆ ಕಥನ ಕಾವ್ಯಗಳಲ್ಲಿ ಅಡಗಿರುವ ಮಾನವೀಯ ಮೌಲ್ಯಗಳು ಎಂತಹವು ಎಂಬುದನ್ನು ಅಧ್ಯಯನ ಮಾಡುವ ಉದ್ದೇಶವನ್ನು ಈ ಪ್ರಬಂಧದಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

೧. ಗೊಂದಲಿಗರ ಕಥನ ಸಾಹಿತ್ಯದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಬದುಕು ಹೇಗೆ ರೂಪ ಪಡೆದುಕೊಂಡಿದೆ ಎಂಬುದನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

೨. ಗೊಂದಲ ಸಾಹಿತ್ಯದ ಪ್ರಾಚೀನತೆ ಕಂಡುಕೊಳ್ಳುವುದು.

೩. ಗೊಂದಲಿಗರ ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ಅವರ ಬದುಕಿನ ಸ್ಥಿತ್ಯಂತರಗಳನ್ನು ಗುರುತಿಸುವುದು.

೪. ಗೊಂದಲಿಗರ ಕಥನಗಳಲ್ಲಿ ಕಂಡು ಬರುವ ಮಹಿಳೆಯರ ಬದುಕನ್ನು ಕಂಡುಕೊಳ್ಳುವುದು.

೫. ಗೊಂದಲಿಗರ ದೈವಭಕ್ತಿ ಆರಾಧನಾ ಪರಂಪರೆಯ ಹಿನ್ನೆಲೆಯಲ್ಲಿ ಅವರ ಸಾಂಸ್ಕೃತಿಕ ಬದುಕನ್ನು ಅರ್ಥೈಸಿಕೊಳ್ಳುವುದು.

೬. ಜನಪದ ಪದ್ಯ ಮತ್ತು ಕಥಾ ಸಾಹಿತ್ಯ ಗೊಂದಲಿಗರ ಕಥನಗಳ ಮೇಲೆ ಹೇಗೆ ಪ್ರಭಾವ ಬೀರಿವೆ ಎಂಬುದನ್ನು ಕಂಡುಕೊಳ್ಳುವುದು.

೭. ಗೊಂದಲಿಗರ ಕಥನ ಶೈಲಿ ಹಾಗೂ ಪ್ರದರ್ಶನದಲ್ಲಿಯ ಕಲಾವಂತಿಕೆಯನ್ನು ಅರ್ಥೈಸುವುದು.

೮. ಗೊಂದಲ ವೃತ್ತಿಯ ಕಲಾವಿದರ ಬದುಕಿನ ಸ್ಥಿತ್ಯಂತರಗಳನ್ನು ಹಾಗೂ ಆಧುನಿಕತೆಯ ಸಂದರ್ಭದಲ್ಲಿ ಅವರ ವೃತ್ತಿಯ ಸ್ಥಿತಿಗತಿಗಳನ್ನು ಕಂಡುಕೊಳ್ಳುವುದು.

**೧.೩. ಅಧ್ಯಯನದ ವ್ಯಾಪ್ತಿ.**

ಕರ್ನಾಟಕದುದ್ದಕ್ಕೂ ವ್ಯಾಪಿಸಿಕೊಂಡಿರುವ ಗೊಂದಲಿಗರು ಹೆಚ್ಚಾಗಿ ಉತ್ತರ ಕರ್ನಾಟಕದ ಬೆಳಗಾವಿ, ಧಾರವಾಡ, ವಿಜಯಪುರ, ಬಾಗಲಕೋಟ, ಗದಗ, ರಾಯಬಾಗ, ಜಮಖಂಡಿ, ಮುಂತಾದ ಪ್ರದೇಶಗಳಲ್ಲಿ ಕಂಡು ಬರುತ್ತಾರೆ. (ಪ್ರಸ್ತುತ ಅಧ್ಯಯನಕ್ಕೆ ಉತ್ತರ ಕರ್ನಾಟಕವನ್ನು ಕೇಂದ್ರವಾಗಿಟ್ಟುಕೊಂಡು ಮಹಾರಾಷ್ಟ್ರ ಹಾಗೂ ಕರ್ನಾಟಕದ ಗಡಿಭಾಗಗಳಲ್ಲಿ ಪ್ರಚಲಿತವಿರುವ ಗೊಂದಲಿಗರ ಕಥೆಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.)

## ೧.೪. ಅಧ್ಯಯನದ ವಿಧಾನಗಳು

ಗೊಂದಲಿಗರ ಬದುಕು ಹಾಗೂ ಅವರ ಕಥನ ಕಾವ್ಯಗಳ ಸಂಗ್ರಹಣೆ ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಆದರೆ ಗೊಂದಲದ ಪ್ರದರ್ಶನ ಮತ್ತು ಅವರ ಕಥನ ಕಾವ್ಯಗಳ ಕುರಿತು ಅಧ್ಯಯನಗಳು ತೀರ ಕಡಿಮೆ ಎಂದು ಹೇಳಬಹುದು. ನನ್ನ ಈ ಅಧ್ಯಯನದಲ್ಲಿ ಗೊಂದಲಿಗರು ಪ್ರದರ್ಶಿಸುವ ಕಲೆ ಮತ್ತು ಅವರ ಸಾಹಿತ್ಯದಲ್ಲಿ ಕಂಡು ಬರುವ ಸಂಸ್ಕೃತಿಯನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುತ್ತಿರುವುದರಿಂದ ಪ್ರಕಟವಾದ ಗೊಂದಲಿಗರ ಕಥನ ಸಾಹಿತ್ಯ ನನಗೆ ಪ್ರಮುಖ ಆಕರ ಸಾಮಗ್ರಿಗಳಾಗಿವೆ. ಜೊತೆಗೆ ಗೊಂದಲಿಗರ ಅಪ್ರಕಟಿತ ಕಥನ ಸಾಹಿತ್ಯವನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

ಗೊಂದಲಿಗರ ಕಥನ ಸಾಹಿತ್ಯದ ಅಧ್ಯಯನಕ್ಕೆ ಈ ಕೆಳಗೆ ಸೂಚಿಸಿರುವ ವಿಧಾನಗಳನ್ನು ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಪ್ರಶ್ನಾವಳಿ ವಿಧಾನ.**

ಪ್ರಸ್ತುತ ಅಧ್ಯಯನಕ್ಕೆ ಪ್ರಶ್ನಾವಳಿಯನ್ನು ತಯಾರಿಸಿ ಕ್ಷೇತ್ರ ಕಾರ್ಯದಲ್ಲಿ ಪ್ರಶ್ನಾವಳಿ ಸಿದ್ದಪಡಿಸಿ ಅನೇಕ ಹಿರಿ ಕಿರಿಯ ಕಲಾವಿದರನ್ನು ಭೇಟಿ ಮಾಡಿ ಸಂದರ್ಶನದ ಮೂಲಕ ಮಾಹಿತಿ ಪಡೆಯಲಾಗಿದೆ. ವೈಜ್ಞಾನಿಕ ಅಧ್ಯಯನಕ್ಕಾಗಿ ಆಡಿಯೋ, ವಿಡಿಯೋ, ಧ್ವನಿಮುದ್ರಣ ಮಾಡಿಕೊಳ್ಳಲಾಗಿದೆ. ಹಾಗೂ ಛಾಯಾಚಿತ್ರಗಳನ್ನು ತೆಗೆಯಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಎಲ್ಲ ಮಾಹಿತಿಗಳನ್ನು ಒಂದು ಕ್ರಮಬದ್ಧವಾದ ಅಧ್ಯಯನಕ್ಕೆ ಒಳಪಡಿಸಿಕೊಂಡು ವಿಶ್ಲೇಷಣೆಗೆ ಮಾಡಲಾಗಿದೆ.

**ಅವಲೋಕನ**

ಗೊಂದಲಿಗರು ಪ್ರದರ್ಶಿಸುವ ಗೊಂದಲ ಕಾರ್ಯಕ್ರಮಗಳನ್ನು ಅವಲೋಕಿಸುವುದರ ಜೊತೆಗೆ ಸ್ವತ: ಅದರಲ್ಲಿ ಭಾಗವಹಿಸಿ ಅಲ್ಲಿಯ ಪ್ರತಿಯೊಂದು ಆಚರಣೆ ಸಂಪ್ರದಾಯಗಳನ್ನು ಗಮನಿಸಿ ಅಲ್ಲಿಯ ಪ್ರತಿಯೊಂದು ಮಾಹಿತಿಯನ್ನು ಪ್ರಬಂಧದಲ್ಲಿ ಚರ್ಚಿಸಲಾಗಿದೆ.

**ಸಂದರ್ಶನ**

ಉತ್ತರ ಕರ್ನಾಟಕದ ಗಡಿಭಾಗಗಳಲ್ಲಿ ಹಾಗೂ ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿರುವ ಗೊಂದಲಿಗರನ್ನು ಸಂದರ್ಶಿಸಲಾಗಿದೆ. ಗೊಂದಲ ಕಾರ್ಯದ ಬಗ್ಗೆ ಅದು ಬೆಳೆದು ಬಂದ ಬಗೆ ಮತ್ತು ಅವರ ಪರಂಪರೆಯ ಬಗ್ಗೆ ಮಾಹಿತಿಯನ್ನು ಕಲೆ ಹಾಕಲಾಗಿದೆ ಮತ್ತು ಗೊಂದಲದ ಕಥೆಗಳನ್ನು ಸಂಗ್ರಹಿಸಿ ಆ ಎಲ್ಲ ಕಥೆಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಕ್ಷೇತ್ರದರ್ಶನ**

ಗೊಂದಲ ಕಾರ್ಯದಲ್ಲಿ ಆರಾಧಿಸುವ ಮಾತೃದೇವತೆಯರಾದ ತುಳಜಾಪುರದ ಅಂಬಾಭವಾನಿ, ಸವದತ್ತಿ ಎಲ್ಲಮ್ಮನ ಕ್ಷೇತ್ರ ದರ್ಶನ ಮಾಡುವುದರ ಮೂಲಕ ಅಲ್ಲಿ ಪೌರಾಣಿಕ

ಅಂಶಗಳನ್ನು ಸಂಗ್ರಹಿಸಲಾಗಿದೆ. ಗೊಂದಲಕ್ಕೆ ಸಂಬಂಧಿಸಿದ ಪೌರಾಣಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಗುರುತಿಸಿ ಅವುಗಳನ್ನು ಈ ಅಧ್ಯಯನದಲ್ಲಿ ಅಳವಡಿಸಲಾಗಿದೆ.

**ಚಾರಿತ್ರಿಕ ವಿಧಾನ**

ಗೊಂದಲಿಗರ ಸಮುದಾಯಕ್ಕೆ ತನ್ನದೇ ಆದ ಒಂದು ಚರಿತ್ರೆ ಇದೆ. ಅದು ಅವರ ಸಾಹಿತ್ಯ, ಚರಿತ್ರೆ, ಪುರಾಣಗಳಲ್ಲಿ ಕಂಡು ಬರುತ್ತದೆ. ಅದನ್ನು ಗಮನದಲ್ಲಿಟ್ಟುಕೊಂಡು ಗೊಂದಲಿಗರ ಪ್ರಾಚೀನತೆಯನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**೧.೫ ಅಧ್ಯಯನದ ಮಹತ್ವ ;**

ಗೊಂದಲಿಗರು ಗೊಂದಲದ ಪ್ರದರ್ಶನದ ಮೂಲಕ ಹೇಳುವ ಕಥೆ, ಲಾವಣಿ, ಕಥನವು ವಿಶಿಷ್ಟ ನಿರೂಪಣೆಯಿಂದ ಕೂಡಿದೆ ಹಾಗೂ ರೋಚಕವಾಗಿದೆ. ಗೊಂದಲಿಗರ ಕಥನ ಸಾಹಿತ್ಯದಲ್ಲಿ ಅವರ ಬದುಕಿನ ವಿವಿಧ ಮೌಲ್ಯಗಳಿವೆ. ಸಮಾಜವನ್ನು ತಿದ್ದುವ ಮತ್ತು ಸಮಾಜದಲ್ಲಿ ಮಾನವೀಯ ಸಂಬಂಧಗಳನ್ನು ಬೆಸೆಯುವ ಅನೇಕ ಮೌಲ್ಯಗಳಿವೆ ಮತ್ತು ಕರ್ನಾಟಕ ವೃತ್ತಿಗಾಯಕರು ಪರಂಪರಾನುಗತವಾಗಿ ಬೆಳೆದು ಬಂದ ಸಾಹಿತ್ಯದ ಸಂಪತ್ತನ್ನು ಹಾಗೇ ಕಾಯ್ದುಕೊಂಡು ಬಂದಿದ್ದಾರೆ. ಗೊಂದಲಿಗರು ಕಂಡುಕೊಂಡ ಈ ನಾಡಿನ ಚರಿತ್ರೆ, ಸಂಸ್ಕೃತಿ, ಆಚಾರ, ವಿಚಾರ, ಧರ್ಮ, ಸಮಾಜದರ್ಶನ ಮುಂತಾದ ಅನೇಕ ವಿಚಾರಗಳನ್ನು ತಮ್ಮ ಕಥನಗಳ ಮೂಲಕ ಅಭಿವ್ಯಕ್ತ ಪಡಿಸಿದ್ದಾರೆ. ತಾವು ಕಂಡುಕೊಂಡ ಸತ್ಯಗಳನ್ನು ಆಧುನಿಕ ಜಗತ್ತಿಗೆ ಪರಿಚಯಿಸುವಲ್ಲಿ ಸುದ್ದಿವಾಹಕರಾಗಿದ್ದಾರೆ. ಆಶುಕವಿಗಳಾದ ಗೊಂದಲಿಗರು ಸಂದರ್ಭ, ಸನ್ನಿವೇಶಕ್ಕೆ ತಕ್ಕಂತೆ ಪದ್ಯಗಳನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿದ್ದಾರೆ. ಗೊಂದಲ ಕಾರ್ಯದ ಸಂದರ್ಭದಲ್ಲಿ ಅವರು ಹೇಗೆ ಸಾಹಿತ್ಯವನ್ನು ಸೃಷ್ಟಿಸುತ್ತಾರೆ. ಅವರ ಕಲಾ ಕೌಶಲ್ಯ ಪ್ರದರ್ಶನದಲ್ಲಿ ಹೇಗೆ ಅಭಿವ್ಯಕ್ತಗೊಳ್ಳುತ್ತದೆ ಎಂಬುದನ್ನು ಈ ಅಧ್ಯಯನ ಮೂಲಕ ಹೊರ ಜಗತ್ತಿಗೆ ಪರಿಚಯಿಸುವ ಪ್ರಯತ್ನ ಮಾಡಲಾಗಿದೆ.

ಗೊಂದಲಿಗರ ಕಥೆಗಳು ಅಪ್ಪಟ ದೇಸಿಯ ಕೊಡುಗೆಗಳಾಗಿವೆ. ಗೊಂದಲಿಗರ ಕಥನ ಸಾಹಿತ್ಯ, ಆಚರಣೆ, ಸಂಪ್ರದಾಯಕ ಹಿನ್ನೆಲೆ, ಧಾರ್ಮಿಕ ಆರಾಧನೆ, ಮುಂತಾದ ಮೂಲಭೂತ ಆಶಯಗಳ ಹಿನ್ನೆಲೆಯಲ್ಲಿ ರೂಪಗೊಂಡಿವೆ. ಗೊಂದಲಿಗರು ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆಗಟ್ಟಿನೊಂದಿಗೆ ಯಾವ ರೀತಿ ಸ್ಪಂದಿಸುತ್ತಿದ್ದಾರೆ, ಅವರು ತಮ್ಮ ಮೂಲ ಪರಂಪರೆಯನ್ನು ಉಳಿಸಿಕೊಂಡು ಯಾವ ರೀತಿ ಮುಂದುವರೆಸಿಕೊಂಡು ಆಧುನಿಕ ಸಮಾಜದಲ್ಲಿ ಅವರು ತಮ್ಮ ಅಸ್ತಿತ್ವಗಳನ್ನು ಹೇಗೆ ಗುರುತಿಸಿಕೊಳ್ಳುತ್ತಿದ್ದಾರೆ ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಗೊಂದಲಿಗರ ಬದುಕು, ಸಂಪ್ರದಾಯ, ಕಥಾಲೋಕ, ಸಾಂಸ್ಕೃತಿಕ ಹಿನ್ನೆಲೆಯನ್ನು ಹಾಗೂ ಅವರ ಮಹತ್ವವನ್ನು ಅರಿಯಬೇಕಾಗಿದೆ. ಗೊಂದಲಿಗರನ್ನು ಕುರಿತು ಹಲವಾರು

ಅಧ್ಯಯನ ಗ್ರಂಥಗಳು ಪ್ರಕಟಗೊಂಡಿದ್ದರೂ ಆಧುನೀಕರಣ, ನಗರೀಕರಣ ವೈಜ್ಞಾನೀಕರಣ ಮತ್ತು ಜಾಗತೀಕರಣದ ಸಂದರ್ಭದಲ್ಲಿ ಗೊಂದಲಿಗರು ತಮ್ಮ ಸಂಪ್ರದಾಯಿಕ ಕಥಾಜೀವನ ವೃತ್ತಿಯನ್ನು ಎಷ್ಟರ ಮಟ್ಟಿಗೆ ಉಳಿಸಿಕೊಂಡು ಬರುತ್ತಿದ್ದಾರೆ ಹಾಗೂ ಉಳಿಸಿಕೊಳ್ಳುವಲ್ಲಿ ಅವರು ಎದುರಿಸುತ್ತಿರುವ ಸಮಸ್ಯೆಗಳೇನು ? ಎಂಬ ಪ್ರಮುಖ ಅಂಶಗಳನ್ನು ಈ ಅಧ್ಯಯನದ ಮೂಲಕ ಹೊರ ಜಗತ್ತಿಗೆ ತಿಳಿಸುವುದು ಅತ್ಯಂತ ಮಹತ್ವದ್ದು ಎಂದು ನಾನು ಭಾವಿಸಿದ್ದೇನೆ.

## ೧.೬. ಗೊಂದಲಿಗರನ್ನು ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನಗಳು

ಕರ್ನಾಟಕದುದ್ದಕ್ಕೂ ವ್ಯಾಪಿಸಿಕೊಂಡಿರುವ ಹಾಗೂ ಹೆಚ್ಚಾಗಿ ಉತ್ತರ ಕರ್ನಾಟಕದ ಬೆಳಗಾವಿ, ಧಾರವಾಡ, ವಿಜಯಪುರ, ಬಾಗಲಕೋಟ, ಬಳ್ಳಾರಿ, ಕೊಪ್ಪಳ, ರಾಯಚೂರ, ಗುಲಬುರ್ಗಾ, ಗದಗ, ಅಲ್ಲದೇ ಮೈಸೂರ, ಮಂಡ್ಯ, ಚಿತ್ರದುರ್ಗ, ಶಿವಮೊಗ್ಗ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿಯೂ ಪಸರಿಸಿಕೊಂಡಿರುವ ಅರೆಅಲೆಮಾರಿ ಸಮುದಾಯವೆಂದೇ ಗುರುತಿಸಲ್ಪಟ್ಟಿರುವ ಗೊಂದಲಿಗರು ತಮ್ಮದೇ ಆದ ಸಾಂಸ್ಕೃತಿಕ ಪರಂಪರೆಯಲ್ಲಿ ಜೀವನವನ್ನು ಕಳೆಯುತ್ತಿದ್ದಾರೆ. ಕಥೋಪಜೀವಿಗಳಾಗಿದ್ದ ಇವರನ್ನು ಅನೇಕ ವಿದ್ವಾಂಸರು ಧಾರ್ಮಿಕ ಹಾಗೂ ಲೌಕಿಕ ವೃತ್ತಿಯವರು ಎಂದು ಗುರುತಿಸಿದ್ದಾರೆ. ಇವರನ್ನು ಕುರಿತು ಇಲ್ಲಿಯವರೆಗೆ ಹಲವಾರು ಅಧ್ಯಯನಗಳು ನಡೆದಿರುವುದು ಕಂಡು ಬರುತ್ತದೆ. ಆದರೆ ಗೊಂದಲಿಗರ ಕಥನ ಸಾಹಿತ್ಯವನ್ನು ಗಮನದಲ್ಲಿಟ್ಟುಕೊಂಡು ಸಂಸ್ಕೃತಿಯನ್ನು ಅಧ್ಯಯನ ಮಾಡಿದ್ದು ಅಲ್ಪಸ್ವಲ್ಪ ಎಂದು ಹೇಳಬಹುದು. ಗೊಂದಲಿಗರ ಬಗ್ಗೆ ಈಗಾಗಲೇ ನಡೆದ ಅಧ್ಯಯನಗಳು ಉಪಯುಕ್ತ ಮಾಹಿತಿಯನ್ನು ನೀಡುವ ಆಕರಗಳಾಗಿವೆ. ವಿದ್ವಾಂಸರು, ಸಂಶೋಧಕರು ಬರೆದಂತಹ ಗ್ರಂಥಗಳು, ಹೇಳಿರುವ ಮಾಹಿತಿಗಳು ನನ್ನ ಅಧ್ಯಯನಕ್ಕೆ ಪೂರಕ ಮಾಹಿತಿ ನೀಡುವೆ.

**೧.ಎಡ್ಗರ್ ಥರಸ್ಟನ್ ಮತ್ತು ಕೆ. ರಂಗಾಚಾರಿಯವರ "Castes and Tribes at Southern India" Vol-೨, ೨೦೦೧, ಏಶಿಯನ್ ಎಜ್ಯುಕೇಶನಲ್ ಸರ್ವಿಸ್, ನ್ಯೂಡೆಲ್ಲಿ**

ಈ ಗ್ರಂಥದಲ್ಲಿ ಗೊಂದಲಿಗರು ಮರಾಠಿ ಮೂಲದವರು. ಇವರು ದುರ್ಗಾಮಾತೆಯ ಆರಾಧಕರಾಗಿದ್ದು ಗೊಂದಳ ಕಾರ್ಯವನ್ನು ಮಾಡುವುದು ಅವರ ವೃತ್ತಿಯಾಗಿದೆ. ಗೊಂದಳವು ಒಂದು ಬಗೆಯ ಪಂಜಿನ ನೃತ್ಯವಾಗಿದೆ ಎಂದು ಹೇಳಿದ್ದಾರೆ. ಮದುವೆ, ಹರಕೆ ಕೈಗೊಡಲು ಪೂಜೆ, ಪುರಸ್ಕಾರ, ಹಬ್ಬಗಳಲ್ಲಿ ಗೊಂದಳವನ್ನು ಹಾಕುತ್ತಾರೆ ಎಂಬ ವಿವರಣೆ ನೀಡಿದ್ದಾರೆ.

**೨. ಸುಭದ್ರ ಚೆನ್ನಾ "Encyclopedia of Indian Tribes and Castes " Vol-೬, ೨೦೦೪, ಕಾಸ್ಮೋ ಪಬ್ಲಿಕೇಷನ್ ನ್ಯೂಡೆಲ್ಲಿ**

ಈ ಗ್ರಂಥದಲ್ಲಿ ಗೊಂದಲಿಗರು ಧಾರ್ಮಿಕ ಭಿಕ್ಷುಕ ವರ್ಗಕ್ಕೆ ಸೇರಿದವರು ಎಂದು ತಿಳಿಸಲಾಗಿದೆ. ಗೊಂದಲಿಗರ ಜಾತಿ ಸ್ಥಾಪಕರು ಜಮದಗ್ನಿ ಮತ್ತು ರೇಣುಕೆಯಂದು

ತಿಳಿಸಿದ್ದಾರೆ. ೭ನೇ ಶತಮಾನದಲ್ಲಿ ಡೆಕ್ಕನ್ ಪ್ರದೇಶದ ಉದ್ದಗಲಕ್ಕೂ ಅಂಬಾಭವಾನಿಯ ಆರಾಧನೆ ಪ್ರತಿಧ್ವನಿಸುತ್ತಿತ್ತು. ಗೊಂದಲ ಹಾಕಿದಾಗ, ಗೊಂದಲ ನೃತ್ಯ ಮಾಡುವಾಗ ಮೈಯಲ್ಲಿ ಆವೇಶ ತುಂಬಿ ದೇವಿ ಭವಿಷ್ಯವನ್ನು ನುಡಿವಂತೆ ಮಾಡಿ, ಪವಾಡ ಮೆರೆದಳು. ಮುಸಲ್ಮಾನರ ಶೋಷಣೆಯಿಂದ ಜರ್ಜಿತವಾದ ಅವಧಿಯಲ್ಲಿ ಜನಸಾಮಾನ್ಯರ ಭಾಷೆಯಲ್ಲಿ ಗೊಂದಲಿಗರು ತಮ್ಮ ಕಥನಗಳಿಂದ, ಹಾಡುಗಳಿಂದ ಜನರ ಮೆಚ್ಚುಗೆ ಪಡೆದರು ಎಂಬ ವಿವರಣೆ ನೀಡಿ, ಈ ಸಮುದಾಯದ ಧರ್ಮ, ಅವರು ಅನುಸರಿಸುತ್ತಿರುವ ವೃತ್ತಿಗಳು ಹಾಗೂ ಗೊಂದಳದ ಬಗ್ಗೆ ವಿವರಣೆ ನೀಡಿದ್ದಾರೆ. ಈ ಗ್ರಂಥದಲ್ಲಿ ಮಹಾರಾಷ್ಟ್ರದ ಮರಾಠವಾಡಾ ಮತ್ತು ಉಸ್ಮಾನಬಾದ್ ಜಿಲ್ಲೆಯಲ್ಲಿಯ ಗೊಂದಲಿಗರನ್ನು ಕುರಿತು ವಿವರಿಸಲಾಗಿದೆ.

**೩.ನಿಂಗಣ್ಣ ಸಣ್ಣಕ್ಕಿ ಅವರ "ಗೊಂದಲಿಗರ ಸಂಸ್ಕೃತಿ" ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು,**

ಈ ಗ್ರಂಥದಲ್ಲಿ ಗೊಂದಲಿಗರ ಜೀವನ, ಅವರ ಸಂಸ್ಕೃತಿ, ವೃತ್ತಿ, ಗೊಂದಲ ಪದದ ಅರ್ಥ, ಪ್ರಾಚೀನತೆ, ಗೊಂದಲಿಗರ ಭಾಷೆ, ಸಾಹಿತ್ಯ, ಅವರು ಪ್ರದರ್ಶಿಸುವ ಕಲೆಗಳು ಮುಂತಾದ ವಿಷಯಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

**೪.ಕ್ಯಾತನಹಳ್ಳಿ ರಾಮಣ್ಣ "ಗೊಂದಲಿಗರು ಒಂದು ಅಧ್ಯಯನ", ೧೯೮೭, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು**

**೫.ಕ್ಯಾತನಹಳ್ಳಿ ರಾಮಣ್ಣ " ಶಿವಮೊಗ್ಗ ಜಿಲ್ಲೆಯ ಗೊಂದಲಿಗರ ಕಥೆಗಳು;", ೧೯೭೭, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು**

ಕ್ಯಾತನಹಳ್ಳಿ ರಾಮಣ್ಣ ಅವರು ಗೊಂದಲಿಗರನ್ನು ಕುರಿತು ಎರಡು ಕೃತಿಗಳನ್ನು ಪ್ರಕಟಿಸಿದ್ದಾರೆ. ಗೊಂದಲಿಗರ ಅಧ್ಯಯನದಲ್ಲಿ ಅವರ ಕಲೆ, ಸಾಹಿತ್ಯ, ಸಾಮಾಜಿಕ ಹಾಗೂ ಸಾಂಸ್ಕೃತಿ ಬದುಕನ್ನು ಕುರಿತು ವಿವರಿಸಿದ್ದಾರೆ. ಶಿವಮೊಗ್ಗ ಜಿಲ್ಲೆಯಲ್ಲಿರುವ ಗೊಂದಲಿಗರು ಹೇಳುತ್ತಿದ್ದ ಕಥೆಗಳನ್ನು ಸಂಗ್ರಹಿಸಿ, ಸುದೀರ್ಘವಾದ ಪ್ರಸ್ತಾವನೆ ನೀಡಿದ್ದಾರೆ.

**೬.ಮುದೇನೂರ ಸಂಗಣ್ಣ ಅವರ 'ಗೊಂದಲಿಗರ ದೇವೇಂದ್ರಪ್ಪನವರ ಆಟಗಳು' ೧೯೯೩, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.**

ಈ ಗ್ರಂಥದಲ್ಲಿ ಗೊಂದಲಿಗರ ದೇವೇಂದ್ರಪ್ಪನವರು ಹೇಳಿದ ಏಳು ಕಥೆಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಗೊಂದಲಿಗರ ಸಾಹಿತ್ಯ ಹಾಗೂ ಸಂಸ್ಕೃತಿಯ ಕೆಲವು ವಿಚಾರಗಳನ್ನು ಈ ಗ್ರಂಥದಲ್ಲಿ ವಿವರಿಸಿದ್ದಾರೆ. ಗೊಂದಲಿಗರ ಕಥನಗಳನ್ನು ಕುರಿತು ಅಧ್ಯಯನ ಮಾಡುವವರಿಗೆ

ಇದು ಒಂದು ಉಪಯುಕ್ತ ಗ್ರಂಥವಾಗಿದೆ.

**೭.ಶಿವಾನಂದ ಪಾಚಂಗಿ–'ಗೋಂಧಳಿ' ೨೦೦೮, ಕನ್ನಡ ಪುಸ್ತಕ ಪ್ರಾಧಿಕಾರ ಕನ್ನಡ ಭವನ ಬೆಂಗಳೂರು.**

ಈ ಗ್ರಂಥ ಗೊಂದಲಿಗರ ಮೂಲ, ಸಂಸ್ಕೃತಿ, ಆಚರಣೆಗಳ ಜೊತೆಗೆ ಗೊಂದಳಿ ಸಾಹಿತ್ಯಿ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಬದುಕಿನ ಬಗೆಗಿನ ವಿವರಗಳನ್ನು ಕಾಣುತ್ತೇವೆ.

**೮.ಹಿ.ಚಿ.ಬೋರಲಿಂಗಯ್ಯ (ಸಂ) 'ಕರ್ನಾಟಕ ಜನಪದ ಕಲೆಗಳ ಕೋಶ' ೧೯೯೬, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.**

ಈ ಗ್ರಂಥದಲ್ಲಿಯ 'ಗೊಂದಲಿಗರ ಮೇಳ' ಎನ್ನುವ ಲೇಖನದಲ್ಲಿ ಗೊಂದಲಿಗರ ಆಟ ಅವರ ಕಲೆಯ ಬಗ್ಗೆ ವಿವರಣೆ ಇದೆ.

**೯.ಗಂಗಾಧರ ದೈವಜ್ಞ 'ಗೊಂದಲಿಗರು' ೨೦೧೦, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.**

ಈ ಗ್ರಂಥದಲ್ಲಿ ಗೊಂದಲಿಗರ ಹಿನ್ನೆಲೆ, ಪೌರಾಣಿಕತೆ, ಆಚರಣೆ ಹಾಗೂ ಅವರ ವೃತ್ತಿಗಳು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳನ್ನು ವಿವರಿಸಿದ್ದಾರೆ.

**೧೦.ಶ್ರೀ.ಎಂ.ಎಂ.ಮದರಿ 'ಗೊಂದಲಿಗ್ಯಾ' ೨೦೧೨, ಲೋಹಿಯಾ ಪ್ರಕಾಶನ, ಬಳ್ಳಾರಿ.**

ಇದೊಂದು ಆತ್ಮಕಥನ. ಇದು ಕೇವಲ ಮದರಿಯವರ ಆತ್ಮಕಥನವಾಗಿರದೆ ಅದು ಇಡೀ ಗೊಂದಲಿಗರ ಬದುಕಿನ ಆತ್ಮಕಥನವಾಗಿದೆ. ಗೊಂದಲಿಗರ ಬದುಕಿನ ಪ್ರತಿಯೊಂದು ಹಂತಗಳನ್ನು ಸೂಕ್ಷ್ಮವಾಗಿ ಈ ಕೃತಿಯಲ್ಲಿ ಅವಲೋಕಿಸಿದ್ದಾರೆ.

**೧೧.ರಾಮಚಂದ್ರ ಚಿಂತಾಮಣ ಢೇರೆ, (ಮರಾಠಿ ಮೂಲ) ಕನ್ನಡಕ್ಕೆ (ಅನು) : ಚಂದ್ರಕಾಂತ ಪೋಕಳೆ 'ತುಳಜಾಭವಾನಿ' ೨೦೦೮, ಧಾಮಿನಿ ಸಾಹಿತ್ಯ ವಿಜಯನಗರ ಬೆಂಗಳೂರು.**

ಈ ಗ್ರಂಥದಲ್ಲಿ ಮರಾಠಿ ಮೂಲದ ಗೊಂದಳಿ ಸಾಹಿತ್ಯ ಕುರಿತು ವಿವರಿಸಿದ್ದಾರೆ. ಗೊಂದಲಿಗರ ಆರಾಧ್ಯ ದೈವ ತುಳಜಾಭವಾನಿಯ ಬಗೆಗಿನ ಪೌರಾಣಿಕ, ಐತಿಹ್ಯಗಳನ್ನು ಹಾಗೂ ಪೂಜಾ ಕ್ರಮ, ಗೊಂದಲ ಆರಾಧನಾ ಕ್ರಮಗಳನ್ನು ತಿಳಿಸಿದ್ದಾರೆ.

**೧೨.ಆರ್.ಇ. ಎಂಥೋವನ್ – "The Tribes and Castes of Bombay" Vol–೨ ೧೯೯೦, ಏಶಿಯನ್ ಎಜ್ಯುಕೇಶನಲ್ ಸರ್ವಿಸ್, ನ್ಯೂಡೆಲ್ಲಿ**

ಈ ಗ್ರಂಥದಲ್ಲಿ ಕೊಲಬಾ, ಖಾನದೇಶ, ಕೊಲ್ಲಾಪೂರ, ಸತಾರ ಮುಂತಾದ ಭಾಗಗಳಲ್ಲಿ ಗೊಂದಲಿಗರು ತುಳಜಾಭವಾನಿಯ ಆರಾಧಕರಾಗಿದ್ದಾರೆ. ಗೊಂದಲ ಪೂಜೆ, ಆರಾಧನೆ, ಗೊಂದಲಿಗರ ವಿವಾಹ, ರೀತಿ ನೀತಿ ಸಂಸ್ಕೃತಿಯನ್ನು ಕುರಿತು ವಿವರಿಸಿದ್ದಾರೆ.

**೧೩. ಜ್ಯೋತಿ ಹೊಸೂರ ಅವರು ಗೊಂದಲಿಗರ ಕುರಿತು ಬರೆದ ಲೇಖನಗಳು ಕಾಲ-೧, ಕಾಲ-೨ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.**

ಗೊಂದಲಿಗರ ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ ಬದುಕನ್ನು ಕಂಡುಕೊಳ್ಳಲು ಈ ಲೇಖನಗಳು ಉಪಯುಕ್ತ ಮಾಹಿತಿ ನೀಡುತ್ತಿವೆ.

**೧೪.ವೀರೇಶ. ಶೇ. ಬಡಿಗೇರ. ಅವರ "ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು" ೧೯೯೯, ವಿಮೋಚನಾ ಪ್ರಕಾಶನ, ಅಥಣಿ.**

ಈ ಗ್ರಂಥದಲ್ಲಿ ಗೊಂದಲಿಗರ ಮೇಳದ ಸಾಂಸ್ಕೃತಿಕ ಹಿನ್ನಲೆ, ಕಥನ ಕ್ರಿಯೆಯ ಸ್ವರೂಪ, ಪ್ರದರ್ಶನದ ಬಗ್ಗೆ ತಿಳಿಸಿದ್ದಾರೆ.

**೧೫.ಶಿದ್ಲಿಂಗಪ್ಪ. ಎಸ್. ಹುರಕಡ್ಲಿ. ಅವರ "ಗೊಂದಲಿಗರು ಮತ್ತು ಆಧುನಿಕ ಮುಖಾಮುಖಿ" (ಪಿಎಚ್.ಡಿ ಪ್ರಬಂಧ) ೨೦೧೨, ಕನ್ನಡ ವಿಶ್ವವಿದ್ಯಾಲಯ ಹಂಪಿ.**

ಅಲೆಮಾರಿಗಳಾದ ಗೊಂದಲಿಗರ ವೃತ್ತಿ ಪರಂಪರೆಯ ಮೇಲೆ ಆಧುನಿಕತೆಯ ಪ್ರಭಾವ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತ್ಯಂತರಗಳ ನಡುವೆ ಅವರು ಎದುರಿಸುತ್ತಿರುವ ಸಮಸ್ಯೆ ಹಾಗೂ ಸವಾಲುಗಳನ್ನು ಕುರಿತು ಈ ಪ್ರಬಂಧದಲ್ಲಿ ಚರ್ಚಿಸಿದ್ದಾರೆ.

ಗೊಂದಲಿಗರ ಕಥನ ಸಾಹಿತ್ಯದ ಸಾಂಸ್ಕೃತಿಕ ಅಧ್ಯಯನ ಎಂಬ ಈ ಪ್ರಬಂಧವು ಒಟ್ಟು ಎಂಟು ಅಧ್ಯಾಯಗಲನ್ನೊಳಗೊಂಡಿದೆ.

**ಅಧ್ಯಾಯ ೧** ಈ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ ಒಳಗೊಂಡಿದೆ. ಈ ಅಧ್ಯಯನಕ್ಕೆ ಗೊಂದಲಿಗರು ಹೇಳುವ ಕಥನಗಳಾದ 'ಮಹಾಸತಿ ಶಿವಲೋಚನಾ, ಬಾಳ ಭಿಕ್ಷುಕ, ಶೀಲಾವತಿ, ರಾಜಾ ವೀರಪರಾಕ್ರಮ, ವಿಘ್ನಾವತಿ, ಬಸವ ಕುಮಾರ ಲೋಹಿತಕುಮಾರ, ನೀಲಕಂಠ ರೂಪಾವತಿ, ಪತಿವೃತಾ ಶಿರೋಮಣಿ ಚಂದ್ರಲೇಖ, ಶಂಖಿನಕುಮಾರ ಮತ್ತು ಮಹಾಸತಿ ಶಿವಲೋಚನಾ" ಇವುಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ

**ಅಧ್ಯಾಯ ೨ ಗೊಂದಲಿಗರ ಕಥನ ಪರಂಪರೆ**

ಈ ಅಧ್ಯಾಯದಲ್ಲಿ ಗೊಂದಲದ ಪದ ನಿಷ್ಪತ್ತಿ, ಗೊಂದಲಿಗರ ಕಥನ ಪರಂಪರೆ ಮತ್ತು ಪ್ರಾಚೀನ ಕನ್ನಡ ಸಾಹಿತ್ಯ ಹಾಗೂ ಮರಾಠಿ ಸಾಹಿತ್ಯದಲ್ಲಿ ಗೊಂದಳವು ಹೇಗೆ ಚಿತ್ರಣಗೊಂಡಿದೆ ಹಾಗೂ ಗೊಂದಲದ ಮಹತ್ವ ಅದರ ರೀತಿ ನೀತಿಗಳು, ಗೊಂದಳದ ಪ್ರದರ್ಶನ, ಆಚರಣೆ ಮುಂತಾದ ಅಂಶಗಳು ಪ್ರಾಚೀನ ಸಾಹಿತ್ಯದಲ್ಲಿ ಹೇಗೆ ಕಂಡು ಬಂದಿವೆ ಎಂಬುದನ್ನು ಕಂಡುಕೊಳ್ಳಲಾಗಿದೆ ಮತ್ತು ಗೊಂದಲವನ್ನು ಕುರಿತು ಕನ್ನಡ ಹಾಗೂ ಮರಾಠಿಯ ವಿವಿಧ ವಿದ್ವಾಸರು ತಾಳಿರುವ ನಿಲುವುಗಳನ್ನು ಇಲ್ಲಿ ಸ್ಪಷ್ಟ ಪಡಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ ೩ ಗೊಂದಲಿಗರು ಸಾಂಸ್ಕೃತಿಕ ಅಸ್ತಿತ್ವ ಮತ್ತು ಗೊಂದಳ ಸಾಹಿತ್ಯ**

ಗೊಂದಲವನ್ನು ಹಾಕುವ ವೃತ್ತಿ ಪಾರಂಪರಾನುಗತವಾಗಿ ಸಾಗಿ ಬಂದು, ಅದು ಗೊಂದಲಿಗರ ಬದುಕಿಗೆ ಆಧಾರ ನೀಡಿತ್ತು. ವೃತ್ತಿಗಾಯಕರಾದ ಇವರು ಮದುವೆ, ಜಾತ್ರೆ, ನವರಾತ್ರಿ, ದೀಪಾವಳಿ, ಕಾರ್ತಿಕ ಮಾಸ ಮತ್ತು ಗಣೇಶ ಚತುರ್ಥಿ ಮುಂತಾದ ಸಂದರ್ಭಗಳಲ್ಲಿ ಗೊಂದಲದ ಆರಾಧನೆ ನಡೆಸುತ್ತಾ ಬಂದವರು. ಈ ಗೊಂದಲದ ಕಥನಗಳ ಸಾಹಿತ್ಯದಲ್ಲಿ, ಅದರ ಪೂಜಾ ವಿಧಾನ, ಆರಾಧನಾ ಕ್ರಮ, ಮತ್ತು ಪ್ರದರ್ಶನದಲ್ಲಿ ತನ್ನದೇ ಆದ ಸಾಹಿತ್ಯಿಕ, ಸಾಂಸ್ಕೃತಿಕ, ಸಾಮಾಜಿಕ, ಐತಿಹಾಸಿಕ, ಹಿನ್ನೆಲೆಯನ್ನು ಹೊಂದಿದೆ. ಸಾಂಸ್ಕೃತಿಕ ಪ್ರತೀಕವಾದ ಈ ಗೊಂದಲವು ಒಂದು ಕಾಲದಲ್ಲಿ ತನ್ನದೇ ಆದ ಒಂದು ಪರಂಪರೆಯನ್ನು ರೂಪಿಸಿತ್ತು. ಈ ಗೊಂದಲದ ಕಥನಗಳಲ್ಲಿ ನೀತಿಪರವಾದ ಬೋಧನೆ, ಮಾನವೀತೆಯ ಅಡಿಪಾಯ, ಭಕ್ತಿ, ದೈವೀ ಆರಾಧನೆ, ಸಂಪ್ರದಾಯ, ಮುಂತಾದ ಪ್ರಕ್ರಿಯೆಯನ್ನು ಒಳಗೊಂಡ ಒಂದು ಘಟಕವಾಗಿದೆ. ಗೊಂದಲವು ಒಂದು ಕಾಲದಲ್ಲಿ ಜನರ ಜೀವನ ವಿಧಾನವನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತ ಬಂದಿದೆ ಎಂದು ಹೇಳಬಹುದು. ಅನೇಕ ರಾಜ ಮಹಾರಾಜರು ತಮ್ಮ ರಾಜಕೀಯ ಒಳಿತಿಗಾಗಿ, ಶತ್ರುಗಳ ವಿಷಯ ತಿಳಿಯುವುದಕ್ಕಾಗಿ ಗೊಂದಲಿಗರನ್ನು ಮತ್ತು ಗೊಂದಲದ ಆರಾಧನೆಯನ್ನು ಉಪಯೋಗಿಸಿಕೊಂಡಿದ್ದಾರೆ. ಶಿವಾಜಿಯ ಕಾಲದಲ್ಲಿ ಗೊಂದಲಿಗರು ಗೂಢಚಾರರಾಗಿ ಕೆಲಸ ಮಾಡುತ್ತಿದ್ದರು. ಅನೇಕ ರಾಜರು ತಮ್ಮ ಸಂಕಷ್ಟ ಕಾಲದಲ್ಲಿ ಗೊಂದಲವನ್ನು ಹಾಕಿಸಿ ಪರಿಹಾರ ಕಂಡುಕೊಂಡಿದ್ದಾರೆ. ಈ ಎಲ್ಲ ವಿಷಯಗಳನ್ನು ಈ ಅಧ್ಯಾಯದ ಉಪಶೀರ್ಷಿಕೆಯಲ್ಲಿ ಗೊಂದಲದ ಕಥೆ, ಗೊಂದಲಿಗರ ಸಂಸ್ಕೃತಿ, ದೈವೀ ಆರಾಧನೆ, ಪ್ರದರ್ಶನದ ಹಿನ್ನೆಲೆ, ಸಾಹಿತ್ಯಿಕ ಗೊಂದಲ, ಸಾಂಸ್ಕೃತಿಕ ಗೊಂದಲ, ಐತಿಹಾಸಿಕ ಗೊಂದಲ, ಸಾಮಾಜಿಕ ಗೊಂದಲ, ಪೂಜಾ ಕ್ರಮ, ದೀಕ್ಷಾ ಕ್ರಮ, ವೇಷಭೂಷಣ, ಗೊಂದಲ ನೃತ್ಯ, ಸಂಗೀತ, ವಾದ್ಯಗಳು, ಮತ್ತು ಗೊಂದಲ ಸಾಹಿತ್ಯ ಎಂದು ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ೪ ಗೊಂದಲಿಗರ ಕಥನಗಳು: ವಸ್ತು ವಿನ್ಯಾಸ ಮತ್ತು ವಿವೇಚನೆ**

ಜನಪದ ವೃತ್ತಿಕಲಾವಿದರಾದ ಗೊಂದಲಿಗರು ತಮ್ಮದೇ ಆದ ಕಥಾಶೈಲಿಯ ಮೂಲಕ ಧಾರ್ಮಿಕ, ಅದ್ಭುತ, ರಮ್ಯ, ಆಚಾರ ವಿಚಾರ, ರೀತಿ ನೀತಿ, ಪ್ರಕೃತಿ, ಪ್ರಾಣಿ ಪಕ್ಷಿಗಳು ಹಾಗೂ ಮಾನವೀಯ ಸಂಬಂಧಗಳನ್ನು ಪ್ರತಿನಿದಿಸುವ ಕಥೆ ಮತ್ತು ಪದ್ಯಗಳನ್ನು ಹೇಳುವ ಶ್ರೇಷ್ಠ ಕಲಾವಿದರ ಸಾಲಿನಲ್ಲಿ ಗುರುತಿಸಿಕೊಂಡವರು ಎಂದು ಹೇಳಬಹುದು. ಇವರನ್ನು ಜನಪದ ಜೀವಾಳ ಎಂದು ಕರೆಯಬಹುದು. ಇವರು ಹೇಳುವ ಕಥೆಗಳ ಮೂಲಕ ಅನೇಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಅವಕಾಶವಿದೆ. ಗೊಂದಲಿಗರ ಕೆಲವು ಕಥನಗಳಲ್ಲಿ ಎಲ್ಲ ಸಂಪ್ರದಾಯಿಕ ಚೌಕಟನ್ನು ಮೀರಿ ತನ್ನ ವೀರತನವನ್ನು ತೋರಿಸುವ ಸ್ತ್ರೀ ಕಥನ ಗೀತೆಗಳನ್ನು ಕಾಣುತ್ತೇವೆ.

ಅವಳ ಸಹನೆಯ ಎಲ್ಲೆ ಮೀರಿದಾಗ ರುದ್ರಿಯಾಗುವ ಪ್ರಸಂಗಗಳನ್ನು ಈ ಕಥೆಗಳಲ್ಲಿ ಕಾಣುತ್ತೇವೆ. ಹೆಣ್ತನದ ಪ್ರಾಮುಖ್ಯತೆ ಹಾಗೂ ಅವಳ ನಿಲುವು, ಸಹನಾಭೂತಿ, ಪ್ರೀತಿ ತ್ಯಾಗ, ಮಮತೆ, ಧೈರ್ಯ, ಪತಿವೃತಾ ಧರ್ಮ, ಸಿಟ್ಟು ಸೇಡು, ಕರ್ತವ್ಯ ಏನು ಎಂಬುದನ್ನು ತೋರಿಸುವಲ್ಲಿ ಗೊಂದಲಿಗರ ಕಥನಗಳು ಪ್ರಮುಖ ಪಾತ್ರ ವಹಿಸುತ್ತವೆ. ಮಹಾಸತಿ ಶಿವಲೋಚನ, ವಿಘ್ನಾವತಿ, ಪತಿವೃತಾ ಪದ್ಮಾವತಿ, ಶೀಲಾವತಿ, ನೀಲಮ್ಮ , ಪತಿವೃತಾ ಶಿರೋಮಣಿ ಚಂದ್ರಲೇಖ ಹಲವಾರು ಸ್ತ್ರೀವಾದಿ ಕಥನಗಳ ಮೂಲಕ ಸಮಾಜವನ್ನು ಎಚ್ಚರಿಸುವ ಕಾರ್ಯವನ್ನು ಗೊಂದಲಿಗರು ಹೇಗೆ ಮಾಡುತ್ತಿದ್ದರು ಎಂಬುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ ೫. ಗೊಂದಲಿಗರ ಕಥನ ಶೈಲಿ**

ಗೊಂದಲಿಗರು ಹೇಳುವ ಕಥನಸಾಹಿತ್ಯವು ಜನರ ಮನಸ್ಸನ್ನು ಪರಿಣಾಮಕಾರಿಯಾಗಿ ಸೆಳೆಯುತ್ತಿದ್ದವು ಎಂದು ಹೇಳಬಹುದು. ಗೊಂದಲಿಗರ ಕಥನ ಸಾಹಿತ್ಯವು ಗದ್ಯ ಪದ್ಯ ಮಿಶ್ರಿತ ಶೈಲಿಯಾಗಿದೆ ಹಾಗೂ ನೃತ್ಯ ಸಂಗೀತದ ಸಾಮರಸ್ಯವನ್ನು ಹೊಂದಿದೆ. ಇವರು ತಮ್ಮ ಬದುಕಿನ ಹಿನ್ನೆಲೆಯಲ್ಲಿಯೇ ಕಥೆಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಗೊಂದಲಗರು ಆರಾಧಿಸುವ ಬಯಲು ಗೊಂದಲ, ಗುಡಿ ಗೊಂದಲ, ಹರಕೆ ಗೊಂದಲ, ಮದುವೆ ಗೊಂದಲದ ಪ್ರಮುಖ ಉದ್ದೇಶ ದೇವಿಯ ಆರಾಧನೆ. ಇದರ ಜೊತೆಗೆ ಧರ್ಮಾಚರಣೆ, ನೀತಿ, ತತ್ವ ಬೋಧನೆ, ಸತ್ಯ ಅಸತ್ಯದ ತಿಳುವಳಿಕೆ, ದುಷ್ಟರ ನಾಶ, ಶಿಷ್ಟ ರಕ್ಷಣೆ, ಪತಿವೃತಾಧರ್ಮ, ಸಾಮಾಜಿಕ ಕಳಕಳಿ, ಮನರಂಜನೆ ಮುಂತಾದ ಅಂಶಗಳನ್ನು ಗೊಂದಲ ಸಾಹಿತ್ಯದಲ್ಲಿ ಕಾಣುತ್ತೇವೆ. ಗೊಂದಲದ ಪದ್ಯಸಾಹಿತ್ಯವನ್ನು ಸ್ತುತಿಪದಗಳು, ಹರಕೆ ಪದಗಳು, ಸೊಲ್ಲಗಳು, ತತ್ವಪದಗಳನ್ನು ಅನುಭಾವ ತತ್ವಪದಗಳು, ಶರಣರ ಪದಗಳು, ದಾಸರ ಪದಗಳು, ಸರ್ವಜ್ಞನ ವಚನಗಳು, ಶರೀಫರ ಕೀರ್ತನೆಗಳು, ನೀತಿ ಪದಗಳಲ್ಲಿ ಆಧ್ಯಾತ್ಮಿಕ ನೀತಿ ಪದಗಳು, ಗರತಿಯ ನೀತಿ ಪದಗಳು, ಮನರಂಜನಾ ಪದಗಳಲ್ಲಿ ಇಂದಿನ ಫ್ಯಾಶನ ಯುಗಕ್ಕೆ ಸಂಬಂಧಿಸಿದ ಹಾಗೂ ತಾಂತ್ರಿಕ ವಸ್ತುಗಳ ಬಗ್ಗೆ ಹೇಳುವ ಪದ್ಯಗಳಾಗಿ ವಿಂಗಡಿಸಿಕೊಂಡು ಅವುಗಳನ್ನು ಈ ಅಧ್ಯಾಯದಲ್ಲಿ ಅವುಗಳನ್ನು ವಿಶ್ಲೇಷಣೆ ಮಾಡಲಾಗಿದೆ.

**ಅಧ್ಯಾಯ ೬. ಗೊಂದಲಿಗರ ಕಥನ ಪ್ರದರ್ಶನ**

ಈ ಅಧ್ಯಾಯದಲ್ಲಿ ಗೊಂದಲಿಗರು ವಿವಿಧ ಪ್ರಕಾರಗಳಲ್ಲಿ ಆರಾಧಿಸುವ ಗೊಂದಲದ ಪೂಜಾ ವಿಧಾನಗಳನ್ನು ಮತ್ತು ಅವುಗಳ ಸಂಪ್ರದಾಯಗಳನ್ನು ಗಮನದಲ್ಲಿಟ್ಟುಕೊಂಡು ಪ್ರಧಾನ ಗೊಂದಲಗಳು, ಮದುವೆಯ ಗೊಂದಲ, ಜಾತ್ರೆಯ ಗೊಂದಲ, ಗೌಣ ಗೊಂದಲಗಳು, ಬಯಲು ಗೊಂದಲ ಮತ್ತು ಭಾಗ್ಯದ ಗೊಂದಲವೆಂದು ವಿಂಗಡಿಸಿಕೊಳ್ಳಲಾಗಿದೆ. ಈ ಗೊಂದಲಗಳ ಆರಾಧನೆ, ಅದರ ಹಿನ್ನೆಲೆ, ಪೂಜಾ ವಿಧಾನ ಮತ್ತು ಈ ಆರಾಧನೆಗಳ

ಪ್ರದರ್ಶನ ಹೇಗೆ ನಡೆಯುತ್ತದೆ. ಈ ಸಂದರ್ಭದಲ್ಲಿ ಗೊಂದಲಿಗರು ಬಳಸುವ ಸಾಹಿತ್ಯ, ಅದರಲ್ಲಿ ಸಂದರ್ಭಕ್ಕನುಸಾರವಾಗಿ ಬಳಕೆಯಾಗುವ ಅಡ್ಡ ಕಥೆಗಳು, ಗೊಂದಲಿಗರ ಭಾಷೆ, ಗಾದೆ ಮಾತುಗಳು, ನಾಣ್ಣುಡಿಗಳು, ನುಡಿಗಟ್ಟು / ಜನಪ್ರದ ವಾಗ್ರುಡಿಗಳು, ಅನ್ಯ ಭಾಷಾ ಪದ ಪ್ರಯೋಗ, ಬೈಗುಳುಗಳು ಮತ್ತು ಭಾಷಾ ಅಲಂಕಾರಿಕ ಪದಗಳು ಮುಂತಾದ ಅಂಶಗಳು ಗೊಂದಲಿಗರ ಕಥನಗಳಲ್ಲಿ ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ೭ ಗೊಂದಲ ವೃತ್ತಿ ಕಲಾವಿದರ ಸ್ಥಿತಿಗತಿಗಳು**

ಒಂದು ಕಾಲದಲ್ಲಿ ಗೊಂದಲ ಹಾಕುವ ವೃತ್ತಿಯಿಂದಲೇ ಜೀವನ ನಿರ್ವಹಿಸುತ್ತಿದ್ದ ಗೊಂದಲಿಗರ ಕಲಾವಿದರು, ಆಧುನಿಕತೆ ಸಂದರ್ಭದಲ್ಲಿ ಗೊಂದಲದ ಆರಾಧನೆಯ ಪ್ರಮಾಣ ಕಡಿಮೆಯಾಗಿ, ಇಂದು ಪರ್ಯಾಯ ವೃತ್ತಿಗಳ ಮೂಲಕ ತಮ್ಮದೇ ಆದ ಬದುಕನ್ನು ಕಟ್ಟಿಕೊಳ್ಳಲು ಸೆಣಸುತ್ತಿದ್ದಾರೆ. ಕೆಲ ಗೊಂದಲಿಗರು ಆಧುನಿಕ ಬದುಕಿಗೆ ಹೊಂದಿಕೊಳ್ಳಲಾಗದೆ ಕಟ್ಟಾ ಸಂಪ್ರದಾಯವಾದಿಗಳು ಬದಲಾವಣೆ ಪ್ರಕ್ರಿಯೆಗೆ ಸ್ಪಂದಿಸದೆ ದೂರ ಉಳಿದಿದ್ದಾರೆ. ಒಂದು ಹಂತದಲ್ಲಿ ತಮ್ಮ ವೃತ್ತಿಕಾಯಕದಲ್ಲಿ ತೃಪ್ತಿಕಂಡ ಅವರು ಇಂದು ಆಧುನಿಕ ಬದುಕಿನೊಂದಿಗೆ ಹೋರಾಟಕ್ಕಿಳಿಯಬೇಕಾಗಿದೆ. ಇಂದು ಕೆಲವರು ಗೊಂದಲ ಕಾರ್ಯದ ಜೊತೆಗೆ ಪರ್ಯಾಯ ವೃತ್ತಿಗಳನ್ನು ಮಾಡುತ್ತಿದ್ದಾರೆ. ಕೌದಿಹೊಲೆಯುವುದು, ಬಾಂಡೆ (ಪಾತ್ರೆ) ಮಾರುವುದು, ಕೃಷಿ, ಕೃಷಿ ಕೂಲಿ, ಜ್ಯೋತಿಷ್ಯ ಹೇಳುವ ಮುಂತಾದ ವಿವಿಧ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಗೊಂದಲಿಗರ ಹೆಣ್ಣು ಮಕ್ಕಳು ಕುಟುಂಬ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸುವುದು ಕಂಡುಬರುತ್ತದೆ. ಒಂದು ಕಾಲದಲ್ಲಿ ಸಮಾಜ ಅತ್ಯಂತ ಗೌರವದಿಂದ ಕಾಣುತ್ತಿದ್ದ ಗೊಂದಲದ ಕಲಾವಿದರ ಸ್ಥಿತಿಗತಿಗಳು ಇಂದು ಹೇಗಿವೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ ೮ ಸಮಾರೋಪ**

ಗೊಂದಲಿಗರ ಕಥನಗಳ ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯಡಿಯಲ್ಲಿ ಕೈಕೊಂಡ ಈ ಅಧ್ಯಯನದ ಫಲಿತಗಳನ್ನು ಹಾಗೂ ಗೊಂದಲಿಗರ ಅಭಿವೃದ್ದಿಗಾಗಿ ಈ ಅಧ್ಯಯನದ ಹಿನ್ನೆಲೆಯಲ್ಲಿ ಕೆಲವು ಸಲಹೆ ಸೂಚನೆಗಳನ್ನು ನೀಡಲಾಗಿದೆ.

ಈ ಅಧ್ಯಯನಕ್ಕೆ ಬಳಸಿದ ಗ್ರಂಥಗಳ ವಿವರ, ಅನುಬಂಧಗಳಲ್ಲಿ ಕ್ಷೇತ್ರಕಾರ್ಯದಲ್ಲಿ ಮಾಹಿತಿ ನೀಡಿರುವ ಮಾಹಿತಿದಾರರ ವಿವರ, ಛಾಯಾಚಿತ್ರಗಳನ್ನು ನೀಡಲಾಗಿದೆ.

**ಅಡಿ ಟಿಪ್ಪಣಿಗಳು**

೧.ವೀರೇಶ. ಶೇ. ಬಡಿಗೇರ, ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು, ಒಂದು ಸಂಸ್ಕೃತಿಯ ಅಧ್ಯಯನ ೧೯೯೯, ಪು. ಸಂ. ೧೨೩.

೨. ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು ೧೯೯೩,
ಪು.ಸಂ. ೨೧.

೩. ಶ್ರೀಕಂಠ ಕೂಡಿಗೆ, ಕನ್ನಡ ಲಾವಣಿಗಳು, ೧೯೯೯. ಪು. ಸಂ. ೨೩.

## ಅಧ್ಯಾಯ ೨

# ಗೊಂದಲಿಗರ ಕಥನ ಪರಂಪರೆ

### ೨.೧ ಪೀಠಿಕೆ

ಗೊಂದಲಿಗರ ಕಥನ ಪರಂಪರೆ ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಗೊಂದಲ ಎನ್ನುವ ಧಾರ್ಮಿಕ ಆಚರಣೆಯ ಜೊತೆಗೆ ಕಲಾ ಸಾಹಿತ್ಯವನ್ನು ಮೇಳೈಸಿಕೊಂಡು ಬಂದಿದೆ. ಈ ಗೊಂದಲದ ಬಗ್ಗೆ ಹಲವಾರು ವಿದ್ವಾಂಸರು, ಸಂಶೋಧಕರು ತಮ್ಮದೇ ಆದ ಅರ್ಥವನ್ನು ಕೊಟ್ಟಿದ್ದಾರೆ. ಗೊಂದಲ ಎಂಬ ಶಬ್ಧಕ್ಕೆ ಕನ್ನಡದ ಆದಿಕವಿ ಪಂಪ, ರುದ್ರಭಟ್ಟ, ನಾಗಚಂದ್ರ, ವಚನಕಾರರು 'ಸಮೂಹ' ಎಂಬ ಅರ್ಥದಲ್ಲಿ ಬಳಸಿದ್ದಾರೆ. 'ರೇಣುಕಾ ಮಹಾತ್ಮೆ' ಯಲ್ಲಿ ಗೊಂದಲವೆಂದರೆ 'ನೃತ್ಯ ವಿಧಾನ' ಎಂಬುದಾಗಿ ತಿಳಿಸಲಾಗಿದೆ. 'ಗೊಂದಲ' ಎನ್ನುವ ಕಾರ್ಯ, ಆ ಪದದ ಉತ್ಪತ್ತಿ ಅಥವಾ ಅರ್ಥದ ಬಗ್ಗೆ ಅರ್ಥೈಸುವಾಗ ಹಲವಾರು ಆಲೋಚನೆಗಳು ನಮ್ಮ ಕಣ್ಮುಂದೆ ಬರುತ್ತವೆ. ಗೊಂದಲ ಎನ್ನುವ ಪದ ಕ್ರಿ.ಶ. ೧೦ನೇ ಶತಮಾನದ ಪಂಪನಿಂದಲೂ ಬಳಕೆಯಾಗಿ ಮುಂದೆ ಪುಷ್ಪದಂತ, ನಯಸೇನ, ಮುಂತಾದವರ ಅನೇಕ ಕಾವ್ಯಗಳಲ್ಲಿ ಬಳಕೆಯಾಗಿದೆ. ಅದೊಂದು 'ಕುಣಿತ' ಎನ್ನುವ ಅರ್ಥವನ್ನು ಪಡೆದಿದೆ. ಈ ಕುಣಿತವೇ ಕಾಲಾನಂತರ ಇದು ದೇವಿಯ ಆರಾಧನೆ ಮಾಡುವ ಪೂಜಾ ವಿಧಾನವಾಯಿತು. ಭೂತಮಾತೆಯನ್ನು ಆರಾಧಿಸುವ ಹಾಗೂ ಅವಳಿಗೆ ಸಂಬಂಧಪಟ್ಟ ಉಪಾಸನೆಯಾಗಿ ಬೆಳೆಯಿತು. ಭೂತದ ವೇಷ ಧರಿಸಿ ಅವುಗಳ ಚೇಷ್ಟೆಯ ಅನುಕರಣೆಯ ರೀತಿಯ ನೃತ್ಯವೇ ಗೊಂದಳ ಎಂಬುದನ್ನು ಅನೇಕ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಜನಪದ ನೃತ್ಯದ ಮೂಲ ಉಗಮವು ರೌದ್ರವಾಗಿದೆ. ದೇವತಾರಾಧನೆಯಲ್ಲಿ ರೌದ್ರಾವತಾರ ಹಾಗೂ ಸೌಮ್ಯಾವತಾರ ಎಂಬ ಎರಡು ಪ್ರಕಾರಗಳನ್ನು ನೋಡುತ್ತೇವೆ. ರಾಜ ಮಹಾರಾಜರ ಕಾಲದಲ್ಲಿಯೂ ಗೊಂದಳ ಕಾರ್ಯಕ್ರಮಗಳು ನಡೆಯುತ್ತಿದ್ದವು. ಕದಂಬರ, ಮತ್ತು ಶಿವಾಜಿ ಮಹಾರಾಜರ ಆಳ್ವಿಕೆಯಲ್ಲಿ ಗೊಂದಲ ಹಾಕಿಸುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಅದರಲ್ಲೂ ಶತ್ರುಗಳ ವಿಷಯ ತಿಳಿಯಲು ಈ ಗೊಂದಲವನ್ನೇ ಬಳಸಿಕೊಂಡಿದ್ದರಿಂದ ಇದೊಂದು ಐತಿಹಾಸಿಕ ಅರ್ಥವನ್ನು ಪಡೆದುಕೊಂಡಿತು. ಗೊಂದಲ

ಪದವು ಮರಾಠಿ, ಪ್ರಾಕೃತ, ಸಂಸ್ಕೃತ, ಕನ್ನಡ, ಭಾಷೆಯಲ್ಲಿಯೂ ಬಳಕೆಯಾಗಿ ಅದು ಮರಾಠಿ ಅಥವಾ ಕನ್ನಡ ಶಬ್ಧವೊ ಎಂಬ ಚರ್ಚೆಗೂ ಒಳಗಾಯಿತು. ಮುಂದೆ ಗೊಂದಲ ಪದ ಕನ್ನಡದ ಮೂಲ ಎಂಬ ತೀರ್ಮಾನಕ್ಕೆ ಬರಲಾಯಿತು. ಒಟ್ಟಿನಲ್ಲಿ ಗೊಂದಲ ಎಂದರೆ ಸಪ್ಪಳ, ಗದ್ದಲ, ಕುಣಿತ, ಎನ್ನವುದರ ಜೊತೆಗೆ ಹೊಸದೊಂದು ಅರ್ಥವನ್ನು ಕಂಡುಕೊಳ್ಳುತ್ತದೆ. ಗೊಂದಲ ಎಂಬ ಶಬ್ಧ ಕ್ರಿಯೆಯನ್ನು ಒಳಗೊಂಡ ಪದ ಅಥವಾ ಕ್ರಿಯಾಪದವಾಗಿದೆ. ಗೊಂದಲ ಎಂದರೆ 'ಎಲ್ಲಿ ವಾತಾವರಣ ಭಾವಾವೇಷದಿಂದ ಗದ್ದಲದಿಂದ ಕೂಡಿರುವುದೋ ಅದು ಗೊಂದಲವಾಗಿದೆ.' ಇದನ್ನು ಮಾಡುವವರೇ ಗೊಂದಲಿಗರು. ಈಗ ಗೊಂದಲಿಗ ಎಂಬುದು ಜಾತಿವಾಚಕ ಪದವಾಗಿದೆ. ವಿಶೇಷ ಸಂದರ್ಭಗಳಲ್ಲಿ, ದೇವಿ ಗುಡಿಗಳಲ್ಲಿ, ಭಕ್ತರ ಮನೆಯಲ್ಲಿ, ದೇವಿಯನ್ನು ಕುರಿತು ಮಾಡುವ ಆರಾಧನೆಯ ಕ್ರಿಯೆಯೇ ಗೊಂದಲ. ಸಂಬಾಳ, ತಾಳ, ತುಂತುಣಿಗಳ ಅಬ್ಬರಗಳ, ನಡುವೆ ಅಲ್ಲಿಯ ಭಕ್ತರು ಹೆಣ್ಣು ಗಂಡು ಎಂಬ ಭೇದವಿಲ್ಲದೇ ಭಾವಾವೇಷದಿಂದ ಅವರ ಕುಣಿತದ ಸಪ್ಪಳ ಅತಿಯಾಗುತ್ತದೆ. ಭಾವಾವೇಶದಿಂದ ಕುಣಿಯುವುದೇ ಇಲ್ಲಿಯ ಆಶಯವಾಗಿದೆ. ಕ್ಷೇತ್ರಕಾರ್ಯದಲ್ಲಿ ಗೊಂದಲದ ಪ್ರದರ್ಶನವನ್ನು ಗಮನಿಸಿದಾಗ ಅಲ್ಲಿಯ ಗೊಂದಲಿಗರು ಮತ್ತು ಭಕ್ತರು ಕುಣಿದು ತಮ್ಮ ನೋವು, ನಿರಾಸೆ, ಸಂಕಟ, ಭಕ್ತಿ, ಭಾವ ಎಲ್ಲವನ್ನು ಮನದಿಂದ ಹೊರಹಾಕುವ ರೀತಿಯಲ್ಲಿ ಕಾಣುತ್ತಿತ್ತು. ಅಲ್ಲಿ ದೇವಿಗೆ ಎಲ್ಲವನ್ನು ಸಮರ್ಪಿಸುವ ಭಾವ ಕಂಡುಬರುತ್ತಿತ್ತು. ಪ್ರೇಕ್ಷಕರೆಲ್ಲ ಕುಣಿದು ಕುಪ್ಪಳಿಸಿ ಬಿದ್ದಾಗ ಅರಿಶಿಣ ಅಥವಾ ಭಂಡಾರವನ್ನು ಅವರಿಗೆ ಲೇಪಿಸುವುದರಿಂದ ಹೊಸ ಚೈತನ್ಯ ಮೂಡಿದಂತೆ, ಮನಸ್ಸು ಪ್ರಶಾಂತತೆಯಿಂದ ಕೂಡಿರುವಂತೆ ಕಾಣುತ್ತಿತ್ತು. ಇದನ್ನೆಲ್ಲ ಗಮನಿಸಿದಾಗ ಗೊಂದಲಕ್ಕೆ ಹೊಸದೊಂದು ಅರ್ಥ ರೂಪ ಕಾಣುವಂತಿತ್ತು. 'ಗೊಂದಲವೆಂದರೆ ಮನಸ್ಸಿನ ಭಾವವನ್ನು ಹೊರಹಾಕಿ ದೇವಿಗೆ ಸಮರ್ಪಣೆ ಮಾಡಿ ಶಾಂತಚಿತ್ತತೆಯನ್ನು ಪಡೆಯುವದಾಗಿದೆ. ಒಂದು ಸಾರ್ಥಕತೆಯ ಬದುಕನ್ನು ಸಾಗಿಸುವುದಾಗಿದೆ. ಮಾನವನ ಸಹಜ ಗುಣ ದೇವರಿಗೆ ಮೊರೆ ಹೋಗುವುದು, ಹರಕೆ ಹೊರುವುದು ಇದನ್ನೆಲ್ಲ ಗೊಂದಲ ಕಾರ್ಯದಲ್ಲಿ ಕಾಣುತ್ತೇವೆ. ಅದಕ್ಕಾಗಿಯೇ ಶಿವಾಜಿ ಮಹಾರಾಜ ಮುಸ್ಲಿಂರ ಕಾರುಬಾರಗಳನ್ನು ತಿಳಿಯುಲು ಗುಪ್ತಚರ್ಯರನನ್ನಾಗಿ ಈ ಗೊಂದಲಿಗರನ್ನೇ ನೇಮಿಸಿದ್ದನೆಂದು ತಿಳಿಯುತ್ತದೆ. ಹೀಗೆ ಗೊಂದಲವೆನ್ನುವ ಶಬ್ಧ ತನ್ನದೇ ಆದ ವೈಶಿಷ್ಟವನ್ನು ಪಡೆದಿದೆ ಎಂದು ಹೇಳಬಹುದು.

### ೨.೨ 'ಗೊಂದಲ'ದ ಪದ ನಿಷ್ಪತ್ತಿ

ಗೊಂದಲ ಎಂಬ ಪದದ ಬಗ್ಗೆ ಈಗಾಗಲೇ ಹಲವಾರು ಚರ್ಚೆಗಳು ನಡೆದಿವೆ. ಗೊಂದಲ ಎಂಬ ಶಬ್ಧ ಪ್ರಾಕೃತ ಮತ್ತು ಸಂಸ್ಕೃತ ಸಾಹಿತ್ಯದಲ್ಲಿ ದೊರೆಯುತ್ತದೆ. ಆದರೆ ಇದಕ್ಕೆ ಸರಿಯಾದ ನಿಷ್ಪತ್ತಿ ಹೇಳುವುದು ಸಾಧ್ಯವಿಲ್ಲವೆಂದು ನಿಂಗಣ್ಣ ಸಣ್ಣಕ್ಕಿಯವರು ಹೇಳುತ್ತಾರೆ.

"ಮರಾಠಿ ಭಾಷೆಯ ಶಾಸ್ತ್ರಜ್ಞ ಪ್ರೊ. ಕೃ. ಪಾ. ಕುಲಕರ್ಣಿ. ಅವರು ತಮ್ಮ 'ಭಾಷಾ

ಶಾಸ್ತ್ರ ಅಣಿ ಮರಾಠಿ ಭಾಷೆ' ಎನ್ನುವ ಪುಸ್ತಕದಲ್ಲಿ ಕನ್ನಡದಿಂದ ಹಲವಾರು ಶಬ್ಧಗಳು ಮರಾಠಿಗೆ ಹೋಗಿವೆಯೆಂದು ಹೇಳುತ್ತಾರೆ. ಅವು ಗೊಂಧಳಿ, ಕೋಡ, ಖಡ್ಡ, ಗಾಡೀ, ಜೀನ, ಅಪ್ಪಾ, ಆಡ್, ಅಟಪಣೆ ಇತ್ಯಾದಿ ಉದಾಹರಣೆಯಾಗಿವೆ."[೧] ಗೊಂದಳ ಎಂಬ ಶಬ್ಧ ಸ್ವತ: ಇದು ಕನ್ನಡದ ಮೂಲ ಎಂದು ಮರಾಠಿ ವಿದ್ವಾಂಸರು ಹೇಳಿದ್ದಾರೆ. ಆದರೆ ಗೊಂದಲ ಹಾಕುವ ಗೊಂದಲಿಗರು ಆಡುವ ಭಾಷೆ ಮರಾಠಿ ಇರುವುದರಿಂದ ಕೆಲವರ ಸಂಶಯಕ್ಕೆ ಆಸ್ಪದವಾಗಿದೆ. ಆದರೆ ಗೊಂದಲಿಗರೇ ಹೇಳುವಂತೆ "ನಮ್ಮದು ಕನ್ನಡ ಮಿಶ್ರಿತ ಮರಾಠಿ ಭಾಷೆ. ಸಾಮಾಜಿಕ ವಲಯದ ಭಾಷಾಸಂಪರ್ಕ ಮಾಧ್ಯಮದಲ್ಲಿ ನುಡಿಬೆರಕೆಯ ಉಪಭಾಷಾನಿಟ್ಟಿನಲ್ಲಿ ಪ್ರಭಾವ 'ಬೀರಿದೆ ಎಂದು ಹೇಳಬಹುದು. ಗೊಂದಲಿಗರ ಮಾತೃ ಭಾಷೆ ಸಾಂಕೇತಿಕ ಭಾಷೆಯಾಗಿದೆ. ಅದನ್ನು ಗುಪ್ತಭಾಷೆ ಅಥವಾ ಕೋಡ್ ಭಾಷೆ ಎಂದು ಕರೆಯುತ್ತಾರೆ. ನಾನು ಕ್ಷೇತ್ರಕಾರ್ಯಕ್ಕೆ ಹೋದಾಗ ಗೊಂದಲಿಗರ ಮನೆಯಲ್ಲಿ ಶುದ್ಧ ಮರಾಠಿ ಭಾಷೆ ಇರಲಿಲ್ಲ. ಅವರು ಹೆಚ್ಚಾಗಿ ಇತರರೊಡನೆ ಕನ್ನಡದಲ್ಲಿಯೇ ಮಾತನಾಡುತ್ತಿದ್ದರು. ಮನೆಯಲ್ಲಿ ಮಾತ್ರ ಕನ್ನಡ ಮಿಶ್ರಿತ ಮರಾಠಿ ಮಾತನಾಡುತ್ತಿದ್ದರು. ಆದರೆ ಅವರು ಹೇಳುವ ಕಥೆಗಳು ಹಾಡುಗಳು ಕನ್ನಡ ಭಾಷೆಯಲ್ಲಿಯೇ ಇವೆ. ಮಹಾರಾಷ್ಟ್ರದಲ್ಲಿ ಮಾತ್ರ ಮರಾಠಿಯಲ್ಲಿ ಗೊಂದಲ ಪದ್ಯಗಳನ್ನು, ಕಥೆಗಳನ್ನು ಹೇಳುತ್ತಾರೆ. "ಮಧ್ಯ ಕರ್ನಾಟಕವೆಂದು ಗುರುತಿಸುವ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವ ಗೊಂದಲಿಗರಿಗೆ ಕನ್ನಡವೇ ಮಾತೃ ಭಾಷೆಯಾಗಿದೆ."[೨]

ಒಂದು ಶಬ್ಧದ ನಿಷ್ಪತ್ತಿ ನೋಡಬೇಕಾದರೆ ಆ ಭಾಷೆಯ ನೆರೆಹೊರೆಯ ಭಾಷೆಯ ಪ್ರಭಾವವು ಅದರ ಮೇಲೆ ಆಗಿರುವುದು ಕಂಡು ಬರುವುದು. ಕಾರಣ ಭಾಷಾ ಸಂಸ್ಕರಣವೇ ಭಾಷೆಯ ಮುಖ್ಯ ಲಕ್ಷಣವಾಗಿದೆ. ಭಾಷಾ ಸಾಹಿತ್ಯವು ಸಮೃದ್ಧಿಯಾಗಬೇಕಾದರೆ ಇತರ ಭಾಷೆಯ ಎರವಲು ಅತೀ ಮುಖ್ಯವಾಗಿದೆ. ಹಾಗೆಯೇ ಈ ಗೊಂದಲ ಪದವನ್ನು ಕನ್ನಡ ಹಾಗೂ ಇತರ ಭಾಷೆಗಳ ಬೆಳಕಿನಲ್ಲಿ ನೋಡುವುದು ಅವಶ್ಯವಾಗಿದೆ.

"ಕ್ರಿ.ಶ. ೧೦ನೇ ಶತಮಾನದಲ್ಲಿಯೇ ನಾವು ಗೊಂದಣ, ಗೊಂದಳ, ಎಂಬ ರೂಪಗಳನ್ನು ಕಾಣುತ್ತೇವೆ. ಇಂಗ್ಲೀಷನಲ್ಲಿ ಮತ್ತು ತಮಿಳುನಲ್ಲಿ 'ಕೊಂತಳಮ್' ಎಂಬುದಾಗಿ ಅರ್ಥಗಳಿವೆ. ಹಾಗೆಯೇ ತೆಲಗಿನಲ್ಲಿ 'ಗೊಂಡಲಿ, ಗೊಂಡ್ಲಿ' ಎಂಬ ರೂಪಗಳಲ್ಲಿ ಕಾಣುತ್ತೇವೆ. ಇದರ ಅರ್ಥ ನರ್ತಿಸುವಿಕೆ (ಕುಣಿತ) ಎಂಬ ಮೂಲ ಅರ್ಥವನ್ನು ಒಳಗೊಂಡಿದೆ. ನಿಂಗಣ್ಣ ಸಣ್ಣಕ್ಕಿಯವರು ಹೇಳುವಂತೆ ಗೊಂದಲ ಎಂಬ ಪದಕ್ಕೆ ಸಮೀಪವರ್ತಿ ಪದಗಳನ್ನು ನೋಡಿದಾಗ ಅದರ ಮೂಲ ಪ್ರಕೃತಿ ಅಥವಾ ದಾತು ನಮಗೆ ತಿಳಿಯುತ್ತದೆ.

ಉದಾಹರಣೆ: ೧. ಕನ್ನಡ : ಕೊತ್ತು, ಕೊತ್ತಣಿ, ಕೊತ್ತಮಿ, ಗುತ್ತಿ, ಗುದಿ,

೨. ತಮಿಳ್ : ಕೊಂತು, ಕೊತ್ತು.

೩. ಮಲೆಯಾಳ : ಕೊತ್ತು.

೪. ತೆಲುಗು : ಗುತ್ತಿ, ಗುಡಿ.

ದ್ರಾವಿಡಿಯನ್ ಎಟಮಾಲಜಿಕಲ್ ಡಿಕ್ಷನರಿಯ ಪ್ರಕಾರ 'ಗೊಂದಲವು' ದ್ರಾವಿಡ ಮೂಲದ ಪದವೆಂದು ಸ್ಪಷ್ಟವಾಗಿದೆ. ಆದುದರಿಂದಲೇ ಡಾ. ಎಂ.ಬಿ.ಎಮಿನೋ ಮತ್ತು ಟಿ. ಬರೋ ಅವರು ತಮ್ಮ ದ್ರಾವಿಡ ಭಾಷಾ ಜ್ಞಾತಿ ಪದಕೋಶದಲ್ಲಿ ಸ್ಥಾನವನ್ನಿಟ್ಟಿದ್ದಾರೆ. ಒಟ್ಟಾಗಿ ವಿಚಾರಿಸಿದಲ್ಲಿ ಗೊಂದಲ, ಗೊಂದಣ ಮೊದಲಾದ ಈ ಪದಗಳ ರೂಪದಲ್ಲಿ ಕೋನ್ತ್ ಅಥವಾ ಕೊತ್ತ ಎಂಬ ಮೂಲ ಪ್ರಕೃತಿ ಇದ್ದು ಇದರಿಂದ ಉಳಿದ ರೂಪಗಳು ಸಿದ್ದಿಸಿವೆ ಎಂದು ತಿಳಿಯಲು ಸಾಧ್ಯವಿದೆ."[೩]

"ಕನ್ನಡ ಭಾಷೆ ಹಾಗೂ ಇತರ ಭಾಷೆಗಳ ಪದಗಳಲ್ಲಿ ದ್ವಂದ ಪರಿವರ್ತನ ರೂಪಗಳನ್ನು ಕಾಣಬಹುದು. 'ಒಕ್ಕುಂದ (ಕವಿರಾಜ ಮಾರ್ಗ) ದಲ್ಲಿ ಕೊಂತು ಅಥವಾ ಕೊತ್ತು ಎಂಬ ಪ್ರಕೃತಿಗೆ ಆಣ್, ಆಳ್, ಅಲ್ ಅಥವಾ ಅಟ್ ಮೊದಲಾದ ಪ್ರತ್ಯೇಯಗಳು ಸೇರಿ ಗೊಂದಣ, ಗೊಂದಳ, ಗೊಂದಲ ಎಂಬ ರೂಪಗಳು ಸಿದ್ದಿಸಿವೆ ಎಂದು ಹೇಳಬಹುದು."[೪] ಗೊಂದಲವೆನ್ನುವ ಪದವನ್ನು ಹಲವಾರು ಕವಿಗಳು ತಮ್ಮ ಕಾವ್ಯಗಳಲ್ಲಿ ಬಳಸಿದ್ದಾರೆ. ಪುಷ್ಪದಂತ ಕವಿಯು ರಾಷ್ಟ್ರಕೂಟ ಅರಸನಾದ ಮೂರನೇ ಕೃಷ್ಣನ ಮಂತ್ರಿಯಾದ ಭರತ ಮತ್ತು ಭರತನ ಮಗನ ಆಶ್ರಯ ಪಡೆದು ಮಾನ್ಯಖೇಟದಲ್ಲಿ ಇದ್ದನು. ಕರ್ನಾಟಕದಲ್ಲಿದ್ದು ಕಾವ್ಯರಚನೆ ಮಾಡಿದ ಪುಷ್ಪದಂತನ "ಅಪಬ್ರಂಶ ಭಾಷೆಯ ಕಾವ್ಯದಲ್ಲಿ ಕನ್ನಡ ಪದಗಳ ಬಳಕೆಯಾಗಿದ್ದು ಆಶ್ಚರ್ಯದ ವಿಷಯವಲ್ಲ."[೫] ಕಾರಣ ಯಾವುದೇ ಒಂದು ಭಾಷೆಯ ಕಾವ್ಯ ರಚನೆಯಾಗುವಾಗ ಆ ಕಾಲ ಘಟ್ಟದ ಸುತ್ತಮುತ್ತಲಿನ ಪರಿಸರ, ಸಮಾಜ, ಭೌಗೋಳಿಕ ಹಾಗೂ ಭಾಷಾ ಸಂಸ್ಕೃತಿಕರಣ ಈ ಎಲ್ಲ ಅಂಶಗಳು ಕಾರಣವಾಗುತ್ತವೆ ಎಂಬುದಕ್ಕೆ ಸಾಕ್ಷಿಯಾಗಿದೆ.

ಹೇಮಚಂದ್ರನ ಪ್ರಾಕೃತ 'ದೇಶಿನಾಮ ಮಾಲಾ' ಮುಂತಾದ ಕೋಶಗಳಲ್ಲಿ ಒಳಗೊಂಡಿರುವ ಕನ್ನಡ ಶಬ್ಧಗಳನ್ನು ಡಾ. ಕಡಬಡಿ ಹಾಗೂ ಡಾ. ಉಪಾಧ್ಯೆಯವರು ಗುರುತಿಸಿ ಪ್ರಾಕೃತ ಭಾಷೆಯ ಮೇಲೆ ಕನ್ನಡ ಭಾಷೆಯ ಪ್ರಭಾವ ಬೀರಿದೆ ಎಂದು ತೋರಿಸಿದ್ದಾರೆ. ಇದರ ಜೊತೆಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೂ ಗೊಂದಲ, ಗೊಂದಳ ಎಂಬ ಪದಗಳು ಮೂಲದಲ್ಲಿ ನೃತ್ಯ, ಸಮೂಹ ಎಂಬ ಅರ್ಥವಂತಿಕೆಯನ್ನು ಬಳುಸುತ್ತಾ ಬಂದಿದ್ದು ತಿಳಿಯುತ್ತದೆ.

"ಇಲ್ಲಿಯ ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳ ಅಂತ್ಯದಲ್ಲಿರುವ ಟ್, ಳ್, ಣ್, ಲ್ ಗಳು ಪರಸ್ಪರ ವ್ಯತ್ಯಾಸಗೊಳ್ಳುವುದು ಹಲವು ಸಂದರ್ಭಗಳಲ್ಲಿ ತೋರುವುದು. ಆದರೆ ಇಲ್ಲಿ ಬರುವ 'ಹ್ರಸ್ವ' ಮತ್ತು ದೀರ್ಘ ಸ್ವರಗಳ ಬಗ್ಗೆ ತಿಳಿಯುವುದು ಅವಶ್ಯವಿದೆ. 'ಗೊಂದಳ' ಎಂಬಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿರುವ 'ಗೊಂದಲ' ಎಂಬ ಪದವೇ ಸ್ವಲ್ಪ ಪರಿವರ್ತನೆಗೊಂಡು ಮರಾಠಿ ಭಾಷೆಯಲ್ಲಿ 'ಗೋಂಧಳ' ಆಗಿದೆ. ಕಾರಣ ಮರಾಠಿಯಲ್ಲಿ 'ಒ' ಹ್ರಸ್ವವಿಲ್ಲ. ಕೇವಲ ಓ ಎಂಬ ದೀರ್ಘಸ್ವರ ಮಾತ್ರವಿದೆ. ಆದ್ದರಿಂದ ಪ್ರತಿ ಹಂತದಲ್ಲಿಯು

" ಓ' ಸ್ವರವನ್ನೇ ಉಚ್ಚರಿಸುತ್ತಾರೆ. ಹೀಗೆಯೇ ಸಹಜವಾಗಿ ಅವರ ನುಡಿಯಲ್ಲಿ ಗೊಂದಲವು 'ಗೋಂಧಳ' ಆಯಿತು. ಹಾಗೆಯೇ ಪುನ: ಪರಿವರ್ತನೆಯ ನಿಯಮದ ಪ್ರಕಾರ ಅದು ಗೊಂದಳ ಆಯಿತು."[೬]

"ಕೆಲವು ಮರಾಠಿ ಅಭಿಮಾನಿಗಳು 'ಗೊಂದಲ' ಎಂಬ ಪದವು ಪ್ರಾಕೃತದಿಂದ ಬಂದಿದೆ ಎಂಬುದಾಗಿ ವಾದ ಮಾಡಿ ನಿರಾಶರಾಗಿದ್ದುಂಟು. 'ಪುಷ್ಪದಂತನಿಂದ ಕ್ರಿ. ಶ. ೯೬೫ ರಲ್ಲಿ ರಚನೆಯಾದ 'ಣಾಯ ಕುಮಾರ ಚರಿಉ' ಪ್ರಾಕೃತ ಗ್ರಂಥದಲ್ಲಿ 'ಗೊಂದಲ' ಎಂಬ ಶಬ್ಧದ ಬಳಕೆಯಾಗಿದೆ ಎಂಬ ವಾದವಿದೆ. ಆದರೆ ಅದು ಕನ್ನಡದಲ್ಲಿಯಂತೆ ಗೊಂದಲ ಅಲ್ಲ ಎಂಬ ತೀರ್ಮಾನಕ್ಕೆ ಬರಲಾಯಿತು. ಏಕೆಂದರೆ ದೇವನಾಗರಿ ಲಿಪಿಯಲ್ಲಿ ಹೃಸ್ವ 'ಒ' ಸ್ವರವಿಲ್ಲ ಎಂಬುದೇ ಕಾರಣವಾಗಿದೆ."[೭]

ಕವಿಗಳ ಕೃತಿಯಂತೆ ಅವರ ಕಾಲಮಾನವೂ ಮುಖ್ಯ ಸಂಗತಿಯಾಗಿದೆ. ಪುಷ್ಪದಂತನು ಬರೆದ ಮಹಾಪುರಾಣ ಕೃತಿರಚನೆಗಿಂತ ಮುಂಚೆ ಪಂಪನು ತನ್ನ ಕಾವ್ಯ ರಚನೆಯನ್ನು ಮಾಡಿದ್ದ ಎಂಬುದು ತಿಳಿಯುತ್ತದೆ. ಪುಷ್ಪದಂತನ ಕಾವ್ಯ ರಚನೆ ಕಾಲ ಹಾಗೂ ಪಂಪನ ಕಾವ್ಯದ ರಚನೆ ಕಾಲ ನೋಡಿದಾಗ ಕಾಲು ಶತಮಾನಗಳ ಅಂತರವಿರುವುದು ಕಂಡು ಬರುತ್ತದೆ. ಆದ್ದರಿಂದ ಪಂಪನೇ ಮೊದಲು 'ಗೊಂದಲ' ಪದವನ್ನು ಬಳಸಿದನೆಂಬುದಕ್ಕೆ ಆಧಾರವಿದೆ.

**೨.೩ ಪ್ರಾಚೀನ ಸಾಹಿತ್ಯದಲ್ಲಿ ಗೊಂದಳ :**

ಗೊಂದಲ ಎಂಬುದು ಒಂದು ಶಬ್ಧ ತನ್ನದೇ ಆದ ಐತಿಹ್ಯವನ್ನು ಹೊಂದಿದೆ. ಪ್ರಾಚೀನ ಸಾಹಿತ್ಯದ ಕೃತಿಗಳನ್ನು ಅವಲೋಕಿಸಿದಾಗ ನಮಗೆ ಈ ಪದ ಬಹಳಷ್ಟು ಹಿಂದೆಯೇ ಪ್ರಚಲಿತವಿದ್ದಂತೆ ತೋರುತ್ತದೆ. ತನ್ನದೇ ಆದ ಇತಿಹಾಸವನ್ನು ಹೊಂದಿದ ಈ ಗೊಂದಲವು ರಾಜ ಮಾಹಾರಾಜರ ಕಾಲಕ್ಕೆ ಗುಡಿಗಳಲ್ಲಿ ಅಂಗಣದಲ್ಲಿ ಮನರಂಜನೆಯ ನೃತ್ಯವಾಗಿದೆ. ಅದೊಂದು ದೇವಿ ಸ್ತುತಿಯ ಕೌಶಲ್ಯವಾಗಿದೆ. ಮೂಲವಾಗಿ ಇದು ತುಳಜಾಪುರದ ಅಂಬಾಭವಾನಿಯನ್ನು ಪೂಜಿಸುವುದಾಗಿದೆ. 'ಗೋಜಲು ಕುಣಿತ' ಎಂಬ ಅರ್ಥ ಕೊಡುವ ತಮ್ಮ ಪೂಜಾ ವಿಧಾನವಾದ 'ಗೊಂದಲ' ಎಂಬುದರಿಂದ ಇವರಿಗೆ ಗೊಂದಲಿಗರೆಂದು ಹೆಸರು ಬಂದಿದೆ. ಜಮದಗ್ನಿ ಆತನ ಪತ್ನಿ ರೇಣುಕೆ ಗೊಂದಲಿಗರ ಸಮುದಾಯದ ಸೃಷ್ಟಿಕರ್ತರೆಂದು, ನಿಜಾಮರ ಪ್ರದೇಶಗಳೂ ತಮ್ಮ ಮೂಲಸ್ಥಾನಗಳು ಆದ ಮಾಹುರ ಮತ್ತು ತುಳಜಾಪುರಗಳಿಂದ ಇನ್ನೂರು ಮುನ್ನೂರು ವರ್ಷಗಳ ಹಿಂದೆ ಡೆಕ್ಕನ್ ಪ್ರದೇಶಕ್ಕೆ ತಾವು ಬಂದುದಾಗಿಯೂ ಗೊಂದಲಿಗರು ಹೇಳಿಕೊಳ್ಳುತ್ತಾರೆ. ಮಾಹೂರವು ಅಂಬಾಭವಾನಿಯ ಮೂಲಸ್ಥಾನ. ಅಲ್ಲಿ ರೇಣುಕೆಯಾಗಿ ರೂಪ ತಾಳಿದಳೆಂದು ಚಂದ್ರಕಾಂತ ಪೊಕಳೆಯವರು ತಮ್ಮ 'ತುಳಜಾಭವಾನಿ'

ಕೃತಿಯಲ್ಲಿ ತಿಳಿಸಿದ್ದಾರೆ. “೧೭ನೇ ಶತಮಾನದ ಆದಿಯಲ್ಲಿ ತುಳಜಾಪುರದ ಅಂಬಾಭವಾನಿಯನ್ನು ಪೂಜಿಸುವುದು ಡೆಕನ್ ಪ್ರದೇಶದ ಉದ್ದಗಲಗಳನ್ನು ವ್ಯಾಪಿಸಿಕೊಂಡಾಗ, ಎಲ್ಲ ಮರಾಠಿಗರ ಮನೆಗಳಲ್ಲಿ ಆಕೆಯ ಪೂಜೆ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ಗೊಂದಲಿಗರ ಹಾಡುಗಳು ಗೌರವಿಸಲ್ಪಟ್ಟವು. ಧಾರ್ಮಿಕ ಮತ್ತು ರಾಜಕೀಯ ಚಟುವಟಿಕೆಗಳ ಕಾಲವಾಗಿದ್ದಾಗ ಮುಸಲ್ಮಾನರ ದಾಳಿಗಳು ಜನರನ್ನು ಬಹಳಷ್ಟು ನೋಯಿಸಿತ್ತು. ಆ ವೇಳೆಯಲ್ಲಿ ಶಿವಾಜಿ ಮಹಾರಾಜನು ಗೊಂದಲಿಗರಿಗೆ ಗುಪ್ತಚರ್ಯ ಕಾರ್ಯಕ್ಕೆ ನೇಮಿಸಲಾಯಿತು. ಹಳ್ಳಿಹಳ್ಳಿಗಳನ್ನು ತಿರುಗುತ್ತಾ ಅವರು ಸುದ್ಧಿವಾಹಕಗಳಾದರು.”[೬] ಅಂದರೆ ಶಿವಾಜಿಯ ಕಾಲದಲ್ಲಿಯೇ ಗೊಂದಲಿಗರು ಇದ್ದರು ಹಾಗೂ ಅವರ ಗೊಂದಲ ಕಾರ್ಯಗಳಿಗೆ ಮನ್ನಣೆ ಇತ್ತು ಎಂಬುದು ತಿಳಿದು ಬರುತ್ತದೆ.

‘ತುಳಜಾಭವಾನಿ’ ಸಾವಿರ ವರ್ಷಕ್ಕೂ ಮುಂಚೆಯೇ ಇದ್ದಳು. ರೇಣುಕೆ ತುಳಜಾಭವಾನಿಗಿಂತ ಪ್ರಾಚೀನಳೆಂದು ಗೊಂದಲಿಗರ ನಂಬಿಕೆ. ಆದರೆ ರೇಣುಕೆಗಿಂತ ಹೆಚ್ಚು ತುಳಜಾಭವಾನಿಗೆ ಗೊಂದಳದ ಸಂಬಂಧ ಇರುವುದು ಕಂಡು ಬರುತ್ತದೆ. ಯಾದವರ ಕಾಲದ ಮರಾಠಿ ವಾಙ್ಮಯದಲ್ಲಿ ಬಂದಿರುವ ಗೊಂದಳದ ಉಲ್ಲೇಖದಿಂದ ಇದು ಮೂಲತ ಭೂತಮಾತೆಯ ಉತ್ಸವವೆಂದು ತೋರುತ್ತದೆ. ‘ಭೂತಮಾತೆ’ ಎಂಬ ದೇವತೆ ಬಹುಲೋಕ ಪ್ರೀಯವಾಗಿ ರೇಣುಕೆಯಲ್ಲಿ ಸಮಾವಿಷ್ಟವಾದಂತೆ ಕಂಡು ಬರುತ್ತದೆ. ವರಂಗಲ್ಲಿನ ಗಣಪತಿ ದೇವನ ಗಜಸೇನೆಯ ಮುಖ್ಯಸ್ಥ ಜಾಯಣ ಕ್ರಿ.ಶ. ೧೨೪೦ ರಲ್ಲಿ ಬರೆದ ‘ನೃತ್ಯ ರತ್ನಾವಲಿ’ ಗ್ರಂಥದಲ್ಲಿ ಕಲ್ಯಾಣದ ಚಾಲುಕ್ಯ ಚಕ್ರವರ್ತಿಯಾದ ಮೂರನೇ ಸೋಮೇಶ್ವರನು ತನ್ನ ರಾಜಧಾನಿಯಲ್ಲಿ ಭೂತಮಾತಾ ಮಹೋತ್ಸವದಲ್ಲಿ ಈ ಗೊಂದಳದ ಕಾರ್ಯಕ್ರಮವನ್ನು ಏರ್ಪಡಿಸಿದ್ದನೆಂದು ಬರೆದಿದ್ದಾನೆ.

“ಭೂತಮಾತೆ ಮಹೋತ್ಸವದ ವರ್ಣನೆಗಳು ಸ್ಕಂದಪುರಾಣ, ಜ್ಞಾನೇಶ್ವರಿ ಗೀತಾರ್ಣವ ಮುಂತಾದ ಕೃತಿಗಳಲ್ಲಿ ದೊರೆಯುತ್ತವೆ. ‘ಜ್ಞಾನೇಶ್ವರಿ’ ಗ್ರಂಥದಲ್ಲಿ ಗೊಂದಲಿ ಎಂಬ ಶಬ್ಧ ಬಂದಿದ್ದು ಅದು ‘ಪಿಶಾಚಿ’ ಅಥವಾ ‘ಭೂತ’ ಎಂಬ ಅರ್ಥವನ್ನು ಹೊಂದಿದೆ. ದಾಸೋಪಂತನ ‘ಗೀತಾವರ್ಣವ’ ಗ್ರಂಥದಲ್ಲಿ ಗೊಂದಳಿ ಹಾಗೂ ಭೂತ ಈ ಎರಡು ಸಹಚರ್ಯಗಳು ಇದ್ದುದು ತಿಳಿದು ಬರುತ್ತದೆ.

‘ಭೂತಾಂಚಾ ಗೊಂದಳಿ ಪಡಿಲೇಂ । ತೇ ಮಾಣೂಸ್ ನಷ್ಟೇ ಆಪುಲೇಂ । ತೈಸೇ ಪಾಪಾ ಆಧೀನ ಆಲೆಂ । ಜೇಣೆಂ ಹೋ ಈಲ’ ಆದ್ಯ ಮಹಾನುಭಾವರ ವಾಙ್ಮಯದಲ್ಲಿ ದೃಷ್ಟಾಂತ ರೂಪದಲ್ಲಿ ‘ಗೊಂದಳ’ ಶಬ್ಧದ ಅನೇಕ ಉಲ್ಲೇಖಗಳು ದೊರೆಯುತ್ತವೆ. ಅವುಗಳಲ್ಲಿ ಸರ್ವಶಕ್ತಿಯ ಮೇಳ ಯೋಗಿನಿ ಚಕ್ರದ ಗೊಂದಳ, ಚಕ್ರ ಗೊಂದಳ ಎಂಬುದು ಸ್ಪಷ್ಟ. ಇವುಗಳಿಂದ ಇದು ಭೂತಮಾತೆಗೆ ಸಂಬಂಧಪಟ್ಟ ಉಪಾಸನ ಕ್ರಮವಾಗಿದೆ.

“ಸಂಗೀತ ರತ್ನಾಕರ, ಸಂಗೀತ ಸಮಯಸಾರ, ನೃತ್ಯ ರತ್ನಾವಳಿ ಎಂಬ ಗ್ರಂಥಗಳಲ್ಲಿ ಗೊಂದಳದ ನೃತ್ಯ ವಿವರಣೆ ಸಿಗುತ್ತದೆ. ಇದು ‘ಗೊಂಡಲೀ ನೃತ್ಯ’ ಎಂಬ ಹೆಸರಿನಲ್ಲಿ

ಪ್ರಯೋಗಗೊಂಡಿದೆ. ಗೌಂಡಲಿ, ಗುಂಡಲೀ, ಗೊಂಡಲೀ, ಕುಂಡಲೀ ಮುಂತಾದವು ಗೊಂದಳಿಯ ಪರ್ಯಾಯ ನಾಮಗಳಾಗಿವೆ. ಪ್ರಾಚೀನ ಸಂಸ್ಕೃತ ಗ್ರಂಥವಾದ 'ಅಮಲಿಕಾಗ್ರಾಮ ಮಹಾತ್ಮ' ದಲ್ಲಿ ಗೊಂಡಲೀ ನೃತ್ಯದ ವರ್ಣನೆಯಿದೆ. ಅದನ್ನು ಹೀಗೆ ವರ್ಣಿಸಲಾಗಿದೆ. 'ಕವಡೆಗಳ ಮಾಲೆಯನ್ನು ಹಾಕಿಕೊಂಡು ದಿವಟಿಗೆ ಹಿಡಿದು ಗೊಂದಳ ಹಾಕಬೇಕು. ಎಲ್ಲಿ ಗೊಂದಳ ಹಾಕಬೇಕು ಅಲ್ಲಿ ಆ ಸ್ಥಳಕ್ಕೆ ಎಲ್ಲರನ್ನು ಆಮಂತ್ರಿಸಬೇಕು. ಗೊಂದಳಕ್ಕೆ ದಿವಟಿಗೆ, ಕವಡೆಗಳ ಮಾಲೆ, ಮಾತೃ ವಾದ್ಯ, ತಾಳ, ಶಂಖ, ಮೃದುಂಗ, ಚಿಪಳೀ, ವೀಣೆ, ಚೆಂಡೆ, ಮುರಜ ಇತ್ಯಾದಿ ವ್ಯಾದ್ಯಗಳ ಅಗತ್ಯವಿರುತ್ತದೆ. ಗೊಂದಲಿ ವೃಂದದಲ್ಲಿ ಉತ್ತಮ, ಮಧ್ಯಮ ಹಾಗೂ ಕನಿಷ್ಟ ಹೀಗೆ ಮೂರು ಬೇದಗಳಿವೆ. ಉತ್ತಮ ವೃಂದದಲ್ಲಿ ೩೨ ಜನ ಇರುತ್ತಾರೆ. ೪ ಮುಖ್ಯಗಾಯಕರು, ೮ ಸಮಗಾಯಕರು, ೮ ನರ್ತಕರು, ೪ ವಾಂಶಿಕರು, ೪ ಮೃದಂಗವಾದಕರು ೪ ತಾಳದಾರಿಗಳು. ಮಧ್ಯಮ ವೃಂದದಲ್ಲಿ ಒಟ್ಟು ೧೬ ಮಂದಿ ಮತ್ತು ಕನಿಷ್ಟ ವೃಂದದಲ್ಲಿ ೮ ಮಂದಿ ಹೀಗೆ ಪ್ರಾಚೀನ ಗೊಂದಳಿಯಲ್ಲಿ ವ್ಯಕ್ತಿಗಳ ಸಂಖ್ಯೆ ನಿರ್ದಿಷ್ಟ ಇರುತ್ತದೆ."[೯] ಪ್ರಾಚೀನ ಸಾಹಿತ್ಯ ಗಮನಿಸಿದಾಗ ಇಲ್ಲಿ ಗೊಂದಲ ಹಾಕುವವರ ಸಂಖ್ಯೆ ಹೆಚ್ಚು ಇದ್ದು ಅಲ್ಲಿ ವಾದ್ಯಗಳ ಸಂಖ್ಯೆಯೂ ಹೆಚ್ಚಾಗಿದ್ದು ನೃತ್ಯ ಮೇಳವು ಬಹು ದೊಡ್ಡ ಗಾತ್ರದಲ್ಲಿತ್ತು ಎಂದು ಹೇಳಬಹುದು.

"ಕಲ್ಯಾಣಿಯ ರಾಜನಾದ ತೃತೀಯ ಸೋಮೇಶ್ವರನು ತನ್ನ ರಾಜಧಾನಿಯಾದ ಕಲ್ಯಾಣಿಯಲ್ಲಿ ಭೂತ ಮಾತೃ ಮಹೋತ್ಸವದ ನಿಮಿತ್ಯ ಗೊಂಡಲೀ ನೃತ್ಯವನ್ನು ಏರ್ಪಡಿಸಿದನು. ಮಹಾರಾಷ್ಟ್ರದಲ್ಲಿ ಗೊಂಡಲೀ ಎಂದು ಗುರುತಿಸಲಾಗುವ ಈ ನೃತ್ಯಕ್ಕೆ ಕೆಲವು ಸುಧಾರಣೆಗಳನ್ನು ತಂದು ಸೋಮೇಶ್ವರನು ಅದಕ್ಕೆ 'ಚಿತ್ರಗೊಂಡಲೀ' ಎಂದು ಕರೆದನು. ಜಾಯಣನು ಉಲ್ಲೇಖಿಸಿದ ಈ ಗೊಂಡಲಿ ನೃತ್ಯವೇ ಇಂದಿನ ಗೊಂದಳದ ಪ್ರಾಚೀನ ರೂಪ. ಹಲವರು ಇದರ ಬಗ್ಗೆ ಚರ್ಚೆ ನಡೆಸಿದರು. ಇದಕ್ಕೆ ಸರಿಯಾದ ಪುರಾವೆಗಳಿಗೆ ಸಾಕ್ಷಿಯಾಗಿದೆ. ಇಲ್ಲಿ ಯಾವುದೇ ಉಹಾಪೋಹಗಳಿಗೆ ಆಸ್ಪದವಿಲ್ಲ. ಶಾರ್ಙ್ಗದೇವನು (ಸಂಗೀತಾ ರತ್ನಾಕರ ಎಂಬ ಗ್ರಂಥ ರಚಿಸಿದವನು) ಯಾದವ ಕಾಲದ ಸಂಗೀತ ತಜ್ಞ, ಇವನು ರಚಿಸಿದ ಹಲವು ದೇಸಿ ನೃತ್ಯಗಳಲ್ಲಿ ಗೌಂಡಲಿ ನೃತ್ಯದ ಸಮಾಗಮವಿದೆ. ಶಾರ್ಙ್ಗದೇವನು ತಜ್ಞರ ಸಾಕ್ಷಿ ನೀಡಿ 'ಗೌಂಡಲ್ಯಾ ಮಂಡಳಂ ಪ್ರೋತಜ್ಞೈ ಕರ್ನಾಟಕ ದೇಶಜಮ್' ದಾಖಲಿಸಿರುವುದು ಚಿಂತನಿಯವಾದುದು."[೧೦]

ಒಟ್ಟಿನಲ್ಲಿ ಗೊಂದಳಿ ಎಂಬುದೊಂದು ನೃತ್ಯ ಅಭಿನಯದ ದೇವತಾ ಆರಾಧನೆಯ ಕಥನ ಸಾಹಿತ್ಯವಾಗಿದೆ ಎನ್ನಬಹುದು.

"ವಿವಿಧ ವೃತ್ತಿಗಾಯಕರನ್ನು ಕಥೋಪಜೀವಿಗಳನ್ನು ಹೊಂದಿದ ಕನ್ನಡನಾಡು ಜನಪದ ಸಂಸ್ಕೃತಿಯ ಅಪೂರ್ವಗಣಿಯಾಗಿದೆ. ಈ ವೃತ್ತಿಗಾಯಕರು ದಕ್ಷಿಣ ಭಾರತದ ವ್ಯಾಪ್ತಿಯಲ್ಲಿ

ವಾಸಿಸುತ್ತಿರುವ ವೃತ್ತಿ ಕಲೋಪಜೀವಿಗಳಲ್ಲಿ ತಮ್ಮ ಮೂಲ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದವರಲ್ಲಿ  ಗೊಂದಲಿಗರ ಸಮುದಾಯವೂ ಒಂದು. ಅರೆ ಅಲೆಮಾರಿಯಾದ ಇವರು ಭಾರತದಂತಹ ಬಹು ಜನಾಂಗೀಯ, ಬಹುಮತದ ಧರ್ಮದ ಬಹುಭಾಷೆಯ, ವಿಭಿನ್ನ ಸಂಸ್ಕೃತಿಯ ಬಹುವಿಸ್ತಾರದ ಭೂಪ್ರದೇಶದಲ್ಲಿ ಅಲೆಮಾರಿಗಳಾಗಿ ಜೀವನ ನಿರ್ವಹಿಸುತ್ತಲೇ ತಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ವಿಶಿಷ್ಟ ಸಂಸ್ಕೃತಿಯ ಹರಿಕಾರರಾಗಿ ಬದುಕಿ ಬಾಳಿದವರು.”[೧೧] ಇಂತಹ ಕಲಾ ಪರಂಪರೆಯನ್ನು ಹೊಂದಿದ ಇವರ ಈ “ಗೊಂದಲ ಹಾಕುವ ಆಚರಣಾ ವಿಧಾನ ಅತ್ಯಂತ ಪ್ರಾಚೀನವಾಗಿದ್ದು, ದೇವಿ ಆರಾಧನೆಯ ಈ ನೃತ್ಯ ಒಂದು ಸಾಮೂಹಿಕ ನೃತ್ಯವಾಗಿರುವುದನ್ನು ಕನ್ನಡದ ಪ್ರಾಚೀನ ಕಾವ್ಯಗಳು ದಾಖಲಿಸಿವೆ. ಒಂಬತ್ತು ಮತ್ತು ಹತ್ತನೆಯ ಶತಮಾನದ ಕನ್ನಡ ಕಾವ್ಯಗಳಾದ ಆದಿಪುರಾಣ, ಧರ್ಮಾಮೃತ, ಅಜಿತಪುರಾಣ ವರ್ಧಮಾನ ಪುರಾಣಗಳಲ್ಲಿ ಗೊಂದಣ, ಗೊಂದಣಿ, ಗೊಂದಲ, ಗೊಂಧಳ ಎಂಬ ಪದಗಳು ಈ ಹಿನ್ನೆಲೆಯಲ್ಲಿಯೇ ಕಂಡು ಬರುವುದು ಸಾಕ್ಷಿ ಎನಿಸುತ್ತದೆ. ಈ ಕಾವ್ಯಗಳಲ್ಲಿ ಉಲ್ಲೇಖಿತವಾಗಿರುವ ಬಹುಮುಖ್ಯ ಅಂಶವೆಂದರೆ ಗೊಂದಲ ಹಾಕುವವರು ಮಹಿಳೆಯರು ಎಂಬುದು ಪ್ರಾಚೀನ ಕಾವ್ಯಗಳಲ್ಲಿ ಕಂಡು ಬರುವ ಈ ಸ್ವರೂಪ ಸಮಕಾಲಿನ ಗೊಂದಲಿಗರ ಸಮಾಜದಲ್ಲಿ ಇಲ್ಲದಿರುವುದು ಕುತೂಹಲಕರ ಸಂಗತಿಯಾಗಿದೆ.”[೧೨]

ಆಧುನಿಕ ಸಾಮಾಜಿಕ ಪರಿವರ್ತನೆಯ ಗಾಳಿ ಇವರ ಮೇಲೆ ಪ್ರಭಾವ ಬೀರಿದೆ ಎನ್ನುದಕ್ಕೆ ಇದು ಸಾಕ್ಷಿಯಾಗಿದೆ. “ವಿದ್ಯಾದೇವತೆಗಳೆನಿಸಿ ದಿವಿಜ ಸುಂದರಿಯರ್ ಗೊಂದಣ ಮಾಡುವಲ್ಲಿ ಕಡೆಗಣ್ಗೊಳ್ ತುಳುಂಕಿಯುಂ ಕದಪಿನೊಳ್’ (ಆದಿಪುರಾಣ ೭-೧೨೬) ‘ಇಂದ್ರ ಸ್ತ್ರೀಯರಾನಂದಿರಂ ಗೊಂದಳದೆ ಕುಣಿದು ಲೀಲಾನೃತ್ಯದಿಂ’ (ಅಜಿತ ಪುರಾಣ ೫-೪೩) ‘ಅಳವಿಗಜೆದುತ್ಸವದೆ ಗೊಂದಣಂಗುಣಿವ ಗಣಿಕೆಯರ ಪದ ಪ್ರಚಾರಕ್ಕೆ ಬೆರ್ಚೆ’ (ಚಂದ್ರ ಪುರಾಣ ೧೩-೨೫) ‘ನವ್ಯ ನರ್ತಕ ನರ್ತಕಿ ಪ್ರಯತಂ ಬಹಳ ಗೊಂದಣಾಸ್ಥಾನ ತೆಲಗುವಾಗಿ’ (ಚೊಮಯ್ಯ ರಗಳೆನಾಗಿ) ಹೀಗೆ ಅನೇಕ ಪ್ರಾಚೀನ ಕಾವ್ಯಗಳು ಈ ಗೊಂದಲ ನೃತ್ಯದ ಬಗೆಗೆ ವ್ಯಕ್ತಪಡಿಸಿರುವುದು ಕಂಡು ಬರುತ್ತದೆ. ಈ ನೃತ್ಯ ಅಥವಾ ಧಾರ್ಮಿಕ ವಿಧಿ ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿದ್ದುದು ಸ್ಪಷ್ಟವಾಗುತ್ತದೆ. ಈ ಗೊಂದಲವು ದೇವಸ್ಥಾನಗಳಲ್ಲಿ ರಾಜನ ಮುಂದೆ ಅತ್ಯಂತ ಭಕ್ತಿಭಾವದಿಂದ ನೃತ್ಯಗಾರ್ತಿಯರು, ನೃತ್ಯಗಾರರು ಆನಂದದಿಂದ ಅತ್ಯಂತ ವಿಶಿಷ್ಟವಾಗಿ ಈ ಗೊಂದಲ ನೃತ್ಯ ಪ್ರದರ್ಶಿಸುತ್ತಿದ್ದರೆಂಬುದನ್ನು ಕನ್ನಡ ಕಾವ್ಯಗಳು ದಾಖಲಿಸಿವೆ. ಕರ್ನಾಟಕದಲ್ಲಿ ಹಾಡುಗಬ್ಬವನ್ನು ಹಾಡಿ ಜನರನ್ನು ತಣಿಸುವ ಅನೇಕ ಸಮುದಾಯಗಳಿವೆ. ಅವರ ಉದ್ಯೋಗ ಹಾಡುವುದು ಕಥೆ ಹೇಳುವುದು. ಕೆಲವರಂತೂ ಕರ್ನಾಟಕದ ತುಂಬ ಅಲೆದಾಡುತ್ತಾರೆ.  ಅಲ್ಲದೇ ನೆರೆಯ ರಾಜ್ಯದಲ್ಲಿದ್ದಾರೆ. ಸುಮಾರು ಏಳು ಅಥವಾ ಎಂಟನೇ ಶತಮಾನದಿಂದ ಕಥೆ ಹೇಳಿ ಮನವನ್ನು ತಣಿಸಿದ ದೊಡ್ಡ ಪಂಗಡವು

ಈಗಲೂ ಕರ್ನಾಟಕದಲ್ಲಿದೆ. ಈ ಪಂಗಡದ ಜನರೇ ಈಗಿನ ಗೊಂದಲಿಗರು. ಎಂಬ ಅಭಿಪ್ರಾಯಕ್ಕೆ ಜಾನಪದ ವಿದ್ವಾಂಸರು ಬಂದಿದ್ದಾರೆ."[೧೩] ಒಂದು ವಿಶಿಷ್ಟ ಆಚರಣಾ ಸಂಸ್ಕೃತಿಯನ್ನು ಹೊಂದಿದ ಈ ಗೊಂದಲಿಗರ ಸಂಸ್ಕೃತಿಯು ಮೂಲತ: ಮಾತೃದೇವತೆಯ ಆರಾಧನಾ ಸ್ವರೂಪಿಗಳಿದ್ದಾರೆ. ಧಾರ್ಮಿಕ ವಿಧಿಯ ನೃತ್ಯಗಾರಿಕೆ ಪ್ರಾಚೀನ ಕಾಲದಿಂದಲೂ ಮಹಿಳೆಯರಿಂದಲೇ ಪ್ರದರ್ಶನಗೊಳ್ಳುತ್ತಿತ್ತು ಎಂಬುದು ಸ್ಪಷ್ಟವಾದ ಸಂಗತಿಯಾಗಿದೆ. ಶಕ್ತಿ ದೇವತೆಯ ಈ ಆರಾಧನಾ ನೃತ್ಯ ಗೊಂದಲಿಗರ ಕುಲದೈವ 'ಮಾತೃರೂಪಿ' ಯಾಗಿರುವುದರಿಂದ ಆಕೆ ಪಾರ್ವತಿ, ಅಂಬಾಭವಾನಿ, ಜಗದಂಬೆ, ಮಹಾಲಕ್ಷ್ಮಿ, ಯಲ್ಲಮ್ಮ ಇತ್ಯಾದಿ ಆಗಿರುವುದರಿಂದ ಈ ಗೊಂದಲ ಹಾಕುವುದು ಮೂಲತ: ಮಾತೃಪ್ರಧಾನ ನೆಲೆಯಿಂದಲೇ ಆಗಿದೆ. ಈ ಧಾರ್ಮಿಕ ವಿಧಿ ವಿಧಾನಗಳು ಪ್ರದರ್ಶನಗೊಳ್ಳುತ್ತಿದ್ದು, ಮಹಿಳೆಯರೇ ಗೊಂದಲ ಹಾಕುತ್ತಿದ್ದರೆಂದು ಪ್ರಾಚೀನ ಕಾವ್ಯಗಳು ಪ್ರಸ್ತುತ ಪಡಿಸುತ್ತವೆ. ಇದಕ್ಕೆ ಪೂರಕವಾಗಿ ಪಂಪನ ಆದಿಪುರಾಣದಲ್ಲಿನ ಈ ಮಾತುಗಳನ್ನು ಗಮನಿಸಬಹುದು."ಅಂತು ದೇವೇಂದ್ರಕರ ಸರೋಜಾ ಕರದೋಳ್ ಸಮುತ್ಫಲ್ಲಮುಖ ಪದ್ಮಂಗಳಿಂ ಪದ್ಮಿನಿಗ ಳೆಳಿಸಿ ಸುರೇಂದ್ರ ತಾರಾಹಾರ ಮುಕ್ತಾಫಳ ಪ್ರತಿಬಿಂಬಿತ ತನುಗಳಂ ವಿದ್ಯಾದೇವತೆಗಳೆನಿಸಿ ದಿವಿಜ ಸೌಂದರಿಯರ್ ಗೊಂದಣ ಮಾಡುವಲ್ಲಿ ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುಳಿವೋಹಿಯುಂ ಭ್ರೂವಿಭ್ರಮದೊಳ್ ಪೊನ್ಲ್ವರಿದುಂ ಅರುಣಾಧರದೊಳ್ ಕೊಳಂ ಗೊಂಡುಂ ದರಹಸಿತದೊಳ್ ಬೆಳ್ಳಂಗೆಡೆದುಂ ಅಂಗರಾಗದೊಳ್ ರಂಗಂ ಒಡೆದು ಸಿರಿಸದಾಮ ಕೋಮಲೆಯರ ಭುಜಲತೆಗಳೊಳ್ ಪರಸಿಯುಂ ಘನಸ್ತನಂಗಳೊಳೆಡಪಿಯುಂ ಗಂಭೀರ ನಾಭಿಯೊಳ್ ಸುಳಿಗೊಂಡುಂ ನಿತಂಬದೊಳ್ ತುಳೆಂಬಿಯುಂ ಮೃದು ಪದದೊಳಂದಂ ಬಡೆದುಂ ಆಕೆಗಳಂಗೋಪಾಂಗದೊಳಿಂತು ನಾಟ್ಯರಸಮೆ ತೀವಿ ತುಳುಂಕುಗಟ್ಟಿ ವಿವಿಜ ಸಾಮಾನಿಕ ಜನಕ್ಕುಂ ನಾಬಿರಾಜಾದಿ ಮನುಜ ಸಭೆಗಂ ಅಶ್ಚರ್ಯಮಂ ಮಾಡಿದಾಗಳ್" (ಆದಿಪುರಾಣ ೭-೧೨೬) "ಕವಿಗಮಕಿ ವಾದಿ ವಾಗ್ಮಿಕ ವಾಹಕ ಗಜಾರೋಹಕ ಸರಸ ಗಾಯಕ ಭಾವಚಿತ್ರಕ ಪುಣ್ಯಪಾಠಕ ನವ್ಯನರ್ತಕ ನರ್ತಕೀ ಪ್ರಯುತಂ ಬಹಳ ಗೊಂದಣಾಸ್ಥಾನನಾಗಿ ಕೆಂಪಡರ್ದ ಕಂಗಳಿಂ ಕೆತ್ತುವ ಮೀಸೆಯಿಂ ಚಿತ್ತದ ಕ್ಷೋಭೆಯಿಂ ಮನದ ಕಡುಗೋಪದಿಂ ಚಾಳುಕ್ಯ ಚಕ್ರೇಶ್ವರ ಕಲಿಯುಗ ರಾವಣಂ ಪೆರ್ಮಾಡಿರಾಯರಂ (ತೆಲಗು ಜೊಮ್ಮಯರಗಳೆ) ಅರಮನೆಗೆ ಪೋಪ ನೃಪರಂದಳದ ಗೊಂದಳದ ತರುಣಿಯರ ಮಣಿಭೂಷಣಾವಳಿಯ ಗಾವಳಿಯ ಪರಮ ಭೀಷಣ ಪಟುಭಟಾಳಿಗಳ ಕೇಳಿಗಳ ಪಾಳೆಯಂ ಕಣ್ಣೆಸೆದುದು" (ಚೆನ್ನಬಸವ ಪುರಾಣ ೪೨-೧೫)

ಇಲ್ಲಿ 'ವಿದ್ಯಾ ದೇವತೆಗಳೆನಿಸಿ ದಿವಿಜ ಸೌಂದರಿಯರ್ ಗೊಂದಣ ಮಾಡುವಲ್ಲಿ, ಗೊಂದಣಂಗುಣಿತ ಕಣಿಕೆಯರ' 'ನವ್ಯ ನರ್ತಕ ನರ್ತಕೀ ಪ್ರಯುತಂ ಬಹಳ ಗೊಂದಣಾ ಸ್ಥಾನಾಗಿ' 'ಗೊಂದಳದ ತರುಣಿಯರ ಮಣಿಭೂಷಣಾವಳಿಯ' ಎನ್ನುವಲ್ಲಿ ಪ್ರಾಚೀನ ಮತ್ತು

ಮಧ್ಯಕಾಲದ ಮಹಿಳೆಯರು ಈ ಗೊಂದಲ ನೃತ್ಯ ಮಾಡುತ್ತಿದ್ದುದು ಸ್ಪಷ್ಟವಾಗಿದೆ. ದ್ರಾವಿಡ ಮೂಲವಾದ ಮಾತೃಪ್ರಧಾನ ಸಂಸ್ಕೃತಿಯ ಈ ಆಚರಣೆಯು ಆರ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಅನ್ಯ ಅರಸರ ಆಕ್ರಮಣ ಕಾಲದಲ್ಲಿ ಮಹಿಳೆಯ ಮುಕ್ತ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದುದರ ಪರಿಣಾಮವಾಗಿಯೋ, ಮಹಿಳೆಯರ ಮೇಲೆ ಪುರುಷರ ನಿಯಂತ್ರಣ ಬಲಗೊಂಡು ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆ ತನ್ನ ತೆಕ್ಕೆಗೆ ಈ ಆಚರಣೆಯನ್ನು ತೆಗೆದುಕೊಂಡಿದೆ. ಹೀಗಾಗಿ ಮಹಿಳೆಯರು ಈ ಕಾಲದಲ್ಲಿ ಗೊಂದಲ ಕಾರ್ಯದಲ್ಲಿ ಭಾಗವಹಿಸದಿರುವುದು ಒಂದು ವಿಶಿಷ್ಟ ಸಂಗತಿಯಾಗಿದೆ "[೧೪] ಎಂದು ಹೇಳಬಹುದು. ಹೀಗೆ ಗೊಂದಲದ ಮಹತ್ವ, ಅದರ ಇರುವಿಕೆ, ಕಾಲ ಮುಂತಾದ ವಿಷಯಗಳು ಹಾಗೂ ಅನೇಕ ಮಹತ್ವದ ಅಂಶಗಳು ಕನ್ನಡ ಸಾಹಿತ್ಯದ ಕೃತಿಗಳಲ್ಲಿ ಕಂಡು ಬರುತ್ತವೆ.

**೨.೪ ಮರಾಠಿ ಗೊಂದಲ ಸಾಹಿತ್ಯ.**

ಮರಾಠಿ ಸಾಹಿತ್ಯದಲ್ಲಿಯೂ ಗೊಂದಲದ ಬಗ್ಗೆ ಸಾಕಷ್ಟು ಮಾಹಿತಿ ಸಿಗುತ್ತದೆ. ಗೊಂದಳದ ಪ್ರಾಚೀನ ಇತಿಹಾಸದ ಮಾಹಿತಿಯು ಚಂದ್ರಕಾಂತ ಪೊಕಳೆಯವರ 'ತುಳಜಾಭವಾನಿ' ಎಂಬ ಗ್ರಂಥದಲ್ಲಿದೆ. ಹನುಮದಾತ್ಮಜರೆಂಬ ದೀಕ್ಷಿತ ಸಂತ ಚರಿತ್ರಕಾರರು ತಮ್ಮ ಗುರು ಪೂರ್ಣಾನಂದರನ್ನು ಕುರಿತು ಓವ್ಹಿಬದ್ಧ ಚರಿತ್ರೆಯನ್ನು ಬರೆದಿದ್ದಾರೆ. ಆ ಚರಿತ್ರೆ ಗ್ರಂಥದಲ್ಲಿ ಸ್ವತ: ಪೂರ್ಣಾನಂದರೇ ದೇವಿಸ್ವರೂಪವೆಂದು ಭಾವಿಸಿ ದೇವಿಯ ರೂಪಕವನ್ನು ರಚಿಸಿದ್ದಾರೆ.

"ಅಹಂ ಮಹಿಷಾಸುರಾಚೇ ಪ್ರಾಣ । ತವ ಧಾಕೇ ಜಾಯನಿಪೋನು ರಮ್ಯ ಚರಿತ್ರ ಬೋಲವೀ ಸ್ವಲೀಲೇ॥"೧೫ ಈ ರೂಪಕದಲ್ಲಿ ಗೊಂದಲ ಅಲ್ಲಿ ನಡೆಯುವ ದೇವಿಯ ಉಧೋಕಾರ ಉರಿಯುವ ಪಂಜು ಅದನ್ನು ಕೈಯಲ್ಲಿ ಹಿಡಿದು ಕುಣಿಯುವ ಜನರ ವಿವರ ನೀಡಿ ಪರಂಪರೆಯ ಉಪಾಸನಾ ಚಿತ್ರ ನೀಡಿದ್ದಾರೆ. ಕೈಯಲ್ಲಿ ಉರಿಯುವ ಪಂಜು ಹಾಗೂ ಅಲ್ಲಿ ದೇವಿಯ ಉಧೋಕಾರ ಚಿತ್ರಣವನ್ನು ನೋಡಿದಾಗ ಇದೊಂದು ದೇವಿಯನ್ನು ಆರಾಧಿಸುವ ಪಾರಂಪರಿಕ ಗೊಂದಳದ ಚಿತ್ರಣವಾಗಿದೆ. ಈ ವೃತ್ತಿ ಕಲಾ ಆರಾಧನೆಯು ಮಹಾರಾಷ್ಟ್ರ ಮತ್ತು ಕರ್ನಾಟಕ ಎರಡೂ ಕಡೆ ಸಮವಾಗಿ ಯಾವ ಭಿನ್ನತೆ ಇರದೇ ಪಂಜು ಹಿಡಿವ ಕಾರ್ಯ ನಡೆಯುತ್ತದೆ.

ಸಂತ ಏಕನಾಥನ ಮರಿ ಮೊಮ್ಮಗನಾದ ಶಿವರಾಮಸ್ವಾಮಿ ಗ್ರಂಥದಲ್ಲಿ ಒಂದು ಗೊಂದಲ ಗೀತೆಯು ಉಪಲಬ್ಧವಾಗಿದೆ. ಆಳಂದದ ಸಂಶೋಧಕರಾದ ಡಾ. ಭೀಮಾಶಂಕರ ದೇಶಪಾಂಡೆಯವರು ಕರ್ನಾಟಕ ಮಹಾರಾಷ್ಟ್ರದ ಸೀಮೆಯಲ್ಲಿರುವ ಅನೇಕ ಪ್ರದೇಶದಿಂದ ಹಲವಾರು ಹಸ್ತ ಪ್ರತಿಗಳನ್ನು ಹುಡುಕಿ ತೆಗೆದಿದ್ದಾರೆ. ತಮ್ಮ ಸಂಶೋಧನಾ ಪ್ರಬಂಧದಲ್ಲಿ ಗೊಂದಲ ಗೀತೆಗಳ ಉಲ್ಲೇಖಮಾಡಿದ್ದಾರೆ.

"ಉದಯೇ ಉದಯೇ ಆಲ। ಉಧೋ ಉಧೋ। ಅಸುದಾತೇ ಗೋಂಧಳಿ ಚಿತ್ತಾವೇಧೋ

॥ ಎಂದು ಕವಿ ಹೇಳುವಂತೆ ವೇದಾಂತ ಕಥನ ಇದರಲ್ಲಿ ಕಂಡು ಬರುತ್ತದೆ. ಇದರ ಅರ್ಥವು ಈ ಕೆಳಗಿನಂತಿದೆ.

ಷಡ್ ವಿಕಾರಗಳನ್ನು ದೈತ್ಯರ ಸ್ಥಳದಲ್ಲಿಟ್ಟು ದೇವಿಯ ಮಹಿಮೆಯನ್ನು ಹಾಡುವ ಗೀತೆಯದು, ಮೊದಲ ಪಂಕ್ತಿಯಲ್ಲಿ ಪರಶುರಾಮನು ರೇಣುಕೆಯ ಶಿರಚ್ಛೇದನ ಮಾಡಿದ ಕಥೆಯಿದೆ. ಮತ್ಸರವೇ ಮಹಿಷ, ಅಂಬೆಯು ನಿಲಾಲಂಬವಾಗಿದ್ದು, ಶ್ರಮೆಯ ಶೂಲವನ್ನು ಅಂತಃಕರಣದೊಳಗೆ ಚುಚ್ಚಿ ಅವನನ್ನು ಕೊಂದಳು. ಅರವತ್ನಾಲ್ಕು ಯೋಗಿನಿ ದೈತ್ಯರ ಸಮಾವೇಶದಲ್ಲಿ ಯುದ್ಧ ಆರಂಭಿಸಿದಳು. ಇಲ್ಲಿ ದೇವಿಯ ಭೂ ಪರಿವಾರ ಮತ್ತು ದೈತ್ಯರ ನಡುವೆ ಜರುಗಿದ ಕಾಳಗದ ಸೂಚನೆಯಿದೆ. ಶೋಕ-ಮೋಹದಿ ವಿಕಾರವೇ ಚಂಡ-ಚಾಮುಂಡರು. ಅವರನ್ನು ಚಾಮುಂಡಿ ನಾಶ ಮಾಡಿದಳು."[೧೬] ಎಂದು ಕವಿ ಹೇಳುತ್ತಾನೆ. 'ಪ್ರಗಟಿಸೀ ತುಳಜಾದುರ್ಗಿ ಬದಾಮಿ ವಿವರೇ ಬಾಲಕ ಮಸ್ತರ ದೇವಿ ಪದಯಗುಣ' ಶಾಕಾಂಬರಿ ಅಥವಾ ಬನಶಂಕರಿ ಎಂದು ಪ್ರಸಿದ್ಧಳಾದ ಈ ದೇವಿಯು ತುಳಜಾದುರ್ಗಾದಲ್ಲಿಯ ಬದಾಮಿ ಗುಹೆಯಲ್ಲಿ ಪ್ರತ್ಯಕ್ಷಳಾದಳೆಂದು ಆರತಿಕಾರ ನುಡಿಯುತ್ತಾನೆ. ಬದಾಮಿಯ ಗುಹೆಗೆ ತುಳಜಾದುರ್ಗ ಎಂದು ಕರೆಯುತ್ತಾರೆ. ಮಧ್ಯಕಾಲದಲ್ಲಿ ಖ್ಯಾತಿ ಪಡೆದು ಈ ಬೆಟ್ಟ ಸುಂದರ ಕಲಾಕಸುರಿಗಳಿಂದ ಕೂಡಿದ ಗುಹೆಗಳಿವೆ. ಮೂರ್ತಿಶಿಲ್ಪವಿದೆ, ಅಂಬಾಭವಾನಿ, ಹಿಮಗಿರಿಬಾಲಾ ಶಾಕಾಂಬರಿ ಎಂಬ ನಾಮದೇಯದಿಂದ ಎಚ್ಚರಿಸಿದ್ದಾರೆ. ಆಕೆಯ ಕುಲಧರ್ಮದಲ್ಲಿ ಅರವತ್ತು ಬಗೆಯ ಪಲ್ಯೆ, ಹನ್ನೆರಡು ಕೋಸಂಬರಿ ಮತ್ತು ತಂಬಿಟ್ಟು, ಎಳ್ಳು ಬೆಲ್ಲದ ಮಹತ್ವವನ್ನು ತಿಳಿಸುತ್ತಾರೆ. ಬನಶಂಕರಿ-ಶಾಕಾಂಬರಿಯು ಬದಾಮಿ ಮಹಾಕೂಟದ ಹಾದಿಯಲ್ಲಿರುವ ಚೊಳಚಗುಡ್ಡ ಎಂಬ ಹಳ್ಳಿಯಲ್ಲಿದೆ. ಎಲ್ಲರಿಗೂ ಆಕೆ ಬದಾಮಿ ಬನಶಂಕರಿ."[೧೭] ಸಂತ ಗೋಂದಿಯ ರಮಾನಂದ ಗೀತೆ ಸಂಹಿತೆಯಲ್ಲಿ ಎಂಟು ಗೊಂದಲ ಗೀತೆಗಳಿವೆ. ಅದರಲ್ಲಿಯ ಒಂದು ಗೀತೆಯು ಗೊಂದಲಕ್ಕಾಗಿ ಗಣಪತಿಯನ್ನು ಆಹ್ವಾನಿಸಲಾಗಿದೆ. ಉಳಿದ ಏಳು ಗೀತೆಗಳು ದೇವಿಯನ್ನು ಕುರಿತು ಹೇಳುತ್ತವೆ.

"ಅಂಬೆಯ, ಮೂಲಮಾಯೆ ರೇಣುಕೆ, ವಿಶ್ವಶಕ್ತಿ ಜಗದಂಬೆಯ ಅಂಗಳದಲ್ಲಿ ಅವನು ಗೊಂದಲದ ವೇಷ ಹಾಕಿ ಕುಣಿದನೋ ಎಂದು ಆರಂಭಗೊಳ್ಳುವ ಗೊಂದಲ ಗೀತೆಯಲ್ಲಿ ರಾಮಾನಂದರು ಪಂಚ ಬಗೆಯ ಪಂಜು ಹಿಡಿದು ಗೊಂದಲಕ್ಕಾಗಿ ಆಗಮಿಸಿ ಅಂಬೆಗೆ ನಮಿಸಿ ನರ್ತಿಸಿದರು ಎಂಬುದು ತಿಳಿದು ಬರುತ್ತದೆ. ಇಲ್ಲಿ ಐದು ಬಗೆಯ ಪಂಜು ಆಧ್ಯಾತ್ಮಿಕ ನೆಲೆಯಲ್ಲಿ ಪಂಚೇಂದ್ರಿಗಳನ್ನು ದೇವಿಗೆ ಬೆಳಕಿನ ರೂಪದಲ್ಲಿ ಸಮರ್ಪಿಸುವುದು ಎಂಬ ಭಾವದಲ್ಲಿ ಆ ಗೀತೆ ಮೂಡಿ ಬಂದಿದೆ.

ನಾನಾ ಬಗೆಯಲ್ಲಿ ಗೊಂದಲವನ್ನು ವ್ಯಕ್ತಪಡಿಸುವ ರಮಾನಂದರು ಅಂಬೆಯ ಸಿಂಹಾಸನ ಆರೂಢವಾದ ಧ್ಯಾನಮುದ್ರೆ, ಆಕೆ ಪರಿಧಾನ ಮಾಡಿದ ಜರತಾರಿ ಶಲ್ಲೆ, ಮೈಗೆಧರಿಸಿದ ರತ್ನ

ಖಚಿತ ಕಂಚುಕಿ, ಕೊರಳ ಚಂದ್ರಹಾರ, ಚಿನ್ನದಸರ, ಚೈತ್ರ ಜಾತ್ರೆಗೆ ಸೇರಿದ ಭಕ್ತರ ಸಮೂಹ, ಕೈಯಲ್ಲಿ ಪಂಜು ಹಿಡಿದು ನರ್ತಿಸುವ ಭೂತಗಣ ಇದೆಲ್ಲದರ ಆಕರ್ಷಕ ಚಿತ್ರಣವನ್ನು ನೀಡಿದ್ದಾರೆ. ಹೀಗೆ ದೇವಿಯ ಸ್ವರೂಪವನ್ನು ಅವಳು ಧರಿಸುವ ಆಭರಣಗಳ ಸಹಿತ, ಜಾತ್ರೆಗೆ ಸೇರಿದ ಭಕ್ತರ ಗುಂಪನ್ನು ಸಹ ವರ್ಣಿಸಲಾಗಿದೆ. ದೇವಿಯ ಜಾತ್ರೆಯು ಚೈತ್ರ ಕಾಲದಲ್ಲಿ ನಡೆಯುವುದರಿಂದ ಇದನ್ನು ಚೈತ್ರ ಜಾತ್ರೆ ಎಂದು ಕರೆಯುತ್ತಾರೆ.ಈ ಸಂದರ್ಭದಲ್ಲಿ ಗೊಂದಲವನ್ನು ಹಾಕುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಇದೊಂದು ಬಯಲು ಗೊಂದಲವಾಗಿದೆ.

ಗೊಂದಲಿಗನಾಗಿ ರಮಾನಂದರು ಭಕ್ತರಿಂದ ಭಕ್ತಿಯ ಕಾಣಿಕೆ ಅಥವಾ ದಾನ ಬೇಡುವುದನ್ನು ಅವರು ಈ ರೀತಿ ಹೇಳಿದ್ದಾರೆ. "ದೇತಿ ಅಂಬೆಚ್ಯಾ ಅಂಬೆಚ್ಯಾ ದಾವಾಲಾ, ಭಾಳೀ ಕುಂಕುಮ ಕುಂಕುಮ ಮಳವಣ" ಅಂಬೆಯ ಹೆಸರಿನಲ್ಲಿ ಎಣ್ಣೆಗೆ ರೊಕ್ಕ, ಪಂಜಿಗೆ ಹಳೆ ಬಟ್ಟೆ ನೀಡಿದರೆ ನಿಮ್ಮ ಸಂಪತ್ತು ವೃದ್ಧಿಯಾಗುತ್ತದೆ ಮತ್ತು ವಂಶ ಬೆಳೆಯುತ್ತದೆ. ಕುಲ ಉದ್ಧಾರವಾಗುತ್ತದೆ. ಬಳ್ಳಿ ಬೆಳೆಯುತ್ತದೆ. ಭೂತಗಣ ಪಂಜು ಪಂಜು ಹಿಡಿದು ಕುಣಿಯುತ್ತಾರೆ. ಹಣೆ-ಬೈತಲೆ ತುಂಬ ಕುಂಕುಮ ಸೌಭಾಗ್ಯ ಪ್ರಾಪ್ತಿಯಾಗುತ್ತದೆ."[೧೮] ಎಂದು ಹರಕೆಯ ರೂಪದಲ್ಲಿ ರಮಾನಂದರು ಸಂಬಾಳ ಬಾರಿಸುತ್ತ ಗೊಂದಲ ಗೀತೆಗಳನ್ನು ಹಾಡುತ್ತಾರೆ. ಈ ಎಲ್ಲ ಗೀತೆಗಳು ಶ್ರವ್ಯ ಮನೋಹರವಾಗಿದ್ದು, ಅಜ್ಞಾನದ ಮನದ ಕದವನ್ನು ತೆರೆಯುವಂತಿವೆ. ಭಕ್ತಿಯ ಲಹರಿಯನ್ನು ಹರಿಸಿ ಭಕ್ತರು ತಮ್ಮ ಮನೋಭಯಕೆಯನ್ನು ಪೂರೈಸಿಕೊಳ್ಳುವಂತಿವೆ.

"ಚೈತನ್ಯವೆಲ್ಹಾಳೀ ಪರಬ್ರಹ್ಮ ಪುತಳಿ.

ರಮಾನಂದ ಪಾಯಿ ವಂಧೀ"[೧೯]

ರಮಾನಂದ ಸಾಳಿಯವರು ಶ್ರೀ ಭವಾನಿಯ ದಿವ್ಯ ಸ್ವರೂಪವನ್ನು ಆಕೆಯ ಚೈತನ್ಯತನವನ್ನು ಚಿತ್ರಿಸಿದ್ದಾರೆ. ಶ್ರೀ.ಮುಖಿ ಚಂದ್ರಪ್ರಭಾ ದಿವ್ಯಾಶೋಭೆ, ನೇರ ಮೂಗು, ವಿಶಾಲ ಕಣ್ಣುಗಳಿರುವ ಅಂಬೆಯು ಭವ್ಯವಾಗಿದ್ದಾಳೆ. ಹವಳದ ಅಧರ, ಹೊಳಪಿನ ದಂತ ಪಂಕ್ತಿಯು ಭಕ್ತನಿಗೆ ಸಂತೋಷ ತರುವುದು. ನಮ್ಮನ್ನು ಉದ್ಧರಿಸು, ಜ್ಞಾನ ನೀಡು, ಧೈರ್ಯ ನೀಡು ಎಂದು ಚರಣಕ್ಕೆರಗುವ ಸನ್ನಿವೇಶವನ್ನು ಬಿತ್ತರಿಸುತ್ತಾರೆ. ತ್ರ್ಯೈಂಬಕರಾವ ಭೀಡೆನೆಂಬ ದೇವಿಭಕ್ತನಾದ ಇವರು ಸಂತ ಏಕನಾಥನ ಕನಸಿನ ಶಿಷ್ಯರಾಗಿದ್ದರು ಇವರ ಕಾಲ ೧೯ನೇ ಶತಮಾನದ ಉತ್ತರಾರ್ಧವಾಗಿದೆ. ದೇವಿಯ ಉದಯರಾಗವನ್ನು ರಚಿಸಿದ ಇವರು ಅಲ್ಲಿ ಜೇಠಪೀಠದ ಬಗ್ಗೆ ತಿಳಿಸುತ್ತಾರೆ.

"ನೀನು ಜೇಠಪೀಠದಲ್ಲಿ ವಾಸಿಸಿ ಭಕ್ತರ ಸಂಕಟವನ್ನು ನಿವಾರಿಸುತ್ತಿಯೊ, ತುಳಜಾಪುರದ ತುಳಜಾಬಾಯಿ ಕೃಪೆದೊರು, ನಾನು ಸದಾಕಾಲ ನಿನ್ನ ಚರಣಕ್ಕೆ ಎರಗು ವಂತಾಗಲಿ, ಮಹಾಲಕ್ಷ್ಮಿ ನೀನು ಕೊಲ್ಲಾಪುರದ ವಧೂ ಆಗಿದ್ದ, ತ್ರಿಪುರಾಂತರ ಪ್ರಿಯೊ ನಿಜದಾಸನನ್ನು ಪೊರೆ, ಎಂದು ಆಕೆಯ ಮಹಿಮೆಯನ್ನು ಹಾಡುತ್ತಾನೆ. ಈ ಗೀತೆಯಲ್ಲಿ ಜೇಠಪೀಠಗಳ

ಸ್ಥಾನವನ್ನು ತಿಳಿಸುತ್ತಾನೆ. ಮೊದಲ ಪೀಠ ತುಳಜಾಪುರ, ದ್ವಿತೀಯ ಪೀಠ ಮಾಹೂರ, ತೃತೀಯ ಪೀಠ ಕೊಲ್ಹಾಪುರ ಅರ್ಧಪೀಠ ಸಪ್ತಶೃಂಗಿ ಈ ಮೂರುವರೆ ಪೀಠಗಳಲ್ಲಿ ಪವಿತ್ರವಾದವು"[೨೦] ಇಲ್ಲಿ ಚಂದ್ರಕಾಂತ ಪೊಕಳೆಯವರು ಮಾಹೂರ ರೇಣುಕೆ ಮೊದಲು ಸ್ಥಾಪಿತಳು ತುಳಜಾಪುರ ಎರಡನೆಯದು ಎಂದಾಗಬೇಕು, ಅವಳು ಮಾಹೂರದಿಂದಲೇ ತುಳಜಾಪುರಕ್ಕೆ ಬಂದಳು ಎಂದು ಹೇಳುತ್ತಾರೆ. ಅಂದರೆ ಈ ದೇವಿಯ ಮೂಲಸ್ಥಾನ ಮಾಹೂರ ಎಂದಾಯಿತು. ಮೊದಲು ರೇಣುಕೆಯಾಗಿ ಜನಿಸಿ ತದನಂತರ ಭಕ್ತರ ಉದ್ಧಾರಕ್ಕಾಗಿ, ದುಷ್ಟರ ಶಿಕ್ಷೆಗಾಗಿ ಹಲವಾರು ಅವತಾರಗಳನ್ನು ಎತ್ತಿದಳು. ಅಲ್ಲಲ್ಲಿ ಅವಳು ನೆಲೆ ನಿಂತಿದ್ದಾಳೆಂಬುದು ಪೌರಾಣಿಕ ಹಿನ್ನೆಲೆಯಲ್ಲಿ ತಿಳಿದು ಬರುತ್ತದೆ.

"ಕರ್ನಾಟಕದ ಗುರ್ಲಹೊಸೂರ ಎಂಬ ಊರಿನ ಸತ್ಪುರುಷರಾದ ಚಿದಂಬರ ಧೀಕ್ಷಿತರ ಶಿಷ್ಯರಾದ ರಾಜಾರಾಮನು ಮರಾಠಿಯಲ್ಲಿ ಭಿನ್ನವಾದ ಗೊಂದಲ ಗೀತೆಗಳನ್ನು ರಚಿಸಿದ್ದಾರೆ. ಈ ಗೊಂದಲವು 'ಬ್ರಹ್ಮಾನಂದಲಹರಿ ಎಂಬ ಗ್ರಂಥದಲ್ಲಿ ಸಮಾವೇಶವಾಗಿದೆ. ಇದು ೧೯ನೇ ಶತಮಾನದಲ್ಲಿ ರಚಿತವಾಗಿದೆ. ಇತ್ತಿಚೆಗೆ 'ಸಂತಕೃಪೆ' (ಜನೆವರಿ-೨೦೦೪) ಎಂಬ ಮಾಸಿಕವು ಈ ಗೊಂದಲವನ್ನು ಪುನರ್ ಮುದ್ರಣ ಮಾಡಿದೆ. ಆಸೇ ಅನಾಥ ದುರ್ಬಳ! ಅಂಬೆ ಘಾಲಿತೋ ಗೊಂದಳ-ಮಿಳವಿಲೇ ಚಿದಂಬರೀ."[೨೧] ಜ್ಞಾನದ ದೀಪ ಹತ್ತಿದ ನಂತರ ಆಕೆಯ ದರ್ಶನದಿಂದ ಸಂಪೂರ್ಣ ದು:ಖ ನಿರಸನಗೊಳ್ಳುತ್ತದೆ ಎನ್ನುತ್ತಾರೆ. ಗೊಂದಲದ ಮಹತ್ವವನ್ನು ತಿಳಿಸುವ ಈ ಗೀತೆ ಅತೀ ಮಹತ್ವವಾಗಿದೆ. ದೇವಿಯ ಹೆಸರಿನಲ್ಲಿ ಗೊಂದಲವನ್ನು ಹಾಕಿಸುವುದರಿಂದ ದು:ಖ ದುಮ್ಮಾನಗಳು ದೂರವಾಗಿ ಜ್ಞಾನದ ಜ್ಯೋತಿ ಬೆಳಗುತ್ತದೆ ಎಂದು ಹೇಳಿ ಗೊಂದಲದ ಮಹತ್ವವನ್ನು ತಿಳಿಸುತ್ತಾರೆ.

"ಅವಿದ್ಯಾ ಮಾಯಿಚೆ ಗಬಾಳ-ಗೋಂಧಳಾಸಿ ಸರ್ವ ಆಲೆ ಅಂದರೆ ಅವಿದ್ಯಾವಂತರ ನಡೆಸುವ ಗೊಂದಲ ಇದಲ್ಲ ಇದು ಅಪರೂಪದ ಗೊಂದಲ ಈ ಭೂತಗಣ ಉಳಿದವರಿಗಿಂತ ಭಿನ್ನ, ಮಾಯಾಜಾಲದ ಒಟ್ಟಿಗೆ ಜ್ಞಾನದ ಎಣ್ಣೆ ಸುರಿಯುತ್ತಾನೆ. ಅನುಭವವೆಂಬ ಕುಂಕುಮ ಹಚ್ಚಿಕೊಳ್ಳುತ್ತಾನೆ. ಜ್ಞಾನವೆಂಬ ಉಧೋಕಾರ ಹಾದಿ ತೋರಿಸುತ್ತದೆ. ಭೋಧನೆಯ ದೀವಟಿಕೆ ಕೈಯಲ್ಲಿ ಹಿಡಿಯುತ್ತಾನೆ. ಅದರೊಳಗೆ ಪ್ರಪಂಚದ ಬೂವಿಯಿರುತ್ತದೆ. ಭಕ್ತರ ಹಣೆಗೆ ವಿಭೂತಿಯನ್ನು ಹಚ್ಚುತ್ತಾನೆ."[೨೨] ಇಲ್ಲಿ ಗೊಂದಲಿಗ ಒಬ್ಬ ಸಾಮಾನ್ಯ ವ್ಯಕ್ತಿಯಲ್ಲ, ಆತ ಅಪಾರವಾದ ಜ್ಞಾನ ಸಂಪತ್ತಿನಿಂದಲೇ ಗೊಂದಲ ನಡೆಸುತ್ತಾನೆ ಎಂಬ ತಾತ್ಪರ್ಯವಿದೆ. ಪರಂಪರಾಗತವಾಗಿ ನಡೆದು ಬಂದ ಈ ಧಾರ್ಮಿಕ ವಿಧಿಯನ್ನು ಗೊಂದಲಿಗನು ಭಯ ಭಕ್ತಿಯಿಂದ ಜ್ಞಾನದ ಸಾರವನ್ನೇ ಜನರಲ್ಲಿ ತುಂಬಲು ಪ್ರಯತ್ನಿಸುತ್ತಾ ಬಂದಿದ್ದಾನೆ ಎಂದು ಅರ್ಥೈಸಿಕೊಳ್ಳಬೇಕಾಗುತ್ತದೆ.

"ಗೋಂಧಳಿ ಮಾಂಡಿಲಾ ಆಯೀ-ಅವಘಟವಾದ ಸತ್ರಾವಿಲಾ"[೨೩] ಶಿಖರ ಶಿಂಗಣಾಪುರದ ಶಂಭು, ಮಹಾದೇವನ ಭಕ್ತನಾದ ಶಿವದಾಸನು ದೇವರ ಉಪಾಸನೆಯಲ್ಲಿ ಉಪಾಸನೆಯಲ್ಲಿ

'ಗೊಂದಲ' ಮತ್ತು 'ಜೋಗವಾ' ಕುರಿತು ರೂಪಕಗಳನ್ನು ರಚಿಸಿದ್ದಾರೆ. ಈ ಗೊಂದಲದಲ್ಲಿ 'ಅಹಂಕಾರ ಕುರಿ' ಯನ್ನು ಬಲಿಕೊಡಲಾಗುತ್ತದೆ. ಇಲ್ಲಿ ಜಾಗೃತ ಕುಂಡಲಿನಿ ಶಕ್ತಿ 'ಮೂಲ ಪೀಠ ಜಗದಂಬೆ' ಯಾಗಿದ್ದಾಳೆ. ಮೋಕ್ಷ ಮಂಟಪವೂ ಇದೆ. 'ಪೂರ್ಣತ್ವ ಪಡೆದ ಘಟ'ವಿದೆ ಜ್ಞಾನದ ದೀಪ ಬೆಳಗುತ್ತಿದೆ. ಇಲ್ಲಿಯ ಗೊಂದಲದ ಪರಿಭಾಷೆಯಲ್ಲಿ ರೂಪಕವಿದ್ದರೂ ಇದರ ಆಶಯ ಮಾತ್ರ ಆಧ್ಯಾತ್ಮದ ನೆಲೆಗಟ್ಟಿನಲ್ಲಿದೆ. ಅಹಂ ಬಲಿ, ಜಾಗೃತ ಕುಂಡಲಿನಿ ಶಕ್ತಿ, ಮೋಕ್ಷಮಂಟಪವೂ, ಪೂಣತ್ವ ಇವೆಲ್ಲವು ಯೋಗಾನುಭೂತಿಯಿಂದ ಕೂಡಿದ ವಿಷಯವಾಗಿವೆ.

ಗೊಂದಲವು ಕೇವಲ ದೇವತಾ ಆರಾಧನೆಯಾಗಿರದೆ ಅದೊಂದು ಮೋಕ್ಷಕ್ಕೆ ದಾರಿ ಮಾಡಿಕೊಡುವ ಯೋಗಸಾಧನೆಯಾಗಿದೆ ಎಂದು ಗೊಂದಲಿಗರು ಹೇಳುತ್ತಾರೆ. ಆ ಸಾಧನೆಗಿರುವ ಹಂತಗಳನ್ನು ತಿಳಿಸುವ ಆಧ್ಯಾತ್ಮದ ಸಾರ ಸಂಚಿಕೆಯಾಗಿದೆ. ಅರಿಷಡ ವರ್ಗಗಳಿಂದ ಕಾಮಕ್ರೋದಗಳಿಂದ ನಲಗುತ್ತಿರುವ ಮನುಷ್ಯನಿಗೆ ಜ್ಞಾನದ ಮಾರ್ಗವ ತೋರುವ ಪರಂಜ್ಯೋತಿಯಾಗಿದೆ ಎಂಬ ಅಭಿಪ್ರಾಯವೂ ಇದೆ.

"ಗೋಂಧಳ ಮಾಂಡಿಲಾ-ಆನಂದ ಮಾತಲಾ ನಾರಾಯಣಾಚಾ ಎಂಬ ಗೀತೆಯಲ್ಲಿ, ಗೊಂದಲಕ್ಕಾಗಿ ಸುಂದರ ಮಂಟಪ ರಚಿಸಲಾಗಿದೆ. ಚೌರ ನಿರ್ಮಿಸಲಾಗಿದೆ. ಹುಣ್ಣಿಮೆಯ ಚಂದಿರ ಶೋಭಿಸುತ್ತಿದ್ದಾನೆ. ಕಾಮಕ್ರೋಧ ಉರಿಸಿ ಪಂಜು ಬೆಳಗಿಸಲಾಗಿದೆ. ದೇವಿಗಾಗಿ ಚೌಕದಲ್ಲಿ ಸಿಂಹಾಸನ ನಿರ್ಮಿಸಲಾಗಿದೆ. ಭಕ್ತರ ಕರೆಗೆ ಮನ್ನಿಸಿ ಬಂದ ದೇವಿಯನ್ನು ಪೂಜಿಸುವಾಗ ಪ್ರೇಮ ಧೂಪ ಪರಿಮಳ ಬೀರುತ್ತದೆ. ಈ ಆನಂದ ಪರ್ವದಲ್ಲಿ ಕೈಯಲ್ಲಿ ಪಂಜು ಹಿಡಿದು ಕುಣಿಯುವ ನಾರಾಯಣ ತನು ಮನದಲ್ಲಿ ಆನಂದ 'ಉನ್ಮತ್ತ'ಗೊಂಡಿದೆ. ಎಂದು ಹೊಗಳಿದ್ದಾರೆ. ಇವರೇ ರಚಿಸಿದ ಮತ್ತೊಂದು ಗೊಂದಲದಲ್ಲಿ ವೈಷ್ಣವರ ಮೇಳವು ಆನಂದೋತ್ಸವವನ್ನು ಆಚರಿಸುತ್ತದೆ.

"ಆಮ್ಹ ಗೋಂಧಳಿ ಗೋಂಧಳಿ ! ಖೇಳು ವೈಷ್ಣದಾಂಚೇ ಮೇಳೀ ವಿಠ್ಠಲ ನಾಮ ಕೀರ್ತನಾಚ ಇದು ಮೊದಲಿನ ಗೊಂದಲಕ್ಕಿಂತ ಸ್ವಲ್ಪ ಭಿನ್ನವಾಗಿದೆ. ಅದು ಕುರಿ ಬಲಿಗೆ ಸಂಬಂಧಿಸಿದ್ದು, ಅಲ್ಲಿ ಕಾಮಕ್ರೋದವನ್ನು ಉರಿಸಿ ಪಂಜು ಬೆಳಗಿದರೆ. ಇಲ್ಲಿ ವಿಠಾಯಿ ಎದುರಿಗೆ ಕಾಮಕ್ರೋದದ ಕುರಿಯನ್ನು ಬಲಿ ನೀಡಲಾಗಿದೆ. ಉರಿಯುವ ಮತ್ತು ಬಲಿ ನೀಡುವ ಕ್ರಿಯೆಯು ಎರಡೂ ಕಾಮಕ್ರೋಧವನ್ನು ನಾಶಪಡಿಸುವಂತಹದ್ದು, ಎರಡನೆಯ ಗೊಂದಲದಲ್ಲಿ ಗೊಂದಲಿಗರು ಸಂಬಾಳದ ಸಹಾಯದಿಂದ ಕುಣಿಯುತ್ತಾರೆ. ಈ ಕವಿಯು ಮತ್ತೊಂದು ಕಡೆ 'ಜೋಗವಾ' ಆಗಿ ದೇವರಲ್ಲಿ ಬೇಡಿಕೊಳ್ಳುವ ರೀತಿ ಹೀಗಿದೆ. ನನ್ನ ತನ ಸುಡುತ್ತೇನೆ. ಕಾಮ, ಕ್ರೋಧ, ಆಸೆ, ಡಾಂಭಿಕತನವನೆಲ್ಲ ತೊರೆಯುತ್ತೇನೆ. ಎಂದು ಪ್ರತಿಜ್ಞೆ

ಮಾಡಿ ಬೋಧನೆಯ ಬಾವುಟ ಹೆಗಲಿಗೆ ಹೊತ್ತು. ವಿವೇಕ ಬುಟ್ಟಿ ಕೈಯಲ್ಲಿ ಹಿಡಿದು ಹಗಲು-ರಾತ್ರಿ ನಾಮದ ಭಿಕ್ಷೆ ಬೇಡುತ್ತಾ ಮನೆಮನೆ ಸುತ್ತಾಡುವ ಈ ಭಕ್ತನು ನಾಮವೆಂಬ ಜೋಗವಾ (ಭಿಕ್ಷೆ) ಬೇಡುತ್ತಾ ತಾಯಿಯ ಹರಕೆ ಸಲ್ಲಿಸುತ್ತೇನೆ. ಎಂಬುದನ್ನು ಕವಿ ಹೇಳಿದ್ದಾನೆ."[೨೪] ಲಕ್ಷ್ಮಣ ಮಹಾರಾಜ ಅಪ್ಪಿಕಲ್ ಎಂಬ ವೀರಶೈವ ಸಂತ ಕವಿಯು ನಾಲ್ಕು ಗೊಂದಲಗೀತೆ ಹಾಗೂ ಒಂದು ಜೋಗವಾ ಗೀತೆಗಳನ್ನು ಬರೆದಿದ್ದಾರೆ. ಇವರು ರಚಿಸಿದ ನಾಲ್ಕು ಗೊಂದಲ ಗೀತೆಗಳು ಹೀಗೆಯೇ ಆಧ್ಯಾತ್ಮಿಕ ರೂಪಕದಿಂದ ಯೋಚಿಸಿದ್ದು, ಬ್ರಹ್ಮ, ವಿಷ್ಣು, ಆದಿ ಸುರಗಣವು ತಾಯಿಯ ಗೊಂದಲದ ದೀವಟಿಗೆಗಳು ಈ ಗೊಂದಲ ಸಮೂಹದಲ್ಲಿ ಶ್ರೇಷ್ಠ ದಿಗಂಬರ ಸಿದ್ದಯೋಗಿಗಳಿದ್ದಾರೆ. ಅವರು ಹಾಕಿದ ಗೊಂದಲ ಕುಣಿತದಲ್ಲಿ ಸ್ವತ: ಮಾತೆಯು ಆಡುತ್ತಾಳೆ. ಗೊಂದಲದಾಟದಲ್ಲಿ ತಲ್ಲಿನಗೊಂಡು ಸ್ವಂತ ಆಟ ಆರಂಭಿಸಿದ್ದಾಳೆ.

"ಬ್ರಹ್ಮ ವಿಷ್ಣುಗೇ ಸುರಗಣ - ದೇವಿ ಅಹರ್ನಿಶೀ ಸಂತ ಲಕ್ಷ್ಮಣ ಮೊರೆಗೆ ಓಗೊಟ್ಟು ತಾಯಿಯು ಅವನನ್ನು ವಾತ್ಸಲ್ಯದಿಂದ ಅಪ್ಪಿಕೊಂಡಿದ್ದಾಳೆ."[೨೫]

ತಮಿಳುನಾಡಿನ ತಂಜಾವೂರಿನ ಗೊಂದಲಿಗರ ಅನುಕೂಲಕ್ಕಾಗಿ ಅಲ್ಲಿಯ ಕವಿಗಳು ಲಿಖಿತ ಸಂಹಿತೆಯನ್ನು ಬಳಸಿದರು. ಗೋಂದಳಿ ವಿಧಿಯ ಸರ್ವ ಲಿಖಿತ ಸಾಮಗ್ರಿಯನ್ನು ರಾಮದಾಸ ಮಠದ ಅಧಿಪತಿ ಮತ್ತು ಅಲ್ಲಿಯ 'ಸರಸ್ವತಿ ಮಹಾಲ' ಗ್ರಂಥಾಲಯದ ಮರಾಠಿ ವಿಭಾಗದ ಪ್ರಮುಖರಾದ ಪಂಡಿತರಾದ ಶ್ರೀ.ಟಿ.ಆರ್. ಭೀಮರಾವ ಎಂಬುವರು ಸಂಗ್ರಹಿಸಿ ಸಂಪಾದಿಸಿ ೧೯೫೦ ರಲ್ಲಿ ಪ್ರಕಟಿಸಿದರು. ಇದಕ್ಕೆ 'ಗೋಂದಳಿ ಸಾಹಿತ್ಯ' ಎಂಬ ಹೆಸರು ನೀಡಲಾಗಿದೆ. ಇಲ್ಲಿಯ ಗೊಂದಲ ಹಾಕುವ ಪ್ರಮುಖ ವ್ಯಕ್ತಿಗೆ 'ನಾಯಿಕ' ಎಂದು ಕರೆಯುತ್ತಾರೆ. ಆತನ ಜೊತೆಗಿರುವವರಿಗೆ "ಗಡಿ" ಎಂದು ಕರೆಯುವರು.

ಈ ಕೃತಿಯಲ್ಲಿ ಎರಡು ಮಬ್ಬು ಚಿತ್ರವನ್ನು ಪ್ರಕಟಿಸಲಾಗಿದೆ. ಒಂದು ಗೋಂಧಳ ವಿಧಿಯಲ್ಲಿ ಚಿತ್ರಿಸಿದ ಧಾನ್ಯದಿಂದ ಸಿದ್ಧಪಡಿಸಿದ ಚೌಕವಿದೆ. ಚೌಕದ ಮೇಲೆ ತಮಿಳಿನ ಬರಹವಿದೆ. ಎಡಕ್ಕೆ ದೀವಟಿಗೆ ಹಣತೆಯ ಚಿತ್ರ ಎರಡನೆಯದು ಗೊಂಧಳ ವಿಧಿ ನಡೆಸುವ ಗೊಂದಲಿಗರ ಚಿತ್ರ 'ನಾಯಿಕ' ನ ಜೊತೆ ಉಳಿದ ಮೂವರು ಸಂಗಾತಿಗಳಿದ್ದಾರೆ. ಚಿತ್ರದ ತಲೆಯ ಮೇಲೆ ದೇಸರದ ಜೋಗಿ, ಗೊಂಧಳ ಹಾಕುವವರು ಅಷ್ಟಲಿಂಗ ಜೋಮಲಿಂಗರ ಸಹಿತ ಎಂಬ ಶೀರ್ಷಿಕೆಯಿದೆ. ಉಡುಪಿಯ ಸುತ್ತಮುತ್ತ ಮರಾಠಿ ಗೊಂದಲಿಗರು ಗೊಂಧಳ ಹಾಕುತ್ತಾರೆ. ಅದರಂತೆ ಮಂಗಳೂರಿನ ಕಡೆಗೆ ನಾಥಪಂಥದ ಗೃಹಸ್ಥಾಶ್ರಮ ಜೋಗಿಗಳು ಕೈಗೊಳುತ್ತಾರೆ. 'ದೇಸರದ' ಎಂದರೆ ವಲಸೆ ಬಂದವರು ಎಂದರ್ಥ. ಪಶ್ಚಿಮದಿಂದ ಮಹಾರಾಷ್ಟ್ರ ಕರ್ನಾಟಕದಿಂದ ತಂಜಾವೂರಿಗೆ ಸ್ಥಳಾಂತರಗೊಂಡಿರುವರು. ಈ ಸ್ಪಷ್ಟ ಚಿತ್ರವು ಭೀಮರಾವ ಅವರಿಗೆ ಗೊಂದಳ ಹಾಕುವ ದೇಸಕರ ಜೋಗಿಯ ಪರಂಪರೆಯವರ ಹಸ್ತಪ್ರತಿಯಲ್ಲಿ ಸಿಕ್ಕಿರುವುದು ಸ್ಪಷ್ಟವಾಗಿದೆ. ಗೊಂದಳ ಪದ, ಸಾಹಿತ್ಯದಲ್ಲಿ ಗೋಂಧಳ ವಿಧಿಗೆ ಉಪಯುಕ್ತವಾಗುವ

ಕಾವ್ಯವಿದೆ. ಅಲ್ಲಲ್ಲಿ ವಿಧಿ ಕೈಗೊಳ್ಳುವಾಗ ಯಾವ ಯಾವ ಕಾರ್ಯಮಾಡಬೇಕು ಎಂಬ ಬಗೆಗೆ ಗದ್ಯದಲ್ಲಿ ಮಾಹಿತಿಯಿದೆ. ಆಯಾ ದೇವತೆಯ ಹೆಸರು ಹೇಳಿ ದಾನ ಮುಟ್ಟಿತು ಎಂದು ಹೇಳುತ್ತಾರೆ. ತುಳಜಾಭವಾನಿ, ಅಂಬೆ, ಮಹಿಷಮರ್ಧಿನಿ, ಬನಶಂಕರಿ, ಚೌಡೇಶ್ವರಿ, ಬ್ರಮರಾಂಬಿಕೆ, ಮಹಾಕಾಳಿ, ಮಹಾಮಾಯಾ ಇವರಿಗೆಲ್ಲ ದಾನ ತಲುಪಿದೆ ಎಂದು ಗೊಂದಲದ ಮೂಲಕ ಪಾವತಿ ನೀಡುತ್ತಾನೆ. ಇಲ್ಲಿಯ ಗೊಂದಲಿಗರು ಸಂಬಾಳ ಮತ್ತು ಚೌಡಿಕೆಯಂತಹ ವಾದ್ಯವನ್ನು ಬಳಸುತ್ತಾರೆ. "ಯಾಮಾಯಿ, ತುಕಾಯಿ, ಮತ್ತು ಶರ್ಕಾಯಿಯಂತಹ ಭಿನ್ನ ಹೆಸರಿನಲ್ಲಿ ಕರೆಯಲ್ಪಡುವ ಭವಾನಿಯ ಉಪಾಸನೆಯಲ್ಲಿ ಮಾತಂಗಿಯಂತೆ ಮಾತಂಗರಿಗೂ ಮಹತ್ವ ನೀಡಲಾಗಿದೆ. ಶಿವಾಜಿಯ ರಾಜಾಧಾನಿಯಾದ ರಾಯಗಡದಲ್ಲಿ ಶೀರ್ಕಾಯಿಯ, ನವರಾತ್ರಿ, ಅಷ್ಟಮಿಯ, ಗೊಂದಳದ ಗೌರವ ಮಾತಾಂಗದ ಬಳಿಯಲ್ಲಿತ್ತು. ಖ್ಯಾತ ಇತಿಹಾಸ ಸಂಶೋಧಕರಾದ ಶಾಂ.ವಿ. ಆವಳಸಕರ ಹೀಗೆ ಬರೆಯುತ್ತಾರೆ. ನವರಾತ್ರಿಯಲ್ಲಿ ಒಂಬತ್ತು ದಿನ ದೇವಿಗೆ ಆರತಿ ಬೆಳಗುತ್ತಾರೆ. ಅದರ ಖರ್ಚು ಎರಡು ರೂಪಾಯಿ ಎರಡಾಣೆ ಆಗುತ್ತದೆ. ಗೊಂದಳದ ಖರ್ಚು ಒಂಬತ್ತುವರೆ ರೂಪಾಯಿ. ಮಾಹಾಡಕರ ಗೊಂಧಳಿ ಗೊಂದಳ ನಡೆಸುತ್ತಾರೆ. ಅವನಿಗೆ ನೀಡಬೇಕಾದ ದೇಣಿಗೆ ಎರಡು ರೂಪಾಯಿ. ಅಷ್ಟಮಿಯ ದಿನ ಕಸಬೆ–ನಾತೆಯ ಗೊಂದಲಿಗರು ಗೊಂದಳ ನಡೆಸಿಕೊಡುತ್ತಾರೆ. ಅದಕ್ಕೆ ತಗಲುವ ಖರ್ಚು ಎರಡುವರೆ ರೂಪಾಯಿ. ಶೀರ್ಕಾಯಿಯೆ ರಾಯಗಡದ ಅಧಿಷ್ಠಾತ್ರಿ ದೇವಿಯಾಗಿದ್ದರಿಂದ ಆಕೆಯ ನಿತ್ಯ ಉಪಾಸನೆಯನ್ನು ಶ್ರದ್ಧೆಯಿಂದ ಕೈಗೊಳ್ಳುವದು ಸಹಜ ಆಕೆಯ ನವರಾತ್ರ್ಯೋತ್ಸವದಲ್ಲಿ ಮಾದಿಗರು, ನಡೆಸುವ ಗೊಂದಳವು ಅತ್ಯವಶ್ಯಕವಾಗಿರುವ ಪ್ರಮಾಣವನ್ನು ಶಂಕರರಾವ ಜೋಶಿಯವರು ದಾಖಲಿಸಿದ್ದಾರೆ. ಮಹಾಪಕರ ಗೊಂದಲಿಗರು ನವರಾತ್ರಿಗೆ ಶೀರ್ಕಾಯಿಯೆಗೆ ಬಂದು ಗೊಂದಲ ನಡೆಸುತ್ತಾರೆ. ಹಾಗೆ ಕಸಬೆ–ನಾತೆಯ ಮಾದಿಗರು ಬರುತ್ತಾರೆ. ಅವರು ಅಷ್ಟಮಿಯ ದಿವಸ ಗೊಂದಳ ಹಾಕುತ್ತಾರೆ."[೨೬] ಮೇಲಿನ ಐತಿಹಾಸಿಕ ಪುರಾವೆಗಳನ್ನು ನೋಡಿದಾಗ ಗೊಂದಳವನ್ನು ಕೇವಲ ಗೊಂದಲಿಗರು ಮಾತ್ರ ಹಾಕುತ್ತಿರಲಿಲ್ಲ. ಬೇರೆ ಬೇರೆ ಧರ್ಮದವರು ಈ ಗೊಂದಲ ಕಾರ್ಯ ಮಾಡುತ್ತಿದ್ದರು. ಎಂಬುದು ತಿಳಿಯುತ್ತದೆ. ಕ್ಯಾತನಹಳ್ಳಿ ರಾಮಣ್ಣವರು ಯಾವ ಜಾತಿಯವ ರಾದರು ಧೀಕ್ಷೆ ಪಡೆದು ಗೊಂದಲಿಗರಾಗುವ ಅವಕಾಶವಿತ್ತು. ಎಂಬುದಾಗಿ ಹೇಳುತ್ತಾರೆ. ಹೀಗಾಗಿ ಎಲ್ಲ ಜಾತಿಯವರು ಧೀಕ್ಷೆ ಪಡೆದು ತಮ್ಮ ಮೂಲ ಜಾತಿಯ ಪ್ರಸ್ತಾಪ ಮಾಡದೇ ಎಲ್ಲರು ಗೊಂದಲಿಗರು ಎನ್ನುತ್ತ ಜೀವನ ನಿರ್ವಹಣೆಯ ಸುಲಭಮಾರ್ಗ ಪಡೆದುಕೊಂಡಿದ್ದರು. ಅದಕ್ಕಾಗಿ ಧೀಕ್ಷೆ ಪಡೆದವರೆಲ್ಲರು ಗೊಂದಲ ಹಾಕುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡರು. ಬರಬರುತ್ತ ಅದರ ಸಂಖ್ಯೆ ಹೆಚ್ಚಾದಂತೆ ಹೊಸ ಮಂದಿಯ ಸೇರ್ಪಡೆಯನ್ನು ಹೊಸ ಸಮಾಜವು ಖಂಡಿಸಿತು. ಆಗ ಅದೊಂದು 'ಗೊಂದಲಿಗರು' ಎಂಬ ಜಾತಿಯಾಗಿ ಪರಿಣಮಿಸಿ ತಮ್ಮದೇ ಆದ ಸಮಾಜವನ್ನು ಅಥವಾ ಪಂಗಡವನ್ನು ಕಟ್ಟಿಕೊಂಡರು. ಅವರ ಆಚಾರ

ವಿಚಾರಗಳು ವಿಶಿಷ್ಟವಾದ ಸಂಸ್ಕೃತಿಯಿಂದ ಕೂಡಿವೆ.

**ಅಡಿಟಿಪ್ಪಣಿಗಳು**

೧. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩, ಪುಟ ಸಂ. ೧೦.

೨. ಅದೇ ಪುಟ ಸಂ. ೧೦.

೩. ಅದೇ ಪುಟ ಸಂ. ೧೨.

೪. ಅದೇ ಪುಟ ಸಂ. ೧೪.

೫. ಅದೇ ಪುಟ ಸಂ. ೨೦.

೬. ಅದೇ ಪುಟ ಸಂ. ೧೫.

೭. ಅದೇ ಪುಟ ಸಂ. ೧೯.

೮. ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರು : ಒಂದು ಅಧ್ಯಯನ. ೧೯೮೨, ಪುಟ ಸಂ.೫.

೯. ಅದೇ ಪುಟ ಸಂ. ೭.

೧೦. ಚಂದ್ರಕಾಂತ ಪೊಕಳೆ, ತುಳಜಾಭವಾನಿ, ೨೦೦೮, ಪುಟ ಸಂ. ೨೧೫.

೧೧. ವಿಜಯಕುಮಾರ ಕಟಗಿಹಳ್ಳಿಮಠ, ಗೊಂದಲಿಗರು: ಮಹಿಳಾ ಸಂಸ್ಕೃತಿ. ೨೦೧೦, ಪುಟ ಸಂ.೧೩

೧೨. ಅದೇ ಪುಟ ಸಂ. ೧೪.

೧೩ ಅದೇ ಪುಟ ಸಂ. ೧೫.

೧೪. ಅದೇ ಪುಟ ಸಂ. ೧೬ – ೧೭.

೧೫. ಚಂದ್ರಕಾಂತ ಪೊಕಳೆ, ತುಳಜಾಭವಾನಿ, ೨೦೦೮ ಪುಟ ಸಂ. ೨೯೩.

೧೬. ಅದೇ ಪುಟ ಸಂ. ೨೯೪.

೧೭. ಅದೇ ಪುಟ ಸಂ. ೨೯೮.

೧೮. ಅದೇ ಪುಟ ಸಂ. ೩೦೦

೧೯. ಅದೇ ಪುಟ ಸಂ. ೩೦೧.

೨೦. ಅದೇ ಪುಟ ಸಂ. ೩೦೨.

೨೧. ಅದೇ ಪುಟ ಸಂ. ೩೦೩.

೨೨. ಅದೇ ಪುಟ ಸಂ. ೩೦೪.

೨೩. ಅದೇ ಪುಟ ಸಂ. ೩೦೬.

೨೪. ಅದೇ ಪುಟ ಸಂ. ೩೦೭. ೩೦೮.

೨೫. ಅದೇ ಪುಟ ಸಂ. ೩೧೩, ೩೧೪.

೨೬. ಅದೇ ಪುಟ ಸಂ. ೧೪೫.

# ಅಧ್ಯಾಯ ೩

# ಗೊಂದಲಿಗರು

## ಸಾಂಸ್ಕೃತಿಕ ಅಸ್ತಿತ್ವ ಮತ್ತು ಗೊಂದಳ ಸಾಹಿತ್ಯ

### ೩.೧ ಪೀಠಿಕೆ.

ಪಾರಂಪರಾನುಗತವಾಗಿ ಬಂದ ಗೊಂದಲ ಹಾಕುವ ವೃತ್ತಿಯು ಗೊಂದಲಿಗರ ಬದುಕಿಗೆ ಒಂದು ಘಟ್ಟದಲ್ಲಿ ಆಧಾರವಾಗಿತ್ತು. ಇಂದು ಗೊಂದಲ ಹಾಕಿಸುವವರ ಸಂಖ್ಯೆ ತೀರ ಕಡಿಮೆಯಾಗಿ ಗೊಂದಲವನ್ನೇ ನಂಬಿ ಬದುಕುತ್ತಿದ್ದವರ ಸ್ಥಿತಿ ಅತಂತ್ರವಾಗಿದೆ ಎಂದು ಹೇಳಬಹುದು. ಗೊಂದಲಿಗರು ಮದುವೆ, ಜಾತ್ರೆ, ನವರಾತ್ರಿ, ದೀಪಾವಳಿ, ಕಾರ್ತಿಕಮಾಸ ಮತ್ತು ಗಣೇಶ ಚತುರ್ಥಿ ಸಂದರ್ಭದಲ್ಲಿ ಗೊಂದಲಗಳನ್ನು ನಡೆಸುತ್ತಾರೆ. ಗೊಂದಲ ಹಾಕಿಸುವವರ ಕುಲದ ಮಾತೃ ದೈವ ಮತ್ತು ಅಂಬಾಭವಾನಿಯ ಮೇಲೆ ಹೆಚ್ಚಾಗಿ ಗೊಂದಲಗಳು ನಡೆಯುತ್ತವೆ. ಈ ಗೊಂದಲವು ಸಾಂಸ್ಕೃತಿಕ, ಐತಿಹಾಸಿಕ, ಸಾಮಾಜಿಕ ಹಾಗು ಸಾಹಿತ್ಯಿಕ ಹಿನ್ನೆಲೆಯನ್ನು ಒಳಗೊಂಡಿದೆ. ಇದು ಗೊಂದಲಿಗರ ಸಂಸ್ಕೃತಿಯ ಪ್ರತೀಕವಾಗಿದೆ. 'ಸಂಸ್ಕೃತಿ' ಎಂಬ ಶಬ್ಧವು ವಿಶಾಲ ಅರ್ಥವನ್ನು ಹೊಂದಿದೆ. ಸಂಸ್ಕೃತಿಯು ತಲ ತಲಾಂತರದಿಂದ ಬೆಳೆದುಕೊಂಡು ಬಂದ ಒಂದು ಪರಂಪರೆಯನ್ನು ಬಿಂಬಿಸುತ್ತದೆ. ನೀತಿಪರವಾದ ಬೋಧನೆ, ತತ್ವ, ಅಡಿಪಾಯ, ಚಟುವಟಿಕಾ ಕ್ರಿಯೆ, ಸಂಪ್ರದಾಯ, ಬದಲಾವಣೆ ಮುಂತಾದ ಪ್ರಕ್ರಿಯೆಯನ್ನು ಒಳಗೊಂಡ ಒಂದು ಘಟಕವಾಗಿದೆ. "ಸಂಸ್ಕೃತಿಯಲ್ಲಿಯ ಮನುಷ್ಯ ಮತ್ತು ಕ್ರಿಯೆಯ ಪಾತ್ರ ಮಹತ್ವದಾಗಿದೆ. ಅಷ್ಟೆ ಅಲ್ಲ ಮನುಷ್ಯ ಮತ್ತು ಕ್ರಿಯೆ ಅಭೇದ್ಯವಾಗಿರುತ್ತದೆ. ಮನುಷ್ಯ ಕ್ರಿಯೆಯೇ ಸಂಸ್ಕೃತಿಯ ವಿನ್ಯಾಸಗಳನ್ನು ರೂಪಿಸುತ್ತ ಹೋಗುತ್ತದೆ. ಒಳ ಹೋರಾಟಗಳನ್ನು ಹುಟ್ಟು ಹಾಕುತ್ತದೆ. ಹೊಸಮಾದರಿಗಳನ್ನು ಕೆತ್ತಿ ಕೊಡುತ್ತದೆ. ಮನುಷ್ಯ ಕ್ರಿಯೆ ಮತ್ತು ಸಂಸ್ಕೃತಿ ಎರಡು ಒಂದರೊಳಗೊಂದಾಗಿ ತಳಮಳಿಸುತ್ತ, ತೆರೆದುಕೊಳ್ಳುತ್ತ, ಹೊಸ ರೂಪಗಳನ್ನು ಹುಟ್ಟಿಸುವ ಪರಿಯೇ ಒಂದು ಅನುಭವ. ಸಂಸ್ಕೃತಿಯನ್ನು ರೂಪಿಸುತ್ತ ಹೋಗುವ ಮಾನವ, ತನ್ನನ್ನೇ ತಾನು ರೂಪಿಸಿಕೊಳ್ಳುತ್ತಾನೆ."[೧] ಎಂಬ ಶಂ.ಬಾ. ಜೋಶಿಯವರ ಮಾತನ್ನು ಉಲ್ಲೇಖಿಸಬಹುದು. ಸಂಸ್ಕೃತಿಯು ಹಲವಾರು ರಂಗಗಳಲ್ಲಿ ಕವಲೊಡೆದು ಜನರ ಮನ ಮುಟ್ಟುವ ಪ್ರಕೃತಿಯ ದಿವ್ಯ

ದರ್ಶನವಾಗಿದೆ. ಕಾರಣ ಈಗಾಗಲೇ ಮಾನವನ ಹೃದಯದಲ್ಲಿ ದೈವದತ್ತವಾಗಿ ಬಂದ ಆತ್ಮ ನಂಬಿಕೆಯ ಅಚಲಶೃದ್ಧೆಯೇ ಈ ಸಂಸ್ಕೃತಿಗೆ ಕಾರಣವಾಗಿದೆ. ಏಕೆಂದರೆ ಮನುಷ್ಯ ತನ್ನ ಪರಿಸರದಲ್ಲಿಯ ಆಚಾರ ವಿಚಾರಗಳಿಗೆ ಒಂದು ತತ್ವ, ನೀತಿಯನ್ನು ಅಳವಡಿಸಿ ಅದಕ್ಕೆ ಸಂಸ್ಕೃತಿ ಎಂಬ ಮೆರಗನ್ನು ಕೊಡುತ್ತಾನೆ. ಇಂಥಹ ಪರಂಪರೆ ಮನುಷ್ಯನ ಬದುಕಿನುದ್ದಕ್ಕೂ ಸಾಗುತ್ತಾ ಬಂದಿದೆ. ಅದು ಆ ಮನುಷ್ಯನ ಮನಸ್ಸಿಗೆ ನೆಮ್ಮದಿ ಕೊಡುತ್ತದೆ. ಇದರಂತೆ ಜನಪದರು ತಮ್ಮ ಹಾಡು, ಕಥೆ, ಪುರಾಣ, ಹಬ್ಬ, ಹರಿದಿನ, ಪ್ರತಿಯೊಂದರಲ್ಲೂ ಹಾಗು ಮನುಷ್ಯನ ಹುಟ್ಟಿನಿಂದ ಸಾವಿನವರೆಗೂ ಇರುವ ಪ್ರತಿಯೊಂದು ಹಂತದಲ್ಲಿಯೂ ಸಂಸ್ಕೃತಿಯನ್ನು ಕಾಣಬಹುದಾಗಿದೆ. ಇಂತಹ ಆಚಾರ ವಿಚಾರಗಳ ಸಂಸ್ಕಾರ- ದಿಂದ ಸಂಸ್ಕೃತಿಯಾಗಿದೆ ಎನ್ನಬಹುದು. ಇನ್ನೊಂದು ಅರ್ಥದಲ್ಲಿ "ಮನುಷ್ಯ ಸಮಾಜ ಇರುವ ಕಡೆ ಸಂಸ್ಕೃತಿ ಇದ್ದೆ ಇರುತ್ತದೆ. ಇಲ್ಲಿ ಮನುಷ್ಯನು ಬಡವನೋ, ಶ್ರೀಮಂತನೋ, ಕೆಳಜಾತಿಯೋ, ಮೇಲ್ಜಾತಿಯೋ ಎಂಬುದು ಮುಖ್ಯವಲ್ಲ. ಮನುಷ್ಯನಿದ್ದ ಕಡೆ ಸಂಸ್ಕೃತಿ ಇರುತ್ತದೆ. ಈ ಸಂಸ್ಕೃತಿಗೆ ಯಾವುದೇ ತಾರತಮ್ಯವಿಲ್ಲ. ಹರ್ಸಕೋವಿಟ್ಸ ಅವರು ಹೇಳುವಂತೆ ಜನರ ಜೀವನ ವಿಧಾನವೇ ಸಂಸ್ಕೃತಿ"[೨] ಎನ್ನುತ್ತಾರೆ. ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ ಪರಂಪರೆ ಮತ್ತು ಸಂಸ್ಕೃತಿ ಇರುತ್ತದೆ. ಅಲೆಮಾರಿಗಳಾದ ಗೊಂದಲಿಗರು ಹೇಳುವ ಕಥೆಗಳು ಹಾಡುವ ಕಥನಗೀತೆಗಳು ಸಂಸ್ಕೃತಿ ನೆಲೆಗಟ್ಟಿನಿಂದ ಕೂಡಿವೆ. ಹಲವಾರು ನೀತಿಪರವಾದ ಕಥೆಗಳು, ಪದ್ಯಗಳು ಸಮಾಜೋಮುಖಿಯಾಗಿ ತಮ್ಮ ಕಾರ್ಯ ಮಾಡುತ್ತಿವೆ ಎಂಬುದನ್ನು ಗಮನಿಸಬೇಕಾಗುತ್ತದೆ.

### ೩.೨ ಸಾಹಿತ್ಯಿಕ ಗೊಂದಲ

ದೈವಿಕತೆ ಆರಾಧನೆಗೆ ಒಳಪಡುವ ಗೊಂದಲವು ಪ್ರಾಚೀನ ಸಾಹಿತ್ಯಿಕ ಇತಿಹಾಸವನ್ನು ಒಳಗೊಂಡಿದೆ ಎಂದು ಹೇಳಬಹುದು. ಸುಮಾರು ಹತ್ತನೇ ಶತಮಾನದಲ್ಲಿಯೇ ಗೊಂದಲ ಬಗ್ಗೆ ನಮಗೆ ಮಾಹಿತಿ ಸಿಗುವುದು. ಇದು "ಗೊಂದಣ, ಗೊಂದಳ ಎಂಬ ರೂಪಗಳಲ್ಲಿ ದೊರೆಯುತ್ತದೆ. ಇಂಗ್ಲೀಷ ಮತ್ತು ತಮಿಳಿನಲ್ಲಿ 'ಕೊಂತಳಮ್' ಎಂಬ ಅರ್ಥದಲ್ಲಿ ಹಾಗೂ ತೆಲುಗಿನಲ್ಲಿ ಗೊಂಡಲಿ, ಗೊಂಡ್ಲಿ ಎಂಬ ರೂಪದಲ್ಲಿ ಬೆಳೆಯುತ್ತದೆ. ಇದಕ್ಕೆ ನರ್ತಿಸುವಿಕೆ (ಕುಣಿತ), ಜನರಗುಂಪು (ಗದ್ದಲ) ಎಂಬ ಅರ್ಥವನ್ನು ಕೊಡಲಾಗಿದೆ."[೩] ಮೂಲವಾಗಿ ಹಲವು ಜನರು ಕೂಡಿ ನರ್ತಿಸುವುದು ಎಂಬರ್ಥವಾಗಿದೆ. ಭಾಷಾರ್ಥವಾಗಿ ನೋಡಿದಾಗ ಹಲವಾರು ಪದಗಳು ಭಾಷೆಯಿಂದ ಭಾಷೆಗೆ ಪರಿವರ್ತನೆಯಾಗುತ್ತಾ ಹೋಗುತ್ತವೆ. ಕೆಲವು ಪದಗಳನ್ನು ನಮ್ಮ ಭಾಷೆಗೆ ಎರವಲು ಪಡೆಯುವಾಗ ಸಂಕೀರ್ಣಗೊಂಡು ಪರಿವರ್ತನೆಯಾಗಿರುತ್ತವೆ. "ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳ ಅಂತ್ಯದಲ್ಲಿರುವ ಟ್, ಳ್, ಣ್, ಲ್ ಗಳು ಪರಸ್ಪರ ವ್ಯತ್ಯಾಸಗೊಳ್ಳುವುದು ಹಲವು ಸಂದರ್ಭಗಳಲ್ಲಿ ತೋರುವ ಸಾಮಾನ್ಯ ಸಂಗತಿ ಎಂಬುದನ್ನು ಹೇಳಬೇಕಾಗಿಲ್ಲ. ಇನ್ನು ಈ ಶಬ್ಧಗಳಲ್ಲಿ ಹೃಸ್ವ ಮತ್ತು ದೀರ್ಘ ಸ್ವರಗಳ ಬಗ್ಗೆ

ತಿಳಿಯುವುದು ಅವಶ್ಯವಿದೆ. 'ಗೊಂದಳ' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿರುವ ಗೊಂದಲ ಎಂಬ ಪದವೇ ಸ್ವಲ್ಪ ಪರಿವರ್ತನೆಯಾಗಿ ಮರಾಠಿ ಭಾಷೆಯಲ್ಲಿ 'ಗೋಂಧಲ ಆಗಿದೆ."[೪] ಪ್ರಾಚೀನ ಸ್ಕಂದ ಪುರಾಣಗಳಲ್ಲಿ, ಜ್ಞಾತಿ ಪದಕೋಶಗಳಲ್ಲಿ ಗೊಂದಲ ಎಂಬ ಶಬ್ಧಕ್ಕೆ ಅರ್ಥವನ್ನು ಕಂಡು ಕೊಳ್ಳಬಹುದು. ಕರ್ನಾಟಕದ ಎಲ್ಲಮ್ಮ ದೇವಿಯ ಆರಾಧನೆಯ ಸಲುವಾಗಿ ಗೊಂದಲಿಗರು ಗೊಂದಲ ನೃತ್ಯವನ್ನು ಮಾಡುತ್ತಿದ್ದರು. ಈ ಗೊಂದಲ ನೃತ್ಯವು ಹುಟ್ಟಿದ್ದು ಕರ್ನಾಟಕದಲ್ಲಿಯೇ "ರೇಣುಕಾ ಮಹಾತ್ಮೆಯಲ್ಲಿ ಗೊಂದಲವನ್ನು ಕುರಿತು ನೃತ್ಯವಿಧಾನ ಎಂಬುದಾಗಿ ವರ್ಣಿಸಲಾಗಿದೆ. ಈ ಅಧ್ಯಾಯದ ೩೨ ನೇ ಶ್ಲೋಕವು ಈ ಗೊಂದಲಿ ನೃತ್ಯವು ಕರ್ನಾಟಕ ದಲ್ಲಿಯೇ ಹುಟ್ಟಿದ್ದು ಎಂದು ಸ್ಪಷ್ಟವಾಗಿ ಹೇಳಲಾಗಿದೆ."[೫]

"ಗೌಂಡಲೀ ಅಥವಾ ಗೊಂದಲೀ ನೃತ್ಯ ಕರ್ನಾಟಕದಲ್ಲಿ ಹುಟ್ಟಿತೆಂಬ ಯಾದವರ ಕಾಲದ ಶಾಜ್ಞಾ ದೇವನ ಅಭಿಮತ ಇಲ್ಲಿ ಉಲ್ಲೇಖವಾಗಿದೆ. ಗೊಂದಲ ಶಬ್ಧವನ್ನು ಕನ್ನಡದ ಆದಿಕವಿ ಪಂಪ, ರುದ್ರಭಟ್ಟ, ಅಭಿನವ, ಪಂಪ, ಶರಣರು ಸಮೂಹ ಎಂಬರ್ಥದಲ್ಲಿ ಬಳಸಿದ್ದಾರೆ. ನಾಗಚಂದ್ರ ಕವಿ ತನ್ನ ಮಲ್ಲಿನಾಥ ಪುರಾಣದಲ್ಲಿ 'ಕುಣಿವ ಗೊಂದಣ' ಎಂಬ ಪದವನ್ನು ಉಪಯೋಗಿಸಿದ್ದಾನೆ.

ಪಾಲ್ಕುರಿಕಿ ಸೋಮನಾಥ ಕ್ರಿ.ಶ. ೧೨-೧೩ ನೇ ಶತಮಾನದ ಸುಪ್ರಸಿದ್ಧ ತೆಲಗು ಕವಿ, ಕನ್ನಡ ಮರಾಠಿ, ತಮಿಳು ಭಾಷೆಗಳಲ್ಲೂ ಪಂಡಿತ. ಈತ ತನ್ನ ಪಂಡಿತಾರಾಧ್ಯ ಚರಿತ್ರ ಕಾವ್ಯದ ಪರ್ವತ ಪ್ರಕರಣದಲ್ಲಿ ಈ ನಾಲ್ಕು ಭಾಷೆಗಳನ್ನು ಬಳಸಿಕೊಂಡಿದ್ದಾನೆ. ಈ ಕವಿಯೇ ಬರೆದ ಇನ್ನೊಂದು ತೆಲಗು ಕೃತಿ ಬಸವ ಪುರಾಣವು ಇದರಲ್ಲಿ ಬಸವಣ್ಣನ ಮದುವೆ ವೈಭವದ ಪ್ರಸಂಗದ ವರ್ಣನೆ ಇದೆ. ಈ ಮಂಗಳೋತ್ಸವದಲ್ಲಿ ಪೇರಣಿ, ಕೋಲಾಟ ಕೇಳಿಕಾದಂತ ಜಾನಪದ ಕಲಾಪ್ರಕಾರಗಳ ಕಲಾವಿದರೊಂದಿಗೆ ಗೊಂಡ್ಲಿ ಅರ್ಥಾತ ಗೊಂದಲಿಗರು ಪಾಲ್ಗೊಂಡಿದ್ದನ್ನು ಕವಿ ಕಥಿಸಿದ್ದಾನೆ."[೬]

ಅಮಲಿಕು ಗ್ರಾಮ ಮಹತ್ಮ್ಯದ ಪ್ರಕಾರ ಈಗ "ಮಾಹೂರ ರೇಣುಕಾದೇವಿಯ ನಿವಾಸಗಳಲ್ಲಿ ಒಂದಾಗಿದೆ. ಅದಕ್ಕಾಗಿ ಈ ಪವಿತ್ರ ಕ್ಷೇತ್ರ ಕಾರ್ಯವನ್ನು ಹಾಗೂ ಅವಳ ಮಹಿಮೆಯನ್ನು ಹಾಡಿ ಕುಣಿಯುವ ಹಲವು ಕಥನಗಳಿವೆ. ಈ ಮೂರು ಗ್ರಂಥಗಳ ಅಧ್ಯಾಯದಲ್ಲಿ ಗೊಂದಲಿ ನೃತ್ಯದ ವರ್ಣನೆಯೇ ಇದೆಯಂತೆ, ಇದರಲ್ಲಿ ಉದ್ಧೃತವಾಗಿರುವ ಕೆಲವು ಶ್ಲೋಕಗಳು ಶಾಂಜ್ಞಾದೇವನ ಸಂಗೀತ ರತ್ನಾಕರದ ಗೌಂಡಲೀ ವಿಧಿಯ ವರ್ಣನೆಯಲ್ಲಿ ಇದನ್ನು ಉಲ್ಲೇಖಿಸಿದ್ದಾನೆ."[೭] ಹೀಗೆ ಸಾಹಿತ್ಯಿಕವಾಗಿ ಗೊಂದಲವೂ ಬಹಳಷ್ಟು ಪ್ರಾಚೀನ ಕಲೆಯಾಗಿದ್ದು ಮೂಲವಾಗಿ ಅದೊಂದು ದೈವಿ ಆರಾಧನೆಯಾಗಿತ್ತು, ಅದು ನೃತ್ಯ ರೂಪಕದಲ್ಲಿತ್ತು ಎಂಬುದು ಸ್ಪಷ್ಟವಾಗಿದೆ. 'ಗೊಂದಲ' ಎಂಬುದಕ್ಕೆ ಕಿಟೆಲ್ ಕೋಶದಲ್ಲಿ ' Confussion bustle, tumult' ಎಂಬರ್ಥವಿದ್ದು, ಇಲ್ಲಿ ನಡೆಯುವ ಕ್ರಿಯೆಗೆ ಸರಿಯಾಗಿ

ಹೊಂದಿಕೆಯಾಗುವುದಿಲ್ಲ. ಈ ಗೊಂದಲ ಎಂಬ ಶಬ್ಧ ಬಹುಶ: ಗೊಂದಲಿಗ ಎಂಬುದಕ್ಕೆ ಕಿಟೆಲ್ ಕೋಶದಲ್ಲಿ 'A man who makes music in honour of parvati and sings he stories (Mhar, Mhar) ಗೋನ್ಧಳ a tumultial ous festivity in propitiation of devi' ಎಂದಿದ್ದು ಇಲ್ಲಿ ನಡೆಯುವ ಗೊಂದಲ ಕ್ರಿಯೆಗೆ ಹೆಚ್ಚು ಹೊಂದಿಕೆಯಾಗುತ್ತದೆ."[೮]

## ೩.೩ ಸಾಂಸ್ಕೃತಿಕ ಗೊಂದಲ

ಸಾಂಸ್ಕೃತಿಕ ಹಿನ್ನೆಲೆಯಾಗಿ ಗೊಂದಲಗಳನ್ನು ನೋಡಿದರೆ ಪರಂಪಾರಗತವಾಗಿ ಗೊಂದಲ ಹಾಕುವ ಕಾರ್ಯ ಗೊಂದಲಿಗರ ಮನೆತನದ ಹಿನ್ನೆಲೆಯಾಗಿ ಕಂಡು ಬರುವುದು. ಮದುವೆ, ಮುಂಜಿವೆ, ಸೀಮಂತ ಮುಂತಾದ ಸಮಾರಂಭಗಳಲ್ಲಿ ಗೊಂದಲ ಹಾಕಿಸಿ ಹಲವಾರು ಕಥೆಗಳನ್ನು ಹೇಳುವುದು, ಭಕ್ತಿಯಿಂದ ಮೈಮರೆತು ಕುಣಿಯುವುದು ಗೊಂದಲದ ಒಂದು ಭಾಗವಾಗಿ ಬಂದಿದೆ. "ಬೆಳಗಾವಿ ಪ್ರದೇಶದ ಕೆಲ ಹರಿಜನರಲ್ಲಿ ಗೊಂದಲಿಗರೆಂಬ ದೇವಿ ಭಕ್ತರಿದ್ದಾರೆ. ಆದರೆ ಅವರು ಗೊಂದಲಕಾರ್ಯ ಮಾಡುವುದಿಲ್ಲ. ಅನುವಂಶಿಕ ಗೊಂದಲಿಗರಿಂದಲೇ ವಿಧ್ಯುಕ್ತವಾಗಿ ಗೊಂದಲ ಹಾಕಿಸುವ ಪದ್ಧತಿ ಅವರದು. ದೇವಿ ಭಕ್ತರಾದ ವಡ್ಡರು, ಬಡಿಗರು, ಕಂಬಾರರು, ಯಲಿಗಾರರು, ತೋಟಿಗರು, ಕ್ಷತ್ರಿಯರು, ಕುರುಬರು ಲಿಂಗವಂತರು ಬ್ರಾಹ್ಮಣರೊಂದಿಗೆ ಜೈನರೂ ಗೊಂದಲಕಾರ್ಯ ಆಚರಿಸುತ್ತಾರೆ. ಇನ್ನೊಂದು ವಿಶೇಷವೆಂದರೆ ಮುಸಲ್ಮಾನರು ಸಹ ದೇವಿ ಹೆಸರಿನಲ್ಲಿ ಈ ಕಾರ್ಯ ಮಾಡಿಸುತ್ತಾರೆ. ಗೊಂದಲದಲ್ಲಿ ನೈತಿಕ ಬೋಧನೆಯ ಉಪಕಥೆಗಳನ್ನು ಕಬೀರ ಶಿಶುನಾಳ, ಗೋಪಾಳ ದುರದುಂಡಿ ಮುಂತಾದ ತತ್ವಪದಗಳೊಂದಿಗೆ ಕನಕದಾಸ ಮತ್ತು ಪುರಂದರ ದಾಸರ ಕೀರ್ತನೆಗಳನ್ನು ಬಳಸಿದ್ದುಂಟು."[೯]

ಶಕ್ತಿ ದೇವಿಯ ಆರಾಧನೆಯ ಸಂದರ್ಭದಲ್ಲಿ ಗೊಂದಲವೆನ್ನುವುದು ಪ್ರಾಚೀನವಾಗಿ ಕುಣಿತದಿಂದ ಪ್ರಾರಂಭವಾಗಿರಬೇಕು. ಪೂರ್ವದಲ್ಲಿ ಸಂಗೀತ ಹಾಡುಗಳೊಂದಿಗೆ ಸಮೂಹ ನೃತ್ಯವು ಆರಂಭಕಾಲದಲ್ಲಿತ್ತು. ಕಾರಣ ಗದ್ಯ ಸಾಹಿತ್ಯದ ಪೂರ್ವಕಾಲವೇ ಪದ್ಯಸಾಹಿತ್ಯ ಮೌಖಿಕ ಸಾಹಿತ್ಯವಾಗಿದೆ. ದೇವಿ ಸ್ತುತಿರೂಪದ ಹಾಡುಗಳು ಬಳಕೆಗೊಂಡು ಅವು ಕಥನಕಾವ್ಯಗಳಾಗಿ ಬೆಳೆದು ಬಂದವು. ದೇವಿಯ ಮಹಿಮಾ ಶಕ್ತಿಯನ್ನು ಕೊಂಡಾಡುತ್ತ ಕಾವ್ಯಗಳನ್ನು ಹಾಡುತ್ತಾ ಅದೊಂದು ಕಥೆ ಮತ್ತು ವೃತ್ತಿ ಎನ್ನುವಷ್ಟರ ಮಟ್ಟಿಗೆ ಅದು ಬದಲಾವಣೆ ಹೊಂದುತ್ತ ಬಂದಿತು. ಇದರಲ್ಲಿ ಗೊಂದಲ ಕಲೆಯು ಸಾಕಷ್ಟು ಬದಲಾವಣೆ ಹೊಂದಿತು. ಪೂಜಾ ವಿಧಾನಗಳು ರೀತಿ ರೀವಾಜುಗಳು, ಕುಟುಂಬದ ಹಿನ್ನೆಲೆಯಾಗಿ ಮಡಿಮೈಲಿಗೆಯ ನಂಬಿಕೆಗಳು ಮುಂತಾದ ಬದಲಾವಣೆಗಳನ್ನು ಕಾಣುತ್ತೇವೆ. ಗೊಂದಲಿಗರು ಹೇಳುವ ಕಥೆ, ಹಾಡು, ಕಥನ ಕಾವ್ಯಗಳಲ್ಲಿಯೂ ಸಾಂಸ್ಕೃತಿಕ ಬದಲಾವಣೆಗಳಾಗಿವೆ. ಪ್ರಾರಂಭದ ಸ್ತುತಿ ಹಾಡುಗಳು ಕಾವ್ಯಗಳಾದವು. ನಂತರ ನಾಟಕೀಯವಾದ ಗದ್ಯರೂಪದ ಸಂಭಾಷಣೆಗೆ ಮಾರ್ಪಟ್ಟು ಜನಪದ ರಂಗಭೂಮಿಯ

ಪರಿಕಲ್ಪನೆಯನ್ನು ಹೊಂದಿದೆ. ಅದೊಂದು ಪ್ರದರ್ಶನ ಕಲೆಯಾಗಿ ಜನಮನದಲ್ಲಿ ಮಾನ್ಯತೆಯನ್ನು ಪಡೆದಿದೆ. ಇವರ ಸಾಹಿತ್ಯವು ಅಭಿವ್ಯಕ್ತ ಮಾಧ್ಯಮವಾಗಿದೆ. ಗೊಂದಲದ ಕಥೆಯಾದ 'ಶಿಲಾವತಿ' ಎಂಬ ಕಥೆಯನ್ನು ಮುದೇನೂರ ಸಂಗಣ್ಣವರು ಸಂಭಾಷಣೆಗೆ ಒಳಪಡಿಸಿ ನಾಟಕರೂಪದಲ್ಲಿ ಪ್ರದರ್ಶಿಸಿದರು ಎಂಬುದು ತಿಳಿದು ಬರುತ್ತದೆ.

ಮಹಾರಾಷ್ಟ್ರದಲ್ಲಿ ಈಗಲೂ ಗೊಂದಲವು ಜಾನಪದ ಆಚರಣೆಗಳಲ್ಲೇ ಶ್ರೇಷ್ಠವಾದುದಾಗಿದೆ, ಈ ಗೊಂದಲದ ವಿಧಿವಿಧಾನಗಳಲ್ಲಿ ಮುಖವರ್ಣಿಕೆ, ನೃತ್ಯ, ಹಾಡು, ಸಂಭಾಷಣೆ, ಅಭಿನಯ, ವಿನೋದಗಳು ಸಂಯೋಜಿತಗೊಂಡು ಬೋಧಿಪ್ರದವಾಗಿರುವಂತೆ ರಸಾತ್ಮಕವಾಗಿಯೂ ಇರುತ್ತವೆ. ಗೊಂದಲಿಗರ ಆರಾಧ್ಯ ದೈವ ಅಂಬಾಭವಾನಿಯ ವರ್ಣನೆ ಹಾಗೂ ಆಕೆಯನ್ನೇ ಕುರಿತಾದ ಕಥಾನಕಗಳು, ಅನ್ಯ ಭಕ್ತಿಯುತ ಕಥಾನಕಗಳು ಮರಾಠಿ ಜನಪದ ಸಾಹಿತ್ಯದ ಒಂದು ಪ್ರಮುಖ ಭಾಗವೇ ಎನಿಸಿದೆ.

"ಮರಾಠಿ ಜನಪದ ಇತಿಹಾಸತಜ್ಞ ಡಾ. ರಾಮಚಂದ್ರ ದೇಖಣಿ ಹೇಳುವಂತೆ ಗೊಂದಲ ಮಹಾರಾಷ್ಟ್ರದ ಧರ್ಮವಾಗಿದೆ. ಗೊಂದಲಿಗರು ಈ ಧರ್ಮದ ಪುರೋಹಿತರೆಂದು ಪರಿಗಣಿಸಲ್ಪಡುತ್ತಾರೆ. ಅಂಬಾದೇವಿಯೇ ಇವರಿಗೆ ಸ್ಫೂರ್ತಿ ದೇವತೆಯೆಂದು ಕುಲಸ್ವಾಮಿನಿ ಎಂದು ಅವರ ನಂಬಿಕೆ. ಆಕೆಯ ಉಪಾಸಕರಾದ ಗೊಂದಲಿಗರು ಮರಾಠಿ ಸಂಸ್ಕೃತಿಯ ಮಹಾನ್‌ವಾರಸುದಾರರೆಂದು ಗೌರವಿಸಲ್ಪಡುತ್ತಾರೆ"[೧೦] ಆದರೆ ಇವರು ಹೇಳುವಂತೆ ಗೊಂದಲ ಕೇವಲ ಮಾಹಾರಾಷ್ಟ್ರದ ಧರ್ಮವಾಗದೆ ಒಂದು ಕಾಲದಲ್ಲಿ ಕರ್ನಾಟಕದಾದ್ಯಂತ ಈ ಗೊಂದಲ ಸರ್ವಧರ್ಮ ಸಮನ್ವಯ ಎನ್ನುವಂತೆ ಎಲ್ಲ ಧರ್ಮಿಯರು ಆಚರಿಸುವ ಆಚರಣಾ ವಿಧಾನವಾಗಿತ್ತು. ಪ್ರಾದೇಶಿಕ ಹಿನ್ನೆಲೆಯಲ್ಲಿ ಸಂಸ್ಕೃತಿಕರಣಗೊಂಡ ಹಲವಾರು ಕಥೆಗಳು, ಕಥಾವಸ್ತು, ಘಟನೆ, ನಿರೂಪಣೆಗಳಲ್ಲಿ ಅಷ್ಟಷ್ಟು ಬದಲಾವಣೆ ಹೊಂದಿ ಅನ್ಯ ಹೆಸರುಗಳಿಂದ ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಅವು ಈ ಕೆಳಗಿನಂತಿವೆ.

"ಬಾಳಭಿಕ್ಷುಕ – ಬಾಣಾವತಿ

ಜಯರಾಣಿ – ಬಾಲನಾಗಮ್ಮ

ಬಾಳಾವತಿ – ಚಂದ್ರಹಾಸ

ಶಿಲಾವತಿ – ದಾಳಿಂಬರಾಣಿ "[೧೧]

ನಾನು ಈ ಅಧ್ಯಯನಕ್ಕಾಗಿ ಸತಿ ಶಿವಲೋಚನ ಮತ್ತು ನೀಲಕುಮಾರ ಕಥೆಯನ್ನು ರಾಮಣ್ಣ ಇಂಗಳೆಯವರಿಂದ ಸಂಗ್ರಹಣೆ ಮಾಡಿದಾಗ ಆ ಕಥೆಯಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಇರುವುದು ಕಂಡುಬಂದಿತು. ಇವರು ಬೇರೆ ಹೆಸರಿನಿಂದ ಕಥೆಯನ್ನು ಹೇಳಿದರು. ಕಥೆಯ ಮೂಲ ಉದ್ದೇಶ ಒಂದೇ ಆಗಿದ್ದರೂ ಅಲ್ಲಿ ಘಟನಾವಳಿಗಳು ಸ್ವಲ್ಪ ಬದಲಾವಣೆ ಹೊಂದಿವೆ. ಗೊಂದಲಿಗರು ಹೇಳುವ ಹಲವಾರು ಕಥೆಗಳು ಕಾಲಾನುಕ್ರಮೇಣ ತಲೆಮಾರಿನಿಂದ ತಲೆಮಾರಿಗೆ

ಬದಲಾವಣೆಗಳಾಗಿವೆ. ಜನರ ಅಭಿರುಚಿಗೆ ತಕ್ಕಂತೆ ಸಂದರ್ಭಕ್ಕನುಸಾರ ಹಾಸ್ಯವನ್ನು ಗೊಂದಲದ ಕಥೆಗಳಲ್ಲಿ ತುಂಬುತ್ತ ಬರಲಾಗಿದೆ.

**೩.೪ ಐತಿಹಾಸಿಕ ಗೊಂದಲ.**

ಗೊಂದಲಿಗರನ್ನು ಐತಿಹಾಸಿಕ ದೃಷ್ಟಿಕೋನದಿಂದಲೂ ನೋಡಬಹುದು. ಅನೇಕ ರಾಜಮಹಾರಾಜರು ತಮ್ಮ ರಾಜಕೀಯ ಒಳಿತಿಗೆ, ಜನರ ಯೋಗಕ್ಷೇಮಕ್ಕೆ ಗೊಂದಲವನ್ನು ಹಾಕಿಸುತ್ತಿದ್ದರು. "ಮಹಾರಾಷ್ಟ್ರದಲ್ಲಿ ಸುಮಾರು ಮೂನ್ನೂರು ವರ್ಷಗಳ ಹಿಂದೆ ಶಿವಾಜಿಯ ಆಳ್ವಿಕೆಯಲ್ಲಿ ಇಂದಿನ ವಿಜಯಪುರ ಆದಿಲ್‌ಶಾಹಿಗಳ ರಾಜ್ಯವಾಗಿತ್ತು ಮತ್ತು ಆಗಾಗ ಸಣ್ಣ ಪುಟ್ಟ ಕಲಹಗಳು ತಲೆದೊರುತ್ತಿದ್ದವು. ಪರಸ್ಪರ ರಾಜ್ಯ ಕಿತ್ತುಕೊಳ್ಳಲು ಎರಡೂ ಕಡೆಯಿಂದ ಸಂಚುಗಳು ನಡೆಯುತ್ತಿದ್ದವು. ಎರಡೂ ರಾಜ್ಯಗಳಲ್ಲಿ ಗೂಢಚಾರರ ಸಂಚಾರ ಇತ್ತು. ಗೊಂದಲಿಗರು ಶಿವಾಜಿಯ ಗೂಢಚಾರರಾಗಿ ಭಿಕ್ಷುಕರ ವೇಷಧರಿಸಿ ಆದಿಲ್ ಶಾಹಿಗಳ ರಾಜ್ಯಕ್ಕೆ ಹೋಗುತ್ತಿದ್ದರು. ಮಾಹಾರಾಷ್ಟ್ರದಲ್ಲಿ ಗೂಢಚಾರ ವೃತ್ತಿ ಮಾಡುತ್ತಿದ್ದ ಗೊಂದಲಿಗರಿಗಾಗಿಯೇ ಶಿವಾಜಿ ಮಾಹಾರಾಜ ದತ್ತಿ ಕೊಟ್ಟಿದ್ದ, ಈ ದತ್ತಿ ಭೂಮಿಯನ್ನು ಸ್ವತ: ಗೂಢಚಾರರು ಅನುಭವಿಸಲಾಗದೆ ಅವರನ್ನು ನಂಬಿದವರು ಮಾತ್ರ ಅನುಭವಿಸುತ್ತಿದ್ದರು. ವಿಜಯಪುರದಲ್ಲಿದ್ದ ಕೆಲ ಗೊಂದಲಿಗರಿಗೆ ತಮ್ಮ ವೇಷವನ್ನೇ ವೃತ್ತಿಯನ್ನಾಗಿ ಮಾಡಿಕೊಳ್ಳುವುದು ಆ ಕಾಲಕ್ಕೆ ಅನಿವಾರ್ಯವಾಯಿತು. ಗೊಂದಲ ಹಾಕುವ ನೆಪದಲ್ಲಿ ಇವರು ಮುಸಲ್ಮಾನರ ರಾಜ್ಯದಲ್ಲಿ ಸಂಗ್ರಹಿಸುತ್ತಿದ್ದ ಮಾಹಿತಿಯನ್ನು ಮರಾಠಿಯಲ್ಲಿ ಕಥೆಯಾಗಿ ಹಾಡುತ್ತಿದ್ದರು. ಭಿಕ್ಷಾಟನೆಯ ನೆಪದಲ್ಲಿ ಗೊಂದಲಿಗರು ಮನೆಯ ಮುಂದೆ ನಿಂತು ಹಾಡತೊಡಗಿದರೆ ಆ ಸುದ್ಧಿ ಮನೆಯೊಳಗಿದ್ದವರಿಗೆಲ್ಲ ತಿಳಿಯುತ್ತಿದ್ದವು. ಮರಾಠಿಗರಾದ ಲಮಾಣಿಗಳು ಮತ್ತು ಅವರಂತೆ ಅಲೆಮಾರಿ ಮರಾಠಿಗಳಾದ ಮಾವುಳೇ ಮಂದಿ ಇರುವಲ್ಲೆಲ್ಲ ಹೋಗಿ ಗೊಂದಲ ಹಾಕಿ, ಆ ಮೂಲಕ ಮುಸಲ್ಮಾನರ ಮಸಲತ್ತುಗಳನ್ನು ತಿಳಿಸಿ ಒಗ್ಗಟ್ಟನ್ನು ಸಾಧಿಸಲು ಸಲಹೆ ನೀಡುತ್ತಿದ್ದರು. ಅವರೆಲ್ಲ ಅಂಬಾಭವಾನಿಯ ಭಕ್ತರಾಗಿದ್ದುದರಿಂದ ದೇವತೆಯ ಹೆಸರಿನಲ್ಲಿ ಹಾಡುತ್ತಿದ್ದ ಕಥೆಗಳು ಇವರ ಸಲಹೆಗಳನ್ನು ಸುದ್ದಿಗಳನ್ನು ಯಶಸ್ವಿಗೊಳಿಸುತ್ತಿದ್ದವು. ಗೂಢಚಾರ್ಯ ಕಾರ್ಯದ ನಂತರ ಅವರು ತಮ್ಮ ಮೂಲ ಸ್ಥಳಗಳಿಗೆ ಹೋಗದೆ ಅಲ್ಲಿಯೇ ನೆಲೆ ಕಂಡುಕೊಂಡರೆಂದು ಹೇಳುತ್ತಾರೆ. ಶಿವಾಜಿ ಆಡಳಿತ ಕೊನೆಗೊಂಡ ನಂತರ ಭಿಕ್ಷಾಟನೆ ಮಾಡುತ್ತ ಕನ್ನಡ ನಾಡಿನಲ್ಲಿಯೇ ಉಳಿದರು. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬಂದ ಇವರು ತಮ್ಮ ಸಂಸ್ಕೃತಿಯೊಂದಿಗೆ ಕರ್ನಾಟಕದ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಅದನ್ನು ತಮ್ಮ ಗೊಂದಲದಲ್ಲಿ ಪ್ರದರ್ಶಿಸತೊಡಗಿದರು. ಹೀಗಾಗಿ ಗೊಂದಲಿಗರು ನಡೆಸುವ ಗೊಂದಲದಲ್ಲಿ ಮರಾಠಿ ಮತ್ತು ಕನ್ನಡ ಸಂಸ್ಕೃತಿಯ ಮಿಶ್ರಣವನ್ನು ಕಾಣುತ್ತೇವೆ.

ಗೊಂದಲಿಗರು ಮೂಲತ: ಮಾವುಳೆ ಸಮುದಾಯದವರೆಂದು ಸಂಶೋಧಕರು

ಅಭಿಪ್ರಾಯ ಪಟ್ಟಿದ್ದಾರೆ. ಇವರು ಮಹಾರಾಷ್ಟ್ರದ ಕಾಡು ಕುರುಬರು ಎಂಬ ಮಾಹಿತಿಯನ್ನು ನೀಡಿದ್ದಾರೆ. ಇವರು ದೇವಿಯ ಹೆಸರಿನಲ್ಲಿ ಹಾಡು ಮತ್ತು ಕುಣಿತ ಪ್ರದರ್ಶಿಸುತ್ತಿದ್ದರು. ಆದಿಲಶಾಹಿಗಳ ಕುತಂತ್ರಗಳಿಂದ ಬೇಸತ್ತಿದ್ದ ಶಿವಾಜಿ ಮಹಾರಾಜ ಇವರನ್ನು ಕರೆದು, ದೇವಿಯ ಹೆಸರಿನಲ್ಲಿ ಮುಸಲ್ಮಾನರ ಮನೆಗಳಿಗೆ ಹೋಗಿ ಗೊಂದಲ ಮಾಡಿ ಪ್ರಸಾದ ಕೊಡುವ ಮತ್ತು ಭಂಡಾರ ಹಚ್ಚುವ ನೆಪದಿಂದ ಅವರ ಮನೆಯೊಳಗೆ ಪ್ರವೇಶಿಸಿ ಅವರ ರಹಸ್ಯಗಳನ್ನು ತಿಳಿದು ವರದಿ ಮಾಡಬೇಕೆಂದು ಅಪ್ಪಣೆ ಮಾಡಿದ್ದನೆಂದು ತಿಳಿಯುತ್ತದೆ. ಗೂಢಚಾರರಾದ ಗೊಂದಲಿಗರು ದೇವಿಯ ಹೆಸರನ್ನು ಹೇಳಿದರೆ ತೆಪ್ಪಗೆ ನಿಲ್ಲುವಂತೆ ಮಾಡಿ ಅವರ ಮನೆಯೊಳಗೆ ಪ್ರವೇಶ ಮಾಡಿ, ಮನೆಯಲ್ಲಿ ಅಡಿಗಿಸಿಟ್ಟ ಆಯುಧಗಳ ಬಗೆಗೆ ಮಾಹಿತಿ ನೀಡುತ್ತಿದ್ದರು. ಇದರಿಂದ ಸಂತೃಪ್ತನಾದ ಶಿವಾಜಿ ಮಹಾರಾಜ ತನ್ನ ಅಕ್ಕಪಕ್ಕದ ಸಂಸ್ಥಾನಗಳಿಗೂ ಗೊಂದಲಿಗರನ್ನು ಗೂಢಚಾರರನ್ನಾಗಿ ನೇಮಿಸಿದ್ದ ಎಂದು ತಿಳಿಯುತ್ತದೆ. ಶಿವಾಜಿ ಮಹಾರಾಜ ಒಮ್ಮೆ ತುಂಬಾ ಕಷ್ಟಕ್ಕೆ ಸಿಕ್ಕಿಕೊಂಡು ಚಿಂತಾಕ್ರಾಂತನಾಗಿ ಕುಳಿತಾಗ ಶಿವಾಜಿಯ ಆಸ್ಥಾನದಲ್ಲಿ ಪ್ರಧಾನಿಗಳಾಗಿದ್ದ ತಾನಾಜಿ ಮತ್ತು ಮಾನಾಜಿ ಬಂದು ದೇವಿ ಅಂಬಾಭವಾನಿಯ ಹೆಸರಿನಲ್ಲಿ ಗೊಂದಲ ಹಾಕಿಸಿದರೆ ಬಂದಿರುವ ಕಷ್ಟಗಳೆಲ್ಲ ಮಾಯವಾಗುತ್ತವೆ ಎಂದು ತಿಳಿಸಿದಾಗ, ಶಿವಾಜಿಯು ಗೊಂದಲ ಪೂಜೆ ಮಾಡಿಸುತ್ತಾನೆ. ಈ ಪೂಜೆಯ ನಂತರ ಶಿವಾಜಿಗೆ ಬಂದೊದಗಿದ ಕಷ್ಟಗಳೆಲ್ಲ ಪರಿಹಾರವಾಗುತ್ತವೆ. ಶಿವಾಜಿ ಗೊಂದಲ, ಗೊಂದಲಿಗರ, ಅಂಬಾಭವಾನಿಯ ಮೇಲೆ ಭಕ್ತಿ ಶ್ರದ್ಧೆಯಿಂದ ಅನೇಕ ಗೊಂದಲ ಕಾರ್ಯಕ್ರಮಗಳನ್ನು ತನ್ನ ಅರಮನೆಯಲ್ಲಿ ಏರ್ಪಡಿಸುವುದರ ಮೂಲಕ ಅನೇಕ ಕಷ್ಟಗಳಿಂದ ಪಾರಾಗುತ್ತಾನೆ. ಅಷ್ಟೇ ಅಲ್ಲದೇ ರಾಜಕೀಯ ತಂತ್ರಗಳಿಗೂ ಈ ಗೊಂದಲಿಗರನ್ನು ಬಳಸಿಕೊಂಡನು. ಇದರಿಂದ ಯಶಸ್ಸು, ಜಯದ ಸರಮಾಲೆಗಳೇ ಶಿವಾಜಿಯ ಕೊರಳಿಗೆ ಬಿದ್ದವು. ಇದರಿಂದ ಅಂಬಾಭವಾನಿಯನ್ನು ತನ್ನ ಮನೆದೇವರನ್ನಾಗಿ ಸ್ವೀಕರಿಸಿದನಂತೆ."[೧೨]

"೧೮೭೦ ರಲ್ಲಿ ಬಕಿಂಮಚಂದ್ರ ಚಟ್ಟೋಪಾಧ್ಯಯರು "ಒಂದೆ ಮಾತರಂ" ಗೀತೆಯನ್ನು ರಚಿಸಿ ಅಂಬಾಭವಾನಿಯ ಜಾಗರಣೆ ಕೈಗೊಂಡರು. ೧೯೦ರಲ್ಲಿ ಅರವಿಂದ ಘೊಷರು ಭವಾನಿ ಮಂದಿರದ ಪರಿಕಲ್ಪನೆಯಿಂದ ಬಂಗಾಳದಲ್ಲಿ ಮತ್ತು ಉಳಿದ ಭಾರತದಲ್ಲಿಯ ಜನತೆಯ ಅಂತ:ಕರಣದಲ್ಲಿ ಸಾಮರ್ಥ್ಯದ ಜನನಿ ಎಂದು ಆಕೆಯ ಪ್ರತಿಮೆಯನ್ನು ಸ್ಥಾಪಿಸಿದರು. ರಾಷ್ಟ್ರೀಯ ಆಂದೋಲನಕ್ಕೆ ಈ ಸಾಮರ್ಥ್ಯವನ್ನು ಕೊಟ್ಟರು. ೧೭ನೇ ಶತಮಾನದಲ್ಲಿ ಶಿವಾಜಿಯು ಭವಾನಿಯ ಭಕ್ತಿಯ ಸ್ಫೂರ್ತಿಯನ್ನು ಪಡೆದು ನಡೆಸಿದ ಸ್ವಾತಂತ್ರ್ಯ ಆಂದೋಲವನ್ನು ಅದರ ಸ್ವರೂಪವನ್ನು ನಾವು ಈಗಾಗಲೇ ಗಮನಿಸಿದ್ದೇವೆ. ಮುಂದೆ ೧೯-೨೦ನೇ ಶತಮಾನದಲ್ಲಿ ಬ್ರಿಟೀಷರ ಕಪಿಮುಷ್ಟಿಯಿಂದ ಭಾರತವನ್ನು ಮುಕ್ತಗೊಳಿಸಲು ಹಲವು ನಾಯಕರು, ವೀರರು, ಚಿಂತಕರು ತಮ್ಮ ಪ್ರಾಣವನ್ನು ಒತ್ತೆಯಿಟ್ಟು ನಡೆಸಿದ ಹೋರಾಟದ ಹಿಂದೆ ಶಿವಾಜಿ ಮತ್ತು

ಅಂಬಾಭವಾನಿಯ ಭಕ್ತಿಯನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ."[೧೩] ಹೀಗೆ ಗೊಂದಲದ ಬಗ್ಗೆ ಒಂದು ಐತಿಹಾಸಿಕ ಚಿತ್ರಣವೇ ನಮಗೆ ಸಿಗುತ್ತದೆ.

**೩.೭ ಸಾಮಾಜಿಕ ಗೊಂದಲ**

ಗೊಂದಲವು ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಹಾಕಲ್ಪಡುತ್ತವೆ. ಮದುವೆ ಸಮಾರಂಭ, ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಗೊಂದಲ ಹಾಕುತ್ತಾರೆ. "ಗೊಂದಲದ ದಿನವಿದ್ದರೆ ಅಂದು ಬೇರೆ ಬೇರೆ ಕೋಣೆಯಲ್ಲಿ ಗಂಡ-ಹೆಂಡತಿ ಕುಳಿತುಕೊಳ್ಳುವಂತೆ ವ್ಯವಸ್ಥೆ ಮಾಡಿ ಬೆಳತನಕ ಗೊಂದಲ ನಡೆಸುತ್ತಾರೆ. ಗೊಂದಲ ಹಾಕುವಾಗ ನೆಂಟರು ಹಾಡುಗಳನ್ನು ಹಾಡುವುದರ ಮೂಲಕ ತಮ್ಮ ಜ್ಞಾನವನ್ನು ಸೂಸುತ್ತಾರೆ. ಗೊಂದಲಕ್ಕೆ ಬೇಕಾದ ಸಂಬಾಳ, ತಾಳ, ತಂತುಣಿ ವಾದ್ಯಗಳನ್ನು ಗಂಡಿನವರು ಮಾತ್ರ ಕೊಡುತ್ತಾರೆ. ಮದುವೆಗೆ ಬಂದವರು ಊಟದ ನಂತರ ಎಲ್ಲರೂ ಗೊಂದಲವನ್ನು ನೋಡುತ್ತಾರೆ. ಗೊಂದಲದ ಕಲಶಕ್ಕೆ ನಮಸ್ಕರಿಸುತ್ತಾರೆ. ಗೊಂದಲಿಗರು ಹೇಳುವ ಹಾಡು ಕಥೆಗಳನ್ನು ಕೇಳುತ್ತಾರೆ."[೧೪] ಸಾಮಾಜಿಕವಾಗಿ ಗೊಂದಲವನ್ನು ಹರಕೆಗೊಂದಲ, ಬಯಲು ಗೊಂದಲ ಎಂದು ಗುರುತಿಸಲಾಗಿದೆ. ಹರಕೆ ಗೊಂದಲವನ್ನು ನವರಾತ್ರಿಯಲ್ಲಿ ಹಾಕಿಸುತ್ತಾರೆ. ವಿಶೇಷವಾಗಿ ಶಕ್ತಿ ದೇವತೆಗಳಿಗೆ ಬೇಡಿಕೊಂಡಿದ್ದರೆ ಗೊಂದಲ ಹಾಕಿಸುವ ಕಾರ್ಯ ಮಾಡುತ್ತಾರೆ. ಇದಕ್ಕೆ "ಹರಕೆಗೊಂದಲ" ಎನ್ನುತ್ತಾರೆ. ಹರಕೆ ಹೊತ್ತಾಗ ತಿರುಗಾಟದಲ್ಲಿ ಹನ್ನೆರಡು ವರ್ಷದ ಹರಕೆ ಹಾಳಾಗಬಾರದು ಎಂಬ ನಂಬಿಕೆಯನ್ನು ಇಟ್ಟುಕೊಂಡು ಹನ್ನೆರಡು ವರ್ಷಗಳ ಒಳಗೆ ಗೊಂದಲವನ್ನು ನಡೆಸುತ್ತಾರೆ. ಗೊಂದಲಿಗರಿಗೆ ನವರಾತ್ರಿಯ ಒಂಬತ್ತು ದಿನಗಳಲ್ಲಿ ಬಿಡುವಿಲ್ಲದ ಕೆಲಸ. ಪ್ರತಿದಿನ ಎರಡು ಮೂರು ಗೊಂದಲ ಕಾರ್ಯಕ್ರಮಗಳು ಇರುತ್ತವೆ ಎಂದು ರಾಮಪೂರದ ಗೊಂದಲಿಗರಾದ ರಾಮು ಇಂಗಳೆಯವರು ಹೇಳುತ್ತಾರೆ. ವಿಶೇಷವಾಗಿ ದೇವಿ ಆರಾಧನೆಯನ್ನು ಮಾಡುವುದರ ಜೊತೆಗೆ ಗೊಂದಲದಲ್ಲಿ ಸೋಬಾನೆ ಕೋಲು ಹಾಗೂ ಇತರೆ ಜಾನಪದ ಹಾಡುಗಳನ್ನು ಹಾಡುತ್ತಾರೆ.

"ಮಡದಿಗೆ ಬಡದಾನ ಮನದಾಗ ಮರುಗ್ಯಾನ
ಒಳಗ್ಹೋಗಿ ಸೆರಗ ಹಿಡಿಯುತ ಕೇಳ್ಯಾನ
ನಾಹೆಚ್ಚೋ ನಿನ್ನ ತವರ್‍ಹೆಚ್ಚೊ
ಅತ್ತೆ ಮಾವನ ಪಾದ ತಂದೆ ತಾಯಿಯ ಪಾದ
ಮತ್ತೆ ಗಂಡನ ಸಿರಿಪಾದ । ನೆನೆದರೆ
ಬೆನ್ನ ಹಿಂದಿರುವುದು ಕೈಲಾಸ"[೧೫]

ಹೀಗೆ ತ್ರಿಪದಿಗಳನ್ನು ರಾಗಬದ್ಧವಾಗಿ ಅವರು ಹಾಡುತ್ತಾರೆ. ಜೀವನ ತತ್ವವನ್ನು ಸಾರುವ ಇಂಥಹ ತ್ರಿಪದಿಗಳನ್ನು ಹೇಳುವ ಗೊಂದಲಿಗರು ಒಂದು ರೀತಿಯಲ್ಲಿ ಅನುಭಾವಿಗಳಾಗಿದ್ದಾರೆ.

**ಕೋಲು ಪದಗಳು**

"ಕೋಲಕೊಲೆನ್ನಿಕೆ ಕೋಲ ಮುತ್ತಿನ ಕೋಲ ॥ ಪಲ್ಲ ॥

ಕೋಲ ಕೊಲೆನ್ನಿರೆ ಕೋಲ ರನ್ನದಾ ಕೋಲ ॥ ಪಲ್ಲ ॥

ಕೋಲ ಕೋಲ ಎನ್ನಿರೆ ಚಿನ್ನದಾ ಕೋಲ" ॥ ಪಲ್ಲ ॥೧೬

ಇಂತಹ ಪಲ್ಲವಿಗಳಿರುವ ಸಹಸ್ರಾರು ಹಾಡುಗಳು ಗೊಂದಲಿಗರ ಕಂಠದಲ್ಲಿವೆ.

ಮದುವೆ ಸಮಾರಂಭದಲ್ಲಿ ಗೊಂದಲ ಹಾಕಿದಾಗ ಗೊಂದಲಿಗರು ಸಂದರ್ಭಕ್ಕೆ ಅನುಸಾರವಾಗಿ ಅಲ್ಲಿಯೇ ಕಥೆ ಹಾಸ್ಯಗಳನ್ನು ಸೃಷ್ಟಿಸುತ್ತಾರೆ ಹಾಗೂ ನೆರೆದ ಜನರನ್ನು ರಂಜಿಸುತ್ತಾರೆ. ಗೊಂದಲಿಗರ ಹೆಣ್ಣು ಮಕ್ಕಳನ್ನು ಮದುವೆಯ ಪ್ರಸಂಗಗಳಲ್ಲಿ ಹಾಡಲು ಕರೆಯಿಸಿ ಕಾಣಿಕೆಗಳನ್ನು ಕೊಡುತ್ತಾರೆ. ಗೊಂದಲಿಗರು ಜನರು ಕರೆದಲ್ಲಿ ಹೋಗಿ ಗೊಂದಲ ಹಾಕುತ್ತಾರೆ. ಗೊಂದಲಿಗರು ತಾವಾಗಿಯೇ ಎಂದೂ ಬಯಲು ಗೊಂದಲ ಹಾಕುವುದಿಲ್ಲ. ಜನರು ಗೊಂದಲ ಹಾಕಲು ಕರೆದರೆ ಅವರು ನಮಗೆ ಆಗುವುದಿಲ್ಲ ಎಂದು ಹೇಳುವುದಿಲ್ಲ. ನಾವು ದೇವಿಯ ಆರಾಧಕರು ದೇವಿಯ ಸಂಸ್ಕೃತಿ ಮತ್ತು ಧರ್ಮ ಪಾಲಿಸುತ್ತೇವೆ ಎಂದು ಹೆಮ್ಮೆಯಿಂದ ಗೊಂದಲಿಗರು ಹೇಳಿಕೊಳ್ಳುತ್ತಾರೆ.

ವಿಜಯದಶಮಿಯಲ್ಲಿ ಗೊಂದಲಿಗರು ತಮ್ಮ ಮನೆಗಳಲ್ಲಿ ಮತ್ತು ದೇವಿಯ ಗುಡಿಗೆ ಹೋಗಿ ಗೊಂದಲ ಹಾಕುತ್ತಾರೆ. ಈ ಗೊಂದಲ ಪೂಜೆಯನ್ನು ಶಾಸ್ತ್ರಬದ್ಧವಾಗಿ 'ಪೂರ್ವರಂಗ' ಮತ್ತು ' ಉತ್ತರರಂಗ' ಎಂದು ಎರಡು ಭಾಗಗಳನ್ನಾಗಿ ಮಾಡುತ್ತಾರೆ. ಪೂರ್ವರಂಗದಲ್ಲಿ ಕಲಶ ಪೂಜೆ ಮಾಡುವರು. ಇಲ್ಲಿ ದೀವಟಿಗೆ ಹಾಗೂ ಕಕ್ಕಡಗಳನ್ನು ಉರಿಸುವುದು ಪ್ರಮುಖವಾಗಿ ಕಂಡುಬರುತ್ತದೆ. ನವರಾತ್ರಿಯ ಸಂದರ್ಭದಲ್ಲಿ ದೇವಿ ಬೇಡಿದ ವರಗಳನ್ನು ನೀಡುತ್ತಾಳೆ ಎಂಬ ಅಪಾರವಾದ ನಂಬಿಕೆ ಇವರಲ್ಲಿದೆ. ಭಾರತ ಒಂದು ಕಾಲಕ್ಕೆ ಮಾತೃ ಪ್ರಧಾನ ದೇವತೆಗಳ ಆರಾಧನೆ ಮತ್ತು ಮಾತೃ ಪ್ರಧಾನ ಕುಟುಂಬಗಳ ನಿರ್ವಹಣೆಯಲ್ಲಿ ತೊಡಗಿದ್ದರಿಂದ ಮತ್ತು ನಮ್ಮನ್ನೆಲ್ಲ ಸಾಕಿ ಸಲುಹುತ್ತಿರುವ ಭೂದೇವಿಯು ಮಾತೃ ದೇವತೆಯಾದದ್ದರಿಂದ ಅವಳ ಆರಾಧನೆಗೆ ಮೊದಲ ಪ್ರಾಶಸ್ತ್ಯ ನೀಡಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಗೊಂದಲಿಗರಿಗೆ ಶಕ್ತಿಯ ಪೂಜೆ ಬಹಳ ಇಷ್ಟವಾದುದಾಗಿದೆ ಹಾಗೂ ಅದನ್ನು ನಿಷ್ಠೆಯಿಂದ ಮಾಡುತ್ತಾರೆ. ಶಕ್ತಿಯ ಆರಾಧನೆ ಎಂದರೆ ಗೊಂದಲ ಪೂಜೆ ಎಂದರ್ಥ ಎಂದು ಗೊಂದಲಿಗರು ಅರ್ಥೈಸಿಕೊಂಡಿದ್ದಾರೆ. ಈ ಆಚರಣೆಯು ಇವರಲ್ಲಿ ಕಡ್ಡಾಯ. ದುರ್ಗಾಷ್ಟಮಿಯ ದಿನ ಗೊಂದಲಿಗರು ಅಂಬಾಭವಾನಿಯ ಗುಡಿಗಳಿಗೆ ಹೋಗಿ ಅಥವಾ ಅಂಬಾಭವಾನಿ ಮೂರ್ತಿಸ್ಥಾಪಿಸಿ ಗೊಂದಲ ಹಾಕುತ್ತಾರೆ. ಹುಬ್ಬಳ್ಳಿ, ಬೆಳಗಾವಿ, ದಾವಣಗೆರೆ ಬೆಂಗಳೂರು ಮುಂತಾದ ಪ್ರದೇಶಗಳಲ್ಲಿ ಅಂಬಾಭವಾನಿ ದೇವಸ್ಥಾನಗಳಿರುವುದು ಕಂಡುಬರುತ್ತದೆ.

## ೩.೬ ಪೂಜಾಕ್ರಮ

ಗೊಂದಲ ಪ್ರಜೆ ಮಾಡುವ ಸ್ಥಳದಲ್ಲಿ ಚೌಕಾಕಾರದ ಮಣೆಯನ್ನಿಟ್ಟು ಅದರ ಮೇಲೆ ಸ್ವಲ್ಪ ಅಕ್ಕಿಯನ್ನು ಹರಡಿ ನಾಲ್ಕು ಮೂಲೆಗೆ ಕಬ್ಬು ಅಥವಾ ಬಾಳೆ ಕಂಬ ನಿಲ್ಲಿಸಿ ತುದಿಗಳನ್ನು ಕಟ್ಟುತ್ತಾರೆ. ಅಕ್ಕಿಯ ಮೇಲೆ ಕಳಸ ಸ್ಥಾಪಿಸುತ್ತಾರೆ. ಒಂದು ತಂಬಿಗೆಯಲ್ಲಿ ನೀರು ಅಥವಾ ಅಕ್ಕಿ ಹಾಕಿ ಐದು ವಿಳ್ಯದೆಲೆ ಇಟ್ಟು, ಅದರ ನಡುವೆ ತೆಂಗಿನ ಕಾಯಿ ಇಟ್ಟಿರುತ್ತಾರೆ. ಇದಕ್ಕೆ ಕಳಸ ಎನ್ನುವರು. ಕಳಸಕ್ಕೆ ಆಭರಣಗಳನ್ನು ಹಾಕಿ ಸಿಂಗಾರ ಮಾಡಿ, ಕಾಯಿ ಮೇಲೆ ಕೆಂಪು ಅಥವಾ ಹಸಿರು ಜಂಪರ ಪೀಸನ್ನು ಹೊದಿಸಿರುತ್ತಾರೆ. ಈ ಕಳಸವನ್ನೇ ದೇವಿ ಎಂದು ತಿಳಿದು ಪ್ರತಿಷ್ಠಾಪನೆ ಮಾಡುತ್ತಾರೆ. ಇದು ಆರಾಧನೆಯನ್ನು ಮಾಡಿಸಿಕೊಳ್ಳುವ ಶಕ್ತಿಯಾಗಿರುತ್ತದೆ. ಗೊಂದಲದ ಸಮಯಕ್ಕೆ ಸರಿಯಾಗಿ ಕುಲಬಾಂಧವರಿಗೆಲ್ಲ ಬರಲು ತಿಳಿಸಿರುತ್ತಾರೆ. ಸಂಬಾಳ ಚೌಡಿಕೆ (ಚರ್ಮದ ತಂತಿಯಿಂದ ಕೂಡಿದ ವಾದ್ಯ) ತಾಳ, ಟಿಂಕ (ಏಕನಾದ) ನುಡಿಸಲು ಪ್ರಾರಂಭಿಸುತ್ತಾರೆ. ಎಲ್ಲ ಕಡೆಗೂ ಅರಿಷಿಣ ಕುಂಕುಮ ಹರಡಿರುತ್ತಾರೆ. ಪೂಜೆಗೆ ಬಂದವರಿಗೆಲ್ಲ ಹಣೆಗೆ ಅರಿಷಿಣ ಕುಂಕುಮ ಹಚ್ಚುತ್ತಾರೆ. ಜಮಖಂಡಿ ತಾಲೂಕಿನ ಹುನ್ನೂರ ಗ್ರಾಮದಲ್ಲಿ ಗೊಂದಲಕಾರ್ಯ ವೀಕ್ಷಣೆ ಮಾಡುವಾಗ ಅಲ್ಲಿಯ ಗೊಂದಲಿಗರು ಕಥೆಯನ್ನು ಹೇಳುವಾಗ ಆ ಮನೆಯ ಹೆಣ್ಣುಮಕ್ಕಳು ನಡು ನಡುವೆ ದೇವಿಗೆ ಮಂಗಳಾರುತಿ ಮಾಡಿ ಅರಿಷಿಣ ಹಚ್ಚುತ್ತಿದ್ದರು. ಪ್ರತಿಸಲವೂ ಭಂಡಾರವನ್ನು ಹಣೆ ತುಂಬ ಹಚ್ಚುತ್ತಾರೆ. ಪೂಜೆಗೆ ಬಂದ ಮುತ್ತೈದೆಯರು ನೆನಗಡಲೆಯನ್ನು ದೇವಿಗೆ ಉಡಿ ತುಂಬುತ್ತಾರೆ. ನಂತರ ಕಥೆ ಪ್ರಾರಂಭವಾಗುತ್ತದೆ. ಸಂಬಾಳ, ಚೌಡಿಕೆಯ ವಾದ್ಯಗಳಿಂದ "ರಮ್ ರಮ್" "ಚಳ್ ಚಳ್" ಧ್ವನಿಯನ್ನು ಹೊರಡಿಸುತ್ತಾ, ಕಥೆ ಪ್ರಾರಂಭಿಸುತ್ತಾರೆ. ವಾದ್ಯದ ಸದ್ದು ಏರಿದಂತೆ ಅವರ ಹಾವ ಭಾವಗಳು ಧ್ವನಿ ಏರಿಳಿತಗಳು ಹೆಚ್ಚಾಗುತ್ತವೆ. ಕಥೆಯ ಪಾತ್ರದಾರಿಗಳು ತಾವೇ ಎನ್ನುವ ರೀತಿಯಲ್ಲಿ ಭಾವೋದ್ವೇಗಕ್ಕೆ ಒಳಗಾಗುತ್ತಾರೆ. ತಾವೆಲ್ಲ ದೇವಿಯ ಒಕ್ಕಲು, ಅಂಬಾಭವಾನಿಯ ಒಕ್ಕಲು ಎಂದು ಹೇಳಿಕೊಳ್ಳುವರು. ವಾದ್ಯಗಾರರು ಹಾಡುತ್ತಿರುವಾಗ ಕೆಲವರಿಗೆ ಆವೇಶ ಬರತೊಡಗುತ್ತದೆ. ಆವೇಶದಲ್ಲಿ ದೇವಿಯ ಮುಂದೆ ಉಧೋss ಉಧೋss ಎನ್ನುತ್ತ ಕುಣಿತ ಸಾಗುತ್ತದೆ. ಈ ಕುಣಿತ ಬಿರುಸಿನಿಂದ ಸಾಗುತ್ತದೆ. ಕವಡಿಯ ಸರವನ್ನು ಕೊರಳಲ್ಲಿ ಹಾಕಿಕೊಂಡು, ಉರಿಯುವ ಕಕ್ಕಡ ಕೈಯಲ್ಲಿ ಹಿಡಿದುಕೊಂಡು, ಕಕ್ಕಡ ಉರಿಯನ್ನು ದೇಹಕ್ಕೆ ತಾಗಿಸಿಕೊಳ್ಳುತ್ತ ಉಧೋss ಎಂದು ಹೇಳುತ್ತ ಕುಣಿತ ನಿರಂತರವಾಗಿ ಸಾಗುತ್ತದೆ. ಕೊರಳಲ್ಲಿ ಧರಿಸಿರುವ ಕವಡಿ ಸರಗಳನ್ನು ಕುರಿತು ಗೊಂದಲಿಗರು ಹೀಗೆ ಹೇಳುತ್ತಾರೆ. "ಈ ಕವಡೆಗಳೆಂದರೆ ರಾಕ್ಷಸರ ರುಂಡಗಳು ಈ ದೇವಿ ರಾಕ್ಷಸರನ್ನೆಲ್ಲ ಸಂಹರಿಸಿ ಅವರ ರುಂಡಗಳನ್ನು ಹಾರಗಳನ್ನಾಗಿ ಮಾಡಿ ಕೊರಳಿಗೆ ಹಾಕಿಕೊಂಡಿದ್ದಾಳೆ" ಎಂದು ಹೇಳುತ್ತಾರೆ. ಈ ನಂಬಿಕೆಯಂತೆ ಕವಡಿಸರ ಧರಿಸಿದ ಪ್ರತಿಯೊಬ್ಬ ಭಕ್ತನು ತಾನು ದೇವಿಯೆಂಬ ಭಾವೋದ್ವೇಗಕ್ಕೆ ಒಳಗಾಗುತ್ತಾನೆ. ಕುಣಿತ ಜೋರಾದಂತೆ ಗೊಂದಲದಲ್ಲಿ ಭಾಗವಹಿಸಿದ ಜನರು ಕುಣಿದು

ಕುಪ್ಪಳಿಸಿ ಮೂರ್ಛೆ ಹೋಗಿ ಬೀಳುತ್ತಾರೆ ಮತ್ತೆ ಅವರಿಗೆ ಅರಿಷಿಣ (ಭಂಡಾರ) ಹಚ್ಚಿ ಎಬ್ಬಿಸುತ್ತಾರೆ. ಈ ಸಂದರ್ಭದಲ್ಲಿ ಅರಿಷಿಣ ಚೆತೋಹಾರಿಯಾಗಿ ಕೆಲಸ ಮಾಡುತ್ತದೆ ಎಂದು ಹೇಳುತ್ತಾರೆ. ಇಂತಹ ವಿಶೇಷವಾದ "ಗೊಂದಲ ಹಾಕುವ ಆಚರಣೆಯು ಕ್ರಿ.ಶ. ೬-೭ನೇ ಶತಮಾನದಲ್ಲಿಯೇ ಇತ್ತು ಎಂಬುದರ ಬಗ್ಗೆ ಮಾಹಿತಿ ದೊರೆಯುತ್ತದೆ. ಕದಂಬರು ಗೊಂದಲ ಹಾಕಿಸುತ್ತಿದ್ದರು ಎಂಬುದಕ್ಕೆ ಉಲ್ಲೇಖಗಳು ದೊರೆಯುತ್ತವೆ. ಕದಂಬ ಅರಸರು ತುಳಜಾಪುರದ ಅಂಬಾಭವಾನಿಯ ಭಕ್ತರಾಗಿದ್ದರು. ಆ ದೇವತೆಯ ಉತ್ಸವದಲ್ಲಿ ಅವರು ಗೊಂದಲ ಹಾಕಿಸುತ್ತಿದ್ದರೆಂದು ತಿಳಿದು ಬರುತ್ತದೆ. ಕದಂಬರು ಇಂದಿನ ಮಹಾರಾಷ್ಟ್ರ ಮತ್ತು ಕರ್ನಾಟಕ ರಾಜ್ಯವನ್ನು ಆಳಿದವರು. ಗೊಂದಲ ನೃತ್ಯದ ಬಗ್ಗೆ ಅನೇಕ ಉಲ್ಲೇಖಗಳು ನಮಗೆ ದೊರೆಯುತ್ತವೆ. ಗೊಂದಲ ಆಚರಣೆಯನ್ನು ಪೇಶ್ವೆಯವರು ಉನ್ನತ ಮಟ್ಟಕ್ಕೆರಿಸಿದರು."[೧೭]

ಡಾ. ನಿಂಗಣ್ಣ ಸಣ್ಣಕ್ಕಿ ಅವರು ಗೊಂದಲಿಗರು ನಡೆಸುವ ಪೂಜೆಯನ್ನು ಕುರಿತು ಹೀಗೆ ವಿವರಿಸಿದ್ದಾರೆ. "ಗೊಂದಲವನ್ನು ವಿಶೇಷವಾಗಿ ಮದುವೆ ಆಚರಣೆಯ ನಂತರ ನಡೆಸುವುದನ್ನು ಕಾಣುತ್ತೇವೆ. ಕೆಲವರು ಗೊಂದಲ ಪೂಜೆಯನ್ನು ನಡೆಸುವುದಕ್ಕಾಗಿ ಹರಕೆ ಹೊತ್ತಿರುತ್ತಾರೆ. ಅಂಥವರು ಮಂಗಳವಾರ, ಶುಕ್ರವಾರ ಗೊಂದಲ ಪೂಜೆಯನ್ನು ತಮ್ಮ ಮನೆಗಳಲ್ಲಿ ಏರ್ಪಡಿಸುತ್ತಾರೆ. ಒಂದು ಕಾಲದಲ್ಲಿ ಗೊಂದಲ ಪೂಜೆಯನ್ನು ಜಾತಿ ಮತ ಬೇಧಗಳಿಲ್ಲದೇ ಆಚರಿಸುತ್ತಿದ್ದರು. ಬ್ರಾಹ್ಮಣರು ಮದುವೆ ಮತ್ತು ಇತರ ಮಂಗಲ ಕಾರ್ಯಗಳಲ್ಲಿ ಹಾಕಿಸುತ್ತಿದ್ದರು. ಇಂದು ಅಪರೂಪವಾಗಿದೆ. ಕೆಲವರು ಉಪನಯನ ಸಂದರ್ಭದಲ್ಲಿ ಗೊಂದಲ ಪೂಜೆ ಮಾಡಿಸುತ್ತಿದ್ದರು, ಕರ್ನಾಟಕದಲ್ಲಿ ಗೊಂದಲ ಪೂಜೆಯನ್ನು ಬ್ರಾಹ್ಮಣರು, ಗೊಂದಲಿಗರು, ಮರಾಠರು, ಕ್ಷತ್ರೀಯರು ಪತ್ತಾರರು, ಸಿಂಪಿಗರು, ಬಡಿಗೇರರು, ಕಮ್ಮಾರರು, ಉಪ್ಪಾರರು, ಬೇಡರು, ಕುರುಬರು, ಲಿಂಗಾಯತರು, ರೂಢಿಸಿಕೊಂಡು ಬಂದಿದ್ದಾರೆ. ಗೊಂದಲ ಪೂಜೆಯ ಬಗ್ಗೆ ಈ ಮೇಲಿನ ಸಮುದಾಯಗಳು ವಿಶೇಷವಾದ ಭಯಭಕ್ತಿ ಇಟ್ಟುಕೊಂಡಿದ್ದವು. ಇಂದು ಅದು ಕಂಡುಬರುವುದಿಲ್ಲ. ಮಾತೃದೇವತೆಗಳ ಆರಾಧಕರಾದ ಗೊಂದಲಿಗರು ಶಕ್ತಿ ದೇವತೆಗಳ ಆರಾಧನೆಯಿಂದ ಪೂಜ್ಯ ಸ್ಥಾನವನ್ನು ಪಡೆಯಬಹುದು ಎಂಬ ಸತ್ಯವನ್ನು ತಮ್ಮ ಹಾಡು, ಕಥೆ ಕೀರ್ತನೆಗಳ ಮೂಲಕ ವಿವರಿಸುತ್ತಾರೆ. ಮೈಸೂರಿನ ಒಡೆಯರಿಗೆ ಚಾಮುಂಡಿದೇವಿ ಒಲಿದಿರುವ ಬಗ್ಗೆ, ಶಿವಾಜಿ ಮಹಾರಾಜನಿಗೆ ಅಂಬಾಭವಾನಿ ವರವನ್ನಿತ್ತಿರುವ ಬಗೆಗೆ ಪಂಡಿತರಿಗೆ ಸರಸ್ವತಿ ಒಲಿದಿರುವ ಬಗ್ಗೆ ದುಷ್ಟರನ್ನೆಲ್ಲ ದುರ್ಗಿ ಯಾವ ರೀತಿ ಸಂಹರಿಸಿದಳು ಎಂಬುದರ ಬಗ್ಗೆ ಜನರಿಗೆ ಆವೇಶಭರಿತರಾಗಿ ತಿಳಿಸುತ್ತಾರೆ. ಅಲ್ಲದೇ ದೇವಿಪುರಾಣ, ದೇವಿ ಸಹಸ್ರನಾಮಾವಳಿ, ದೇವಿಚರಿತ್ರೆ, ಯಲ್ಲಮ್ಮನ ಚರಿತ್ರೆ, ಬನಶಂಕರಿ ಚರಿತ್ರೆ, ಚಾಮುಂಡಿ ಚರಿತ್ರೆಗಳನ್ನು ಈ ಸಂದರ್ಭದಲ್ಲಿ ಭಾವಾವೇಶದಿಂದ ಹೇಳುವುದರ ಮೂಲಕ ಕೇಳುಗರಲ್ಲಿ ಶಕ್ತಿದೇವತೆಗಳ ಬಗ್ಗೆ ಭಯ ಭಕ್ತಿ ಹುಟ್ಟುವಂತೆ ಮಾಡುತ್ತಾರೆ. ಗೊಂದಲಿ ಪೂಜೆಯನ್ನು ತಮ್ಮ ತಮ್ಮ ಮನೆಯಲ್ಲಿ

ನೆರವೇರಿಸುವುದರಿಂದ ದುಷ್ಟಶಕ್ತಿಗಳು ಮಾಯವಾಗಿ ಸಕಲ ಸಿದ್ಧಿಗಳು ಲಭಿಸುತ್ತವೆ ಎಂದು ಗೊಂದಲಿಗರು ಈ ಸಂದರ್ಭದಲ್ಲಿ ಹೇಳುತ್ತಾರೆ. ಗೊಂದಲ ಹಾಕುವ ಸಂಪ್ರದಾಯದಲ್ಲಿ ನಾಲ್ಕು ಪ್ರಬೇಧಗಳಿರುವುದರ ಬಗ್ಗೆ ತಿಳಿಯುತ್ತದೆ. ಗುಡಿಯೊಳಗೆ ಹಾಕುವ ಗೊಂದಲಕ್ಕೆ ಗುಡಿಗೊಂದಲ ಎಂದು ಕರೆಯುವುದುಂಟು.

೧. **ಉತ್ತಮ ಗೊಂದಲ** : ಈ ಪ್ರಬೇಧ ಅತ್ಯಂತ ಪ್ರಾಚೀನವಾದದ್ದು ಈ ಗೊಂದಲ ಪೂಜೆಯಲ್ಲಿ ಅತೀ ದೊಡ್ಡದಾದ ಗೊಂದಳಿ ಮೇಳ ಇರುತ್ತದೆ. ಈ ತಂಡದಲ್ಲಿ ೩೨ ಜನರು ಭಾಗವಹಿಸುತ್ತಾರೆ ಎಂದು ಹೇಳುತ್ತಾರೆ.

೨. **ಮಧ್ಯಮ ಗೊಂದಲ** : ಈ ತಂಡದಲ್ಲಿ ಹದಿನಾರು ಜನರಿರುತ್ತಾರೆ.

೩. **ಸುಧಾರಣ ಗೊಂದಲ** : ಈ ತಂಡದಲ್ಲಿ ೮ ಜನರಿರುತ್ತಾರೆ.

೪. **ಅತೀಸಾಧಾರಣ ಗೊಂದಲ** : ಈ ತಂಡದಲ್ಲಿ ೩ ರಿಂದ ೫ ಜನರಿರುತ್ತಾರೆ.

೧೯೨೨ರಲ್ಲಿ R.E.Enthoven ಅವರು ಗೊಂದಲ ಪೂಜೆಯನ್ನು ಕುರಿತು ತಮ್ಮ ಗ್ರಂಥವಾದ The Tribes and castes of Bombay Vol. III ರಲ್ಲಿ ಈ ರೀತಿಯಾಗಿ ದಾಖಲು ಮಾಡಿದ್ದಾರೆ. "ಗೊಂದಲ ಹಾಕುವಿಕೆ ಗೊಂದಲಿಗರ ಬದುಕಿನ ಮುಖ್ಯ ಸಾಧನ ದೇವಿ ಭವಾನಿಯ ಹೆಸರಿನಲ್ಲಿ ಭಿಕ್ಷೆ ಬೇಡುವುದುಂಟು ಇವರು ಧಾರ್ಮಿಕ, ಐತಿಹಾಸಿಕ ಹಾಗೂ ಪ್ರೇಮವನ್ನು ಸೂಚಿಸುವ ಹಾಡುಗಳನ್ನು ಹಾಡುವುದುಂಟು. ಮರಾಠರು, ಸಿಂಪಿಗಳು, ಸೋನಾರರು, ದೇಶಸ್ಥ ಬ್ರಾಹ್ಮಣರು ಮತ್ತು ಇತರೆ ಕೆಲವು ಡೆಕ್ಕನ್ ಪ್ರದೇಶದ ಜಾತಿಯವರ ಉಪನಯನ ಹಾಗೂ ಮದುವೆಗಳ ಕಾರ್ಯಕ್ರಮಗಳಲ್ಲಿ ಗೊಂದಲವನ್ನು ಏರ್ಪಡಿಸುವುದು ಸಂಪ್ರದಾಯವಾಗಿ ಬೆಳೆದು ಬಂದಿದೆ. ಗೊಂದಲದ ಸಂಕ್ಷಿಪ್ತ ರೂಪ ಹೀಗಿದೆ ಎಂದು ತಿಳಿಸುತ್ತಾರೆ. ಹಜಾರದ ನಡುವೆ ಒಂದು ಮನೆಯ (ಹಸೆಯ) ಮೇಲೆ ಗೊಂದಲಿಗರ ಮುಖ್ಯಸ್ಥ ಒಂದು ರವಿಕೆಯ ಕಣವನ್ನು ಹರಡುತ್ತಾನೆ ಮತ್ತು ಅದರ ಮೇಲೆ ಕೆಲವು ಬೊಗಸೆ ಅಕ್ಕಿಯನ್ನು ಹರಡುತ್ತಾನೆ. ಆ ಅಕ್ಕಿಯ ಮೇಲೆ ಕುಂಬವನ್ನಿಟ್ಟು ಅದರ ಬಾಯಿಯನ್ನು ಮಾವಿನ ಎಲೆಗಳಿಂದ ಮುಚ್ಚುತ್ತಾರೆ. ಆ ಕುಂಭದ ಮೇಲೆ ಅಕ್ಕಿಯನ್ನು ತುಂಬಿದ ತಟ್ಟೆಯೊಂದನ್ನು ಇಟ್ಟು 'ತಾಕು' ಅಥವಾ ದೇವಿ ಭವಾನಿಯ ಪ್ರತಿಮೆಯನ್ನು ಇಡುತ್ತಾರೆ. ಆ ಮೇಲೆ ಮನೆಯ ಯಜಮಾನ ಹಣ್ಣು ಮತ್ತು ಹಣವನ್ನು ನಿವೇದಿಸಿ, ಕುಂಕುಮ, ಅರಿಶಿಣ, ಗಂಧ ಹೂವುಗಳಿಂದ ಪೂಜಿಸಿ ನಮಸ್ಕರಿಸುತ್ತಾನೆ. ಈ ಮುಖ್ಯಸ್ಥ ಗಂಧ ಅರಿಶಿಣ ಹೂಗಳಿಂದ ದೀವಟಿಗೆಯನ್ನು ಪೂಜಿಸಿ ಅದಕ್ಕೆ ನಮಸ್ಕರಿಸಿ 'ಓ ದೇವತೆ ತುಳಜಾಪುರದ ಭವಾನಿ ಗೊಂದಲ ನೃತ್ಯವನ್ನು ವೀಕ್ಷಿಸಲು ಬಾ' ಎಂದು ಹೇಳುತ್ತಾನೆ. ಇದೇ ರೀತಿಯಾಗಿ ಅವನು ಅನೇಕ ದೇವತೆಗಳನ್ನು ತಮ್ಮ ಕಾರ್ಯಕ್ರಮವನ್ನು ವೀಕ್ಷಿಸಲು ಬರಬೇಕೆಂದು ಪುನರಾವರ್ತಿಸುತ್ತಾನೆ. ಆ ಮೇಲೆ ಅವನು ಹಿಂದೆ ಮುಂದೆ ಚಲಿಸುತ್ತಾ ಮಲ್ಲಾರೆ ರಾಮಾ ಅಥವಾ ಇನ್ಯಾವುದಾದರೂ

ನಾಯಕನ ಸಾಧನೆಗಳನ್ನು ಕುರಿತು ಒಂದು ಹಾಡು ಹಾಡುತ್ತಾನೆ. ಅವನ ಸಹಾಯಕರು ಅವರವರ ವಾದ್ಯಗಳನ್ನು ನುಡಿಸುತ್ತಿರುತ್ತಾರೆ. ಹಿಂದೆ ಮುಂದೆ ಚಲಿಸುತ್ತಿದ್ದ ಮುಖ್ಯಸ್ಥ ಕೆಲವು ನಿಮಿಷಗಳ ನಂತರ ನಿಲ್ಲುತ್ತಾನೆ ಮತ್ತು ಆ ಹಾಡಿನ ಅರ್ಥವನ್ನು ಪ್ರೇಕ್ಷಕರಿಗೆ ವಿವರಿಸುತ್ತಾನೆ. ಹೀಗೆ ಬೆಳಗಿನ ತನಕ ಅವನು ತನ್ನ ಕಥೆಯನ್ನು ಮುಂದುವರೆಸುತ್ತಾನೆ. ಕಥಾನಕ ಮುಗಿದ ಮೇಲೆ ಮುಖ್ಯ ಗೊಂದಲ, ಪ್ರೇಕ್ಷಕರು ಇಷ್ಟಪಟ್ಟರೆ ಶಿವಾಜಿ ಮತ್ತಿತರ ಮರಾಠಿ ನಾಯಕರ ಸಾಧನೆ ಕುರಿತಾದ ಹಾಡುಗಳನ್ನು ಹಾಡುತ್ತಾನೆ. ಆತ ಬುದ್ಧಿವಂತನಾಗಿದ್ದರೆ ತನ್ನಿಂದಲೋ ಅಥವಾ ಇತರ ಗೊಂದಲಿಗರಿಂದಲೋ ರಚಿತವಾದ ಲಾವಣಿಯನ್ನು ಹಾಡುತ್ತಾ ಪ್ರೇಕ್ಷಕರನ್ನು ಸಂತೋಷಗೊಳಿಸುತ್ತಾನೆ. ಬೆಳತನಕ ಕಥೆ ಸರಾಗವಾಗಿ ಸಾಗುತ್ತದೆ. ಬೆಳಿಗ್ಗೆ ಕರ್ಪೂರದಿಂದ ದೇವತೆಗೆ ಆರತಿ ಮಾಡಲಾಗುತ್ತದೆ. ಪವಿತ್ರ ದೀವಟಿಗೆಯನ್ನು ಹಾಲಿನಲ್ಲಿ ಅಥವಾ ಅಪ್ಪಟ ಬೆಣ್ಣೆಯಲ್ಲಿ ಎದ್ದಿ ನಂದಿಸಲಾಗುತ್ತದೆ. ಅಲ್ಲಿಗೆ ಕಾರ್ಯಕ್ರಮ ಮುಕ್ತಾಯವಾಗುತ್ತದೆ. ಗೊಂದಲಿಗರ ಪೂಜೆಯನ್ನು ನೆರವೇರಿಸುವ ಕ್ರಮದಲ್ಲಿ ಪ್ರಾದೇಶಿಕವಾಗಿ ಭಿನ್ನತೆ ಕಂಡು ಬರುತ್ತದೆ. ಉತ್ತರ ಕರ್ನಾಟಕದ ಬೆಳಗಾವಿ, ವಿಜಯಪುರ, ಧಾರವಾಡ, ಅಥಣಿ, ಜಮಖಂಡಿ ಮುಂತಾದ ಪ್ರದೇಶಗಳಲ್ಲಿ ಗೊಂದಲ ಹಾಕುವ ಪದ್ಧತಿ ಬೇರೆ ಬೇರೆಯಾಗಿರುವುದು ಕಂಡು ಬರುತ್ತದೆ. ಶಿವಮೊಗ್ಗ, ದಕ್ಷಿಣ ಕನ್ನಡ, ಉಡುಪಿ, ಬೆಂಗಳೂರು ಈ ಪ್ರದೇಶಗಳಲ್ಲಿಯೂ ಭಿನ್ನತೆ ಇರುವುದು ಕಂಡುಬರುತ್ತದೆ ಎಂದು ಗೊಂದಲಿಗರು ಅಭಿಪ್ರಾಯ ಪಡುತ್ತಾರೆ. ಇಂದು ನಡೆಯುವ ಗೊಂದಲ ಪೂಜೆಯ ಆಧುನಿಕತೆ, ವೈಜ್ಞಾನಿಕತೆ, ನಾಗರಿಕತೆಯ ಪ್ರಭಾವ ಬೀರಿದೆ. ಕೆಲ ಪ್ರದೇಶಗಳಲ್ಲಿ ಬೆಳತನಕ ನಡೆಯುತ್ತಿದ್ದ ಗೊಂದಲ ಪೂಜೆ ಈಗ ೪-೫ ಗಂಟೆಗಳಲ್ಲಿ ಮುಗಿಸುವ ಪ್ರವೃತ್ತಿಯನ್ನು ಹಾಕಿಕೊಂಡಿದ್ದಾರೆ. ಗೊಂದಲಿಗರು ಕಾಪಾಡಿಕೊಂಡು ಬಂದ ಹಲವಾರು ಅನುಭವ ಪದಗಳು, ಅವರ ಕಥನ ಶೈಲಿಯ ವಿಶಿಷ್ಟತೆಯನ್ನು ತಿಳಿಸುತ್ತವೆ. ರೀತಿ-ನೀತಿ, ತತ್ವ, ತಾತ್ಪರತೆ, ಪ್ರಾಮಾಣಿಕತೆ, ಸಂಸ್ಕೃತಿ, ಸಂಪ್ರದಾಯ ಮುಂತಾದ ವಿಷಯಗಳನ್ನು ಒಳಗೊಂಡ ಅವರ ಕಥನ ಶೈಲಿಯು ಮಹತ್ವವನ್ನು ಪಡೆದಿವೆ. ಗದ್ಯ ಪದ್ಯ ಮಿಶ್ರಿತ ಇವರ ಕಥನ ಶೈಲಿಯಲ್ಲಿ ಕಥೆಯ ಸಂಪ್ರದಾಯದ ಜೊತೆಗೆ ನಡು ನಡುವೆ ವಿಶಿಷ್ಟವಾದ ಹಲವಾರು ಜನಪರ, ತಾತ್ವಿಕ, ಸಾಹಿತ್ಯ, ವಚನ ಸಾಹಿತ್ಯ, ಅನುಭಾವ ಸಾಹಿತ್ಯದ ವಿವಿಧ ಮಜಲುಗಳನ್ನು ನೋಡಬಹುದಾಗಿದೆ.

ಮಾನವ ತನ್ನ ಬದುಕಿನಲ್ಲಿ ಕಂಡು ಕೇಳಿದ ಅನುಭವಿಸಿದ ಕಲ್ಪಿಸಿಕೊಂಡ ಅನೇಕ ವಿಚಾರಗಳನ್ನು ಇನ್ನೊಬ್ಬರಿಗೆ ಮನಮುಟ್ಟುವಂತೆ ಜನಪದ ಸಾಹಿತ್ಯ ತಿಳಿಸಿಕೊಡುತ್ತದೆ. ಇದಕ್ಕೆ ಗೊಂದಲಿಗರ ಕಥನ ಸಾಹಿತ್ಯವೂ ಹೊರತಾಗಿಲ್ಲ ಎಂದು ಹೇಳಬಹುದು. ಪಾರಂಪರಿಕವಾಗಿ ಬೆಳೆಸಿಕೊಂಡು ಬಂದ ಸಂಪ್ರದಾಯಬದ್ಧ ಗೊಂದಲಿಗರ ಕಥನ ಶೈಲಿಯನ್ನು ಗೊಂದಲಿಗರ ಕಥನ ಸಾಹಿತ್ಯ ಎಂದೇ ಹೇಳಬಹುದು. ಹಾಡುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡವರನ್ನು ವೃತ್ತಿಗಾಯಕರು ಎಂದು ಗುರುತಿಸಲಾಗುತ್ತದೆ. ನಿರ್ದಿಷ್ಟ ದೈವವೊಂದಕ್ಕೆ ತಮ್ಮನ್ನು ತಾವೇ

ಅರ್ಪಿಸಿಕೊಂಡು ಆ ದೈವದ ನಿಷ್ಠಾವಂತ ಭಕ್ತರಾಗಿ ಆ ದೈವಕ್ಕೆ ಸಾಪ್ರದಾಯಿಕವಾಗಿ ನಡೆದು ಕೊಳ್ಳುವುದು ಸಾಮಾನ್ಯ ರೀತಿ. ತಮ್ಮ ತಮ್ಮ ದೈವಗಳನ್ನು ಕುರಿತು ಆ ದೈವಗಳ ಮಹಾತ್ಮೆ ಪವಾಡಗಳನ್ನು ಕುರಿತು ಹಾಡುತ್ತ ಬದುಕುವುದು ವಿಶಿಷ್ಟ ಕಲೆಯಾಗಿದೆ. ತಮ್ಮ ಆರಾಧ್ಯ ದೈವವೇ ಅವರ ಹಾಡುವಿಕೆಯ ಪ್ರಧಾನ ವಸ್ತು. ದೈವದ ಹುಟ್ಟಿನಿಂದ ಅವರ ಕಥಾ ಮೂಲವಸ್ತು ಹೊರಡುವುದುಂಟು. ಹುಟ್ಟು, ಬಾಲ್ಯ, ಯೌವನ ವೃದ್ಧಾಪ್ಯಗಳಲ್ಲದೇ ದೈವದ ಜೀವಿತಾವಧಿಯಲ್ಲಿ ಘಟಿಸುವ ಪವಾಡಗಳು, ಮಹಿಮೆಗಳು ಹಲವಾರು ದೀರ್ಘವರ್ಣನೆಯಲ್ಲಿ ಮೂಡಿಬಂದು ಕಾವ್ಯ ಅತ್ಯಂತ ವಿಸ್ತರಿಸಿ ಮಹಾಕಾವ್ಯ ಪಟ್ಟಕ್ಕೂ ಅರ್ಹವಾಗುವುದುಂಟು.

ಗೊಂದಲಿಗರ ಕಥನ ಕ್ರಿಯೆ ಬೆಳತನಕ ನಡೆಯುವಂತಹದ್ದು ಒಂದು ಕಥೆಯ ವಿಷಯವನ್ನೆತ್ತಿಕೊಂಡು ಅದನ್ನು ಹಿಗ್ಗಿಸುವ ಮತ್ತು ಕುಗ್ಗಿಸುವ ಸಾಮರ್ಥ್ಯವನ್ನು ಗೊಂದಲಿಗರು ಹೊಂದಿದ್ದಾರೆ. ಜೊತೆಗೆ ಹಲವಾರು ಉಪಕತೆಗಳನ್ನು ಸಂದರ್ಭಕ್ಕೆ ತಕ್ಕಂತೆ ಹೆಣೆದು ಪ್ರೇಕ್ಷಕರ ಮನಸೆಳೆಯುತ್ತಾರೆ. ಗೊಂದಲಿಗರು ಕಥೆಯನ್ನು ನಿರೂಪಿಸುತ್ತಾ ಹೋಗುವಾಗ ವಿಶಿಷ್ಟ ಶೈಲಿ ಎದ್ದು ಕಾಣುತ್ತದೆ. ಅವರ ಹಾವ-ಭಾವಗಳು, ಕುಣಿತಗಳು, ಸಂಭಾಷಣೆಯ ಸ್ವರೂಪವನ್ನು ಪಡೆದು ಅಲ್ಲಿ ಅದು ನಾಟಕೀಯತೆಯ ರೂಪ ಪಡೆಯುತ್ತದೆ. ತಮ್ಮ ಕಥಾಸಾಹಿತ್ಯದ ಜೊತೆಗೆ ಹಲವಾರು ಪೌರಾಣಿಕ, ಉಪಕತೆಗಳನ್ನು, ನೀತಿಪದಗಳನ್ನು, ಜನಪದರ ಹಾಡುಗಳನ್ನು ಹಾಗೂ ಶಿವಶರಣರ ವಚನಗಳನ್ನು ಹೇಳುತ್ತಾರೆ. ಅಷ್ಟೇ ಅಲ್ಲದೆ ಶರೀಫರ ತತ್ವಪದಗಳು ದಾಸರ ಪದ್ಯಗಳನ್ನು ಕೆಲವು ಸಾರಿ ಸರ್ವಜ್ಞನ ತ್ರಿಪದಿಗಳನ್ನು ಇವರು ಬಳಸುತ್ತಾರೆ.

ಗದ್ಯ ಪದ್ಯ ಮಿಶ್ರಿತ ಇವರ ಕಥನ ಶೈಲಿ ವಿಶಿಷ್ಟವಾದದ್ದು. ಇದೊಂದು ಜನಪದ ಚಂಪು ಎಂದು ನಿಂಗಣ್ಣ ಸಣ್ಣಕ್ಕಿಯವರು ಕರೆದಿದ್ದಾರೆ. ಇದೇ ಶೈಲಿಯನ್ನು ಹೊಂದಿದ ಕರಪಾಲದ ಕಥೆಗಳು ಸಹ ಶುದ್ಧ ಜನಪದ ಕಥೆಗಳಾಗಿವೆ. ನೃತ್ಯ, ಸಂಗೀತ, ಅದು ಸಾಹಿತ್ಯಗಳ ಸಾಮರಸ್ಯವನ್ನು ಕರಪಾಲ ಮೇಳದಲ್ಲಿ ಕಾಣುತ್ತೇವೆ. ಗೊಂದಲಿಗರ ಕಥಾಶೈಲಿ ತಮ್ಮ ಬದುಕಿನ ಹಿನ್ನೆಲೆಯಲ್ಲಿಯೇ ತಾವೇ ಕಥೆಗಳನ್ನು ಸೃಷ್ಟಿಸುವ ಸೃಷ್ಟಿಕರ್ತರಾಗಿದ್ದಾರೆ. ಕಥೆ ಎಂಬುದು ಪ್ರಾಚೀನ ಪರಂಪರೆಯ ಮಾತಾಗಿದ್ದರೂ ಅದೇ ಕಥೆಗಳಲ್ಲಿ ವೈವಿದ್ಯತೆಯನ್ನು ಹುಡುಕುತ್ತಾ ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ಉಳಿಸುವಲ್ಲಿ ಈ ವೃತ್ತಿಗಾಯಕರು ಪ್ರಮುಖರಾಗಿದ್ದಾರೆ. ಇಂತಹ ವೃತ್ತಿಗಾಯಕರನ್ನು ಡಾ. ಜಿ. ಶಂ. ಪರಮಶಿವಯ್ಯನವರು ಪ್ರಧಾನವಾಗಿ ಎರಡು ವರ್ಗಗಳಲ್ಲಿ ವಿಂಗಡಿಸಿದ್ದಾರೆ. "ಧಾರ್ಮಿಕ ವೃತ್ತಿಗಾಯಕರು, ಲೌಕಿಕ ವೃತ್ತಿಗಾಯಕರು. ಧಾರ್ಮಿಕ ವೃತ್ತಿಗಾಯಕರು: ದೇವರಗುಡ್ಡರು, ನೀಲಗಾರರು, ಚೌಡಿಕೆಯವರು, ಗೊರವರು, ಗಣಿಯವರು. ಲೌಕಿಕ ವೃತ್ತಿಗಾಯಕರು: ಕರಪಾಲದವರು, ದೊಂಬಿದಾಸರು, ತೆಲಗು ಜಂಗದವರು, ಹೆಳವರು, ಜೋಗಿಗಳು, ತಂಬೂರಿಯವರು, ಲೌಕಿಕ ಸಂಪ್ರದಾಯದ ಗೊಂದಲಿಗರು."[೧೮]

ಧಾರ್ಮಿಕ ವೃತ್ತಿಗಾಯಕರು ದೈವದ ಆರಾಧಕರಾಗಿದ್ದಾರೆ. ದೈವದ ನಂಬಿಕೆ ಅವರ ಬದುಕಿನಲ್ಲಿ ಹಾಸುಹೊಕ್ಕಾಗಿರುತ್ತದೆ. ಆ ದೇವರ ಹೆಸರಿನಲ್ಲಿ ದೀಕ್ಷೆ ಪಡೆದು ಮನೆ ಮನೆಗೆ ಹೋಗಿ ಗೊಂದಲ ಹಾಕುವ ಕಾರ್ಯ ಮಾಡುತ್ತಾರೆ. ಗೊಂದಲಿಗರು ಧಾರ್ಮಿಕ ವೃತ್ತಿಯೊಂದಿಗೆ ಜೀವನೋಪಾಯಕ್ಕೆ ಹಲವಾರು ಲೌಕಿಕ ಕಾವ್ಯಗಳನ್ನು ಹಾಡುತ್ತಾರೆ. ಅರೆ ಧಾರ್ಮಿಕ ವೃತ್ತಿಗಾಯಕರಾಗಿರುವ ಗೊಂದಲಿಗರು ಕಾವ್ಯರೂಪ ಕಥೆಗಳನ್ನು ಹಾಡದೆ ಸಂಭಾಷಣೆಯ ರೂಪದಲ್ಲಿ ಅದನ್ನು ನಾಟಕೀಯವಾಗಿ ಹೇಳುತ್ತಾರೆ.

**೩.೭ ದೀಕ್ಷಾ ವಿಧಾನ :**

“ಗೊಂದಲಿಗರ ಮದುವೆಯ ಸಂದರ್ಭದಲ್ಲಿ ವರನ ಕೊರಳಿನಲ್ಲಿ ಐದು ಮಂದಿ ವಿವಾಹಿತರು ಕವಡೆಯ ಒಂದು ಮಾಲೆಯನ್ನು ಹಾಕುತ್ತಾರೆ. ಇದನ್ನೇ ಗೊಂದಳೀ ಆಗುವ ವಿಧಿ ಎಂದು ತಿಳಿಯಲಾಗುತ್ತದೆ.”ಎಂದು ಭಾರತೀಯ ಸಂಸ್ಕೃತ ಕೋಶ್ Vol–೩ ದಲ್ಲಿ ತಿಳಿಸಲಾಗಿದೆ.

"ಮರಾಠಿ ಕುಣಬಿ ಮತ್ತು ಗೊಂದಲಿಗರ ಆಚರಣೆ ಸಂಪ್ರದಾಯಗಳಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ. ಆದರೆ ಮದುವೆ ಸಂದರ್ಭದಲ್ಲಿ ದೇವಕರಲ್ಲಿರುವಂತೆ, ಇವರು ಕೂಡ ಮುಖ್ಯ ಸ್ಥಳದಲ್ಲಿ ಸಂಬಾಳ, ಚೌಡಿಕೆ, ಕವಡೆಸರ, ಚವಕ, ಜೋಳಿಗೆ ಇವುಗಳನ್ನು ಬಿಗಿದು ಕಟ್ಟುತ್ತಾರೆ. ಪವಿತ್ರ ಕವಡೆಸರವನ್ನು ಧರಿಸಿದ ಹುಡುಗರನ್ನು ಅರ್ಪಿಸುವ ಕಾರ್ಯಕ್ರಮ ಈ ಸಮುದಾಯದ ಒಂದು ವೈಶಿಷ್ಟ್ಯ. ಇಂಥ ಕಾರ್ಯಕ್ರಮಗಳನ್ನು ಹುಡುಗ ಹತ್ತು ಅಥವಾ ಹನ್ನೆರಡು ವರ್ಷದವನಿದ್ದಾಗ ಆಚರಿಸಲ್ಪಡುತ್ತವೆ. ಒಂದು ಶುಭ ದಿನದಲ್ಲಿ ನಂಟರು ಮತ್ತು ಜಾತಿಯವರನ್ನು ಊಟಕ್ಕೆ ಆಹ್ವಾನಿಸಿ. ಅವರೆಲ್ಲ ಬಂದ ಮೇಲೆ ಗೊಂದಲಿಗರ ಮುಖ್ಯಸ್ಥ ಅಥವಾ ಜಾತಿಯ ಹಿರಿಯನೊಬ್ಬ ಒಂದು ಮಣೆಯ ಮೇಲೆ ಅಕ್ಕಿಯನ್ನು ಹರಡುತ್ತಾನೆ. ನೀರು ತುಂಬಿದ ಗಡಿಗೆಯೊಂದನ್ನು ಅದರ ಮೇಲೆ ಇಡುತ್ತಾನೆ. ಅದರೊಳಗೆ ಒಂದು ಕಾಲು ರೂಪಾಯಿ ಅಥವಾ ಬೆಳ್ಳಿಯ ನಾಣ್ಯಗಳನ್ನು ಹಾಕುವಂತೆ ಹುಡುಗನ ತಂದೆಗೆ ಹೇಳುತ್ತಾನೆ. ಆಮೇಲೆ ಮಾವಿನ ಎಲೆ ಹಾಗೂ ತೆಂಗಿನ ಕಾಯಿಯಿಂದ ಅದರ ಬಾಯಿಯನ್ನು ಮುಚ್ಚುತ್ತಾನೆ. ಇದು ಅಂಬಾಭವಾನಿಯನ್ನು ಪ್ರತಿನಿಧಿಸುವ ಗಡಿಗೆ ಅಥವಾ ಕಳಸವಾಗಿದೆ. ಅದಕ್ಕೆ ಹೂವು ಗಂಧದ ಕಡ್ಡಿ ಕರ್ಪೂರಗಳಿಂದ ಪೂಜೆ ಸಲ್ಲಿಸಲು ಹುಡುಗನಿಗೆ ಆ ಹಿರಿಯ ಆದೇಶಿಸುತ್ತಾನೆ. ಆ ಮೇಲೆ ಮುಖ್ಯ ಗೊಂದಲಿಗನಾದ ಆ ಹಿರಿಯ ಕವಡೆಯ ಹಾರವನ್ನು ಹುಡುಗನ ಕತ್ತಿಗೆ ಹಾಕಿ ಭವಾನಿಯ ಹೆಸರನ್ನು ಮತ್ತಿತರ ಮಾಂತ್ರಿಕ ಶಬ್ಧಗಳನ್ನು ಹುಡುಗನ ಕಿವಿಯಲ್ಲಿ ಅನೇಕ ಸಲ ಉಚ್ಚರಿಸುತ್ತಾನೆ. ಅತಿಥಿಗಳಿಗೆ ಊಟ ಹಾಕುತ್ತಾರೆ. ಆ ಮೇಲೆ ಕಾರ್ಯಕ್ರಮ ಮುಕ್ತಾಯ ಗೊಳ್ಳುತ್ತವೆ.”[೧೯] ಪೇಶ್ವೆಯರ ಆಡಳಿತ ಕಾಲದಲ್ಲಿ ಗೊಂದಲಿ ಆರಾಧನೆ ಮಾಡಲು ದೀಕ್ಷೆಯನ್ನು ತೆಗೆದುಕೊಳ್ಳಲು ಯಾವ ಸಮುದಾಯದವರಾದರು ಆಗಬಹುದಿತ್ತು. ಶಿವಾಜಿ ಕಾಲಕ್ಕೆ ಗೊಂದಲ

ನೃತ್ಯ ತೀವ್ರಗತಿಯಲ್ಲಿ ಪ್ರಚಾರಹೊಂದಿತು. ಗೊಂದಲದ ಆರಾಧನೆ ಮಾಡುವವರ ಜಾತಿ ಪ್ರಸ್ತಾಪ ಮಾಡದೇ ಸಾಮೂಹಿಕವಾಗಿ ಎಲ್ಲರನ್ನು ಗೊಂದಲಿಗರೆಂದು ಗುರುತಿಸಲ್ಪಡಲಾಗುತ್ತಿತ್ತು. ಈ ವೃತ್ತಿಯು ಗೊಂದಲದ ದೀಕ್ಷೆ ಪಡೆದವರ ಬದುಕಿಗೆ, ಜೀವನೋಪಾಯ ಮಾರ್ಗವಾಗಿ ಪರಿಣಮಿಸಿತು. ಕಾಲಾನಂತರ ಹೆಚ್ಚಿನ ಸಂಖ್ಯೆಯಲ್ಲಿ ಗೊಂದಲ ಆರಾಧನೆಯ ದೀಕ್ಷೆ ಪಡೆಯುತ್ತ ಬಂದದ್ದರಿಂದ ಅದು ಒಂದು ಜಾತಿಯಾಗಿ ಗೊಂದಲಿಗರು ಎಂಬ ಮುದ್ರೆ ಪಡೆಯಿತು ಮತ್ತು ಹೊಸಬರಿಗೆ ದೀಕ್ಷೆ ನೀಡುವ ಸಲುವಾಗಿ ಪ್ರತಿಭಟನೆಗಳು ಪ್ರಾರಂಭವಾದವು. ಇತ್ತಿತ್ತಲಾಗಿ ಗೊಂದಲದ ಆರಾಧನೆ ಮಾಡುವವರ ಸಂಖ್ಯೆ ಕಡಿಮೆಯಾಗುತ್ತಿದ್ದು ದೀಕ್ಷೆಗೆ ನಿರ್ಧಿಷ್ಟ ಮತ್ತು ಕಡ್ಡಾಯವಾದ ನಿಯಮಗಳು ಇಲ್ಲದಂತಾಗಿವೆ. ಎಂದು ಗೊಂದಲಿಗರ ಹಿರಿಯರು ಅಭಿಪ್ರಾಯ ಪಡುತ್ತಾರೆ.



ಗೊಂದಲಿಗರ ಕುಟುಂಬದಲ್ಲಿ ಗೊಂದಲ ಪೂಜೆಯ ಹಕ್ಕು ತಂದೆಯಿಂದ ಮಗನಿಗೆ ಬರುತ್ತಿತ್ತು. ಗೊಂದಲಿಗರು ತಮ್ಮ ಮಕ್ಕಳಿಗೆ ಆ ಕಲೆ ಹಾಗೂ ಕಥನದ ವೈಶಿಷ್ಟ್ಯತೆಯನ್ನು ತಿಳಿಸಿ ಕೊಡುತ್ತಿದ್ದರು. ಇಂದು ಗೊಂದಲ ಹಾಕಿಸುವವರ ಸಂಖ್ಯೆ ತೀರ ವಿರಳವಾಗುತ್ತಿರು ವುದರಿಂದ ಗೊಂದಲ ಪೂಜೆಯ ನಿರ್ವಹಣೆಯ ಮೂಲಕ ಜೀವನ ಸಾಗಿಸುವುದು ದುಸ್ತರವಾಗುತ್ತಿರುವುದರಿಂದ ಅನೇಕ ಗೊಂದಲಿಗರು ಪಾರಂಪರಿಕ ಕಲಾ ಸೇವೆಯನ್ನು ಬಿಟ್ಟು ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಳ್ಳುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತಿದೆ. ಇತ್ತಿತ್ತಲಾಗಿ ಬಹುಪಾಲು ಗೊಂದಲಿಗರು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ನೆಲೆ ಕಂಡುಕೊಳ್ಳುತ್ತಿದ್ದಾರೆ. ಸಣ್ಣ ಪುಟ್ಟ ವ್ಯಾಪಾರ ಮತ್ತು ನೌಕರಿಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಬೆರಳೆಣಿಕೆಯ ಜನ ಕೃಷಿ ಕೆಲಸದಲ್ಲಿ ನಿರತರಾಗಿದ್ದಾರೆ. ಇವರಲ್ಲಿ ಭಿಕ್ಷಾಟನೆ ಇನ್ನೂ ಜೀವಂತವಾಗಿರುವುದು ಕಂಡುಬರುತ್ತದೆ. ಗೊಂದಲ ಹಾಕುವುದನ್ನೇ ತಮ್ಮ ಪೂರ್ಣ ಪ್ರಮಾಣದ ವೃತ್ತಿಯಾಗಿಸಿಕೊಂಡವರು ಕಂಡು ಬರುವುದಿಲ್ಲ.

**೩.೮ ಗೊಂದಲ ಹಾಕುವ ಸಂದರ್ಭದ ವೇಷಭೂಷಣಗಳು :**

ಗೊಂದಲ ಹಾಕುವ ಸಮಯದಲ್ಲಿ ಗೊಂದಲಿಗರು ದೈನಂದಿನ ಬದುಕಿನಲ್ಲಿ ಕಂಡು ಬರುವ ಮುಂಡಾಸು ಬಳಸುತ್ತಾರೆ. ಈ ಮುಂಡಾಸಿಗೆ ಬಳಸುವ ಬಟ್ಟೆ ಐವತ್ತರಿಂದ ಅರವತ್ತು ಅಡಿ ಉದ್ದವಿರುತ್ತದೆ. ಇದರ ಜೊತೆಗೆ ಮೊಣಕಾಲಿನವರೆಗೆ ಇರುವ ಉದ್ದನೆಯ ಅಂಗಿ ತೊಟ್ಟಿರುತ್ತಾರೆ. ಇದು ಯಾವಾಗಲೂ ಜಿಡ್ಡಿನಿಂದ ಕಪ್ಪಾಗಿರುತ್ತದೆ. ಕೊರಳಲ್ಲಿ ದಿಕ್ಷಾ ಸಮಯದಲ್ಲಿ ಹಾಕಿದ ಕವಡೆ ಸರ ಧರಿಸಿರುತ್ತಾರೆ. ಜೊತೆಗೆ ಸುಂದರವಾಗಿ ಕಾಣಲು ಇತರೆ ಸರಗಳನ್ನು ಹಾಕಿಕೊಂಡಿರುತ್ತಾರೆ. ಅವರು ಕವಡೆಯಿಂದ ಮಾಡಿದ ನಡುಪಟ್ಟಿಯನ್ನು ಹಾಗು ಕವಡೆಯ ಸರವನ್ನು ತಯಾರಿಸಿ ಆ ಪಟ್ಟಿಯ ನಡುಭಾಗದಲ್ಲಿ ದೇವಿ ವಿಗ್ರಹದ ಉಬ್ಬು ಕೆತ್ತನೆಯಿರುವ ಓತ್ತಾಳೆಯ ಅಥವಾ ಬೆಳ್ಳಿಯ ಪದಕ ಎದೆಯ ಮೇಲೆ ಬರುವಂತೆ ಧರಿಸಿರುತ್ತಾರೆ, ಕಾಲಿಗೆ

ಗೆಜ್ಜೆ ಕಟ್ಟಿರುತ್ತಾರೆ. ಇಂದು ನೆರವೇರಿಸುತ್ತಿರುವ ಗೊಂದಲ ಕಾರ್ಯಕ್ರಮದಲ್ಲಿ ಸಾಮಾನ್ಯವಾಗಿ ದೈನಂದಿನ ವೇಷ ಭೂಷಣಗಳಲ್ಲಿ ನಡೆದು ಹೋಗುತ್ತದೆ. ಕೇವಲ ವಿಶೇಷ ಸಂದರ್ಭದಲ್ಲಿ ಮಾತ್ರ ಈ ಸಾಂಪ್ರದಾಯಕ ವೇಷದಲ್ಲಿ ಕಾಣಿಸಿಕೊಳ್ಳುತ್ತಾರೆ."[೨೦] ನಾನು ಕೈಕೊಂಡ ಕ್ಷೇತ್ರ ಕಾರ್ಯದಲ್ಲಿ ಗೊಂದಲಿಗರು ಬಹಳ ಕಡೆ ತಮ್ಮ ದೈನಂದಿನ ಉಡುಪುಗಳೊಂದಿಗೆ ಆಗಮಿಸುತ್ತಿದ್ದರು. ಹೆಗಲ ಮೇಲೆ ಕೆಂಪುವಸ್ತ್ರ ಅಥವಾ ಕೆಂಪು ಶಲ್ಯ ಇರುತ್ತಿತ್ತು. ಆ ಕೆಂಪು ವಸ್ತ್ರವನ್ನು ನಡುಪಟ್ಟಿಯಾಗಿ ಕಟ್ಟಿಕೊಳ್ಳುವುದನ್ನು ಗಮನಿಸಿದ್ದೇನೆ. ಈ ವೇಷಭೂಷಣಗಳನ್ನು ಸಾಮಾನ್ಯವಾಗಿ ಉತ್ತರ ಕರ್ನಾಟಕದ ಭಾಗದಲ್ಲಿ ಕಾಣುತ್ತೇವೆ. ಮಹಾರಾಷ್ಟ್ರದಲ್ಲಿ ನಡೆಸುವ ಗೊಂದಳ ಸಮಯದಲ್ಲಿಯ ವೇಷಭೂಷಣಗಳು ವಿಶೇಷವಾಗಿರುತ್ತವೆ. ಜರಿಜರಿಯಾದ ನಿಲುವಂಗಿ, ಜುಬ್ಬಾ ಹಾಗೂ ಜರತಾರಿ ಪೇಟ ಅದಕ್ಕೆ ಮುತ್ತು ಪೋಣಿಸಿರುತ್ತಾರೆ. ಕೊರಳಲ್ಲಿ ಮುತ್ತಿನ ಸರಗಳು ಮತ್ತು ಅಂಬಾಭವಾನಿ ಅಥವಾ ತುಳಜಾಭವಾನಿ ಮೂರ್ತಿಯ ಒಂದು ಅಗಲವಾದ ಪದಕವಿರುತ್ತದೆ.

## ೩.೯ ಗೊಂದಲ ನೃತ್ಯ ಮತ್ತು ಸಂಗೀತ

ಪ್ರಕೃತಿಯ ನಡುವೆ ಬದುಕುವುದು ಒಂದು ಕಲೆ, ಬದುಕು ವೈವಿಧ್ಯಮಯ ಮತ್ತು ಕಲಾತ್ಮಕವಾಗಿರುತ್ತದೆ ಮತ್ತು ಸಂದರ್ಭಕ್ಕೆ ತಕ್ಕಂತೆ ಬದುಕಬೇಕಾಗುತ್ತದೆ. ಬದುಕನ್ನು ಒಂದು ಚೌಕಟ್ಟಿನಲ್ಲಿಟ್ಟು ನೋಡಲು ಸಾಧ್ಯವಿಲ್ಲ. ಆದಿ ಮಾನವ ಪ್ರಕೃತಿಯ ಮಧ್ಯೆ ವಾಸಿಸುತ್ತಿದ್ದನು. ಪ್ರಕೃತಿಯ ನಾದಲಯಗಳಿಗೆ, ಕೋಪವಿಕೋಪಗಳಿಗೆ ಆದಿ ಮಾನವನು ಭಯ, ಸಂತೋಷ, ನೋವು-ನಲಿವುಗಳಿಂದ ಸ್ಪಂದಿಸಿದನು. ಮುಂದೆ ಪ್ರಕೃತಿಯನ್ನು ಒಲಿಸಿಕೊಳ್ಳಲು ಸೂರ್ಯ, ಚಂದ್ರ, ವಾಯು, ಜಲ ಮುಂತಾದ ನಿಸರ್ಗ ದೇವತೆಗಳನ್ನು ಆರಾಧಿಸತೊಡಗಿದ ಈ ಆರಾಧನೆಯ ಪರಿಣಾಮದಿಂದ ಆದಿ ಮಾನವರು ಭಾವಪರವಶರಾಗಿ ಪ್ರಾರ್ಥನೆಯೊಂದಿಗೆ ಅಲ್ಲಿ ಕುಣಿತವು ಪ್ರಾರಂಭವಾಯಿತು. ಮುಂದೆ ಈ ಆರಾಧನೆಯು ಜೀವನ ಕಲೆಯಾಗಿ ಮಾರ್ಪಾಡಾಯಿತು. ಇಂತಹ ಕಲೆ, ಸಂಗೀತ, ಸಾಹಿತ್ಯ ಹಾಗೂ ಆಯಾ ಪ್ರದೇಶದ ಸಂಸ್ಕೃತಿ ಯನ್ನು ಜನರ ಮನೋಭಾವನೆಗಳನ್ನು ಕುಣಿತದಲ್ಲಿ ರೂಪಿಸತೊಡಗಿತು. ಜನಪದ ಕಲಾವಿದರು ಯಾವ ಪೂರ್ವನಿಯೋಜಿತ ನಿರ್ಧಾರವಿಲ್ಲದೆ ಸಮಯ ಸ್ಫೂರ್ತಿಯಿಂದ ನಿಸರ್ಗದೊಡನೆ ಹಾಡಿ ಕುಣಿದು ಕುಪ್ಪಳಿಸಿದರು. ನಿಸರ್ಗದೊಂದಿಗೆ ಬೆಸೆದುಕೊಂಡೇ ಬರುವ ಇವರ ಅನುಭವ ಒಂದು ಶ್ರೀಮಂತ ಕಲೆಯಾಯಿತು. ಇಂತಹ ಜನಪದ ಕಲಾವಿದರಾದ ಗೊಂದಲಿಗರು ಹಾಡು, ಕುಣಿತ, ಕಥೆಗಳನ್ನೇ ತಮ್ಮ ಬದುಕಿನ ಒಂದು ಭಾಗವಾಗಿ ಮಾಡಿಕೊಂಡಿದ್ದಾರೆ. ಈ ವೃತ್ತಿ-ಗಾಯಕರು ತಮ್ಮ ಸಂಸ್ಕೃತಿಯನ್ನು ಹಾಡು, ಕಥೆಗಳಲ್ಲಿ ಬಿಂಬಿಸುತ್ತಾ ಬಂದರು. ಗೊಂದಲಿಗರು ಜೀವನ ನಿರ್ವಹಣೆಗಾಗಿ ಕಥೆ ಹೇಳುತ್ತಾ, ಹಾಡಿನೊಂದಿಗೆ ನೃತ್ಯವನ್ನು ಮಾಡುತ್ತಾ ಬಂದ ಕಥೋಪಜೀವಿಗಳಾಗಿದ್ದಾರೆ. ಇವರು ವಾದ್ಯಗಳೆರಡನ್ನು ನುಡಿಸುತ್ತಾ ಹಾಡುತ್ತಲೇ ಲಘುಹಾಸ್ಯ ಮಾಡುತ್ತಾರೆ. ಹಾಡಿನ ಲಯವು ಪರಿಮಿತದೊಂದಿಗೆ ಸಾಗುತ್ತದೆ. ದೇವಿ ಆರಾಧನೆಯ

ಮಹಿಮೆಗಳನ್ನು ಹೇಳುತ್ತ ತಾಳ ಲಯ ಬದ್ಧತೆಯೊಂದಿಗೆ ಅವರ ಸೂಕ್ಷ್ಮವಾಗಿ ಕುಣಿತವು ನಡೆಯುತ್ತಿರುತ್ತದೆ. ಏಕೆಂದರೆ ತನ್ನ ನಡುವಿಗೆ ಸಮಾಳ ಹಾಗೂ ಕೈತಾಳಗಳನ್ನು ಬಿಗಿದು ಕೊಂಡಿರುವುದರಿಂದ ಹೆಚ್ಚಿನ ಹಾವಭಾವ ತೋರುವುದಿಲ್ಲ ಹಾಗೂ ದೊಡ್ಡ ಹೆಜ್ಜೆ ಹಾಕುವುದಿಲ್ಲ. ಆದರೆ ಗೊಂದಲ ಹಾಕುವಾಗ ಮಾತ್ರ ಉರಿವ ಕಕ್ಕಡ ರೂಪದ ಪತ್ತಾ ಹಿಡಿದು ವಿಶಿಷ್ಟವಾಗಿ ಭಾವಾವೇಶದಿಂದ ನರ್ತಿಸುತ್ತಾರೆ. ಆಗ ಆತನ ಸಮಾಳ ಹಿಮ್ಮೇಳಿಗನೊಬ್ಬನಿಗೆ ವರ್ಗವಾಗುತ್ತದೆ. ಪತ್ತಾ (ದೀವಟಿಗೆ) ಹಿಡಿದು ದೇವಿಯ ಎದುರಿಗೆ ಕುಣಿಯುವ ಗೊಂದಲಿಗರು ತಮ್ಮ ಎದೆಯ ಎರಡೂ ಬದಿಗೆ ದೀವಟಿಗೆಯನ್ನು ಮುಟ್ಟಿಸಿಕೊಂಡು ಇತರರಿಗೆ ವರ್ಗಾಯಿಸುತ್ತಾರೆ. ಕೆಲವು ಸಾರಿ ಗೊಂದಲ ಹಾಕಿಸಿದ ಮನೆಯವರೂ ಸಹ ಈ ಪತ್ತಾವನ್ನು ಹಿಡಿದು ಕುಣಿಯುತ್ತಾರೆ. ವಾದ್ಯಗಳ ನಾದ ಹೆಚ್ಚಿದಂತೆ ಇವರ ಕುಣಿತ ಹೆಚ್ಚಾಗುತ್ತದೆ. ಕುಣಿದು ಕುಣಿದು ಭಕ್ತಿ ಪರವಶರಾಗಿ 'ಜೈಜಗದಂಬಾ' 'ಜೈಮಾತೆ' 'ಉಧೋss ಉಧೋss' ಎನ್ನುವ ಪದಗಳನ್ನು ಉದ್ಘರಿಸುತ್ತಾರೆ. ಹೀಗೆ ಕುಣಿಯುವಾಗ ವಾದ್ಯಗಳ ಅಬ್ಬರದಲ್ಲಿ ಭಾವಾವೇಶಕ್ಕೆ ಒಳಗಾಗಿ ಅವರು ಅಲೌಕಿಕ ಶಕ್ತಿಯೊಡನೆ ಲೀನ ಹೊಂದಿದವರಂತೆ ವರ್ತಿಸುತ್ತಾರೆ. ಕೆಲವು ಸಾರಿ ಕುಣಿದು ಮೂರ್ಚೆ ಹೋಗುವ ಸಂದರ್ಭಗಳು ಕಂಡುಬರುತ್ತವೆ.

ದೇವಿಯ ಆರಾಧನೆಯ ಅಂಗವಾಗಿ ಧಾರ್ಮಿಕ ಆಚರಣೆಗಳೊಂದಿಗೆ ಹುಟ್ಟಿಕೊಂಡ ಈ ಕುಣಿತ ಆರಾಧನಾ ಕಲೆಯಾಯಿತು. ದೈವಿಭಕ್ತಿ, ಸಂಪ್ರದಾಯ, ಆಚರಣೆ, ಕಷ್ಟ ಪರಿಹಾರ ಮುಂತಾದ ವಿಷಯವೆಲ್ಲವು ಈ ಗೊಂದಲ ಕುಣಿತದ ಮೂಲವಸ್ತುವಾಯಿತು. ಧಾರ್ಮಿಕ ಮತ್ತು ಅರೆಲೌಕಿಕ ವೃತ್ತಿಗಾಯಕರಾದ ಇವರು ಮನೊರಂಜನೆಯ ಜೊತೆಗೆ ದೈವಿ ಪುತ್ರರಾಗಿ ತಮ್ಮ ಕಾಯಕ ಮಾಡುತ್ತಾ ಬಂದಿದ್ದಾರೆ. ಸಂಬಾಳ, ತಂತುಣಿ, ತಾಳಗಳ ವಾದ್ಯಮೇಳದ ಒಡಲಿನಿಂದ ಚಿಮ್ಮುವ ವಿಭಿನ್ನವಾದ ಲಯ, ಲಯದ ಗತಿಗೆ ಅನುಗುಣವಾಗಿ ಹೊಮ್ಮುವ ನಾದ, ನಾದ-ಲಯಗಳ ನಿರ್ಧಿಷ್ಟ ಗತ್ತಿನಲ್ಲಿ ಅವರು ಮಾಡುವ ಕುಣಿತ ಎರಕಗೊಂಡು ಒಂದು ಅದ್ಭುತ ಲೋಕವನ್ನೇ ಸೃಷ್ಟಿಸುವ ಸಾಮರ್ಥ್ಯ ಅವರಲ್ಲಿದೆ. ಗೊಂದಲಿಗರು ತಾವು ನಿಂತ ಸ್ಥಳವನ್ನೇ ರಂಗಸ್ಥಳವನ್ನಾಗಿ ಮಾಡುತ್ತಾರೆ.

"ನಾವು ಯಾವುದನ್ನು ನಾಟಕವೆಂದು ಕರೆಯುತ್ತೇವೋ ಆ ಕಲಾಪ್ರಕಾರಕ್ಕೆ ನಿರ್ಧಿಷ್ಟ ಅಳತೆಯ ಪ್ರತ್ಯೇಕ ರಂಗಸ್ಥಳವಿರುತ್ತದೆ. ದೃಶ್ಯಗಳಿಗೆ ತಕ್ಕಂತೆ ಅದರದೇ ಆದ ಪರಿಕರಗಳಿರುತ್ತವೆ. ಇಕ್ಕೆಲಗಳಲ್ಲಿ ಪಾಶ್ವಭಾಗ, ನೇಪತ್ಯ ರಂಗದ್ವಾರಗಳಿರುತ್ತವೆ. ಪ್ರಯೋಗಕ್ಕೆ ಸೂಕ್ಷ್ಮತೆ ಕೊಡುವ ತಾಂತ್ರಿಕ ಬೆಳಕಿನ ವಿನ್ಯಾಸವಿರುತ್ತದೆ. ಪಾತ್ರವರ್ಗದಲ್ಲಿ ನಟ-ನಟಿಯರಿರುತ್ತಾರೆ. ಅವರಿಗೆ ಕಣ್ಸೆಳೆಯುವ ಯಥೋಚಿತ ವರ್ಣಮಯ ವೇಷಭೂಷಣಗಳಿರುತ್ತವೆ. ಯಕ್ಷಗಾನ, ದೊಡ್ಡಾಟ, ಸಣ್ಣಾಟಗಳಲ್ಲಿ ಎತ್ತರದ ಹೊರ ಒಳ ಅಟ್ಟಗಳಿರುತ್ತವೆ. ಬಣ್ಣದ ಚೌಕಗಳಿರುತ್ತವೆ. ಪ್ರತ್ಯೇಕವಾಗಿ ಭಾಗವತ ಹಿಮ್ಮೇಳ, ವಾದ್ಯವೃಂದ, ಹನುಮನಾಯಕ ಅಥವಾ ಸಾರಥಿಗಳಿರುತ್ತಾರೆ.

ಆದರೆ ಇಂಥಹ ಯಾವ ಅವಕಾಶವೇ ಇರದ ರಂಗಭೂಮಿ ಗೊಂದಲಿಗರದ್ದು. ಅವರಿಗೆ ಪ್ರತ್ಯೇಕ ನಿರ್ಮಿತ ವಿಶಾಲ ರಂಗಸ್ಥಳವೇ ಇಲ್ಲ. ಗೊಂಲಿಗರ ಪ್ರದರ್ಶನಕ್ಕೆ ೫-೬ ಅಡಿಗಳ ಅಳತೆಯ ಸ್ಥಳ ಇದ್ದರೆ ಸಾಕು. ಮನೆಯ ಮುಂದಿನ ಜಗಲಿ, ಇಲ್ಲವೇ ಚಪ್ಪರ, ಮಾರಮ್ಮ, ಊರಮ್ಮ, ದುರಗಮ್ಮಗಳಂಥ ಓಣಿಯ ದೇವತೆಯ ಗುಡಿಗಳ ಮುಂಭಾಗಗಳಾದರೂ ಸರಿ. ಗೊಂದಲಕಾರ್ಯವಾದರೆ ಭಕ್ತರ ಮನೆಯ ಒಳ ಜಗುಲಿ ಅಥವಾ ಪಡಸಾಲೆಯೇ ತಕ್ಕ ಸ್ಥಾನ. ಬೆನ್ನ ಹಿಂದೆ ಒಂದು ಸಾದಾ ಪುಟ್ಟ ತೆರೆಯೂ ಇರದ ಸರಳತೆ ಗೊಂದಲಿಗರ ಆಟದ್ದು. ಕಣ್ಣಿಗೆ ಕಾಣುವ ಹಿನ್ನೆಲೆ ಮನ್ನೆಲೆಗಳೆರಡನ್ನು ನೋಡುಗರಾದ ತಾವೇ ಸಂದರ್ಭಕ್ಕೆ ತಕ್ಕಂತೆ ವಿಭಾವವಾಗಿ ಕಲ್ಪಿತಗೊಳಿಸಿ- ಕೊಳ್ಳಬೇಕಾಗುತ್ತದೆ. ಏಳಂತಸ್ತಿನ ಅರಮನೆ, ಬಣ್ಣದ ರಾಜಕಛೇರಿ ಚಾವಡಿ, ಪಗಡೋ, ಸಾಲಬಜಾರ, ಚಂದ್ರಬೀದಿ, ಅಗಸಿಬಾಗಿಲು, ವನಾಂತರ, ಘೋರಾರಣ್ಯ, ಝೋಪಡಿ, ಗವಿ, ಗುಡ್ಡ, ಸರೋವರ ಬಾವಿ, ಕೆರೆ, ಕುದುರೆ ಪ್ರಾಣಿ ಪಕ್ಷಿ ಇತ್ಯಾದಿಗಳೆಲ್ಲವನ್ನು ಅವರು ತಮ್ಮ ಆಟಕ ನಿರೂಪಣೆ, ಸಂಭಾಷಣಾ ಕೌಶಲ್ಯಾದಿಗಳಿಂದಲೇ ಕಾಲ್ಪನಿಕ ವಿಭಾವದ ಮೂಲಕ ನಮ್ಮ ಕಂಗಣಿಸುತ್ತಾರೆ."[೨೧] ವಿಭಾವದಲ್ಲಿ ಅನುಭಾವವನ್ನು ತುಂಬುವ ಕಾರ್ಯ ಮಾಡುತ್ತಾರೆ. ಈ ರೀತಿಯಾಗಿ ಅವರ ಕಥಾಸಾರವು ನಾಟಕೀಯತೆಯ ರೂಪವನ್ನು ಪಡೆಯುತ್ತ ಕಥೆಯ ಪಾತ್ರಗಳೇ ತಾವಾಗಿ ಅಲ್ಲಿ ಮೂಡಿಬರುತ್ತವೆ.

**೩.೧೦ ವಾದ್ಯಗಳು :**

ಪುರಾತನ ಕಾಲದಿಂದಲೂ ಮಾನವ ತನ್ನ ಭಾವನೆಗಳನ್ನು ಹಾಡಿನ ರೂಪದಲ್ಲಿ ಪದ್ಯರಚನೆ ಹೇಳಲು ಪ್ರಾರಂಭಿಸಿದ. ಕಾಲಾನಂತರ ಭಾವಕ್ಕೆ ತಕ್ಕಂತೆ ರಾಗ, ರಾಗಕ್ಕೆ ತಕ್ಕಂತೆ ತಾಳ ಲಯಗಳನ್ನು ಸೃಷ್ಟಿಸುತ್ತಾ ಆ ತಾಳ ಲಯಗಳಿಗೆ ವಾದ್ಯಗಳನ್ನು ಸೃಷ್ಟಿಸಿದ. ಮಧುರವಾದ ನಾದ ಹೊಮ್ಮುವ ಹಾಗೂ ತಮ್ಮ ಪದಗಳಿಗೆ, ಹಾಡಿಗೆ ಹೆಚ್ಚು ಮೆರುಗನ್ನು ಕೊಡಲು ಈ ವಾದ್ಯಗಳನ್ನು ಬಳಸತೊಡಗಿದ. ಈ ತಾಳ ಲಯ ವಾದನ ಗತಿಗಳು ಅವನ ಹೃದಯದ ಬಡಿತಗಳೊಂದಿಗೆ ಜೋಡುಗೊಂಡಿವೆಯೆಂದು ಹೇಳುತ್ತಾರೆ. ಸಂಗೀತ ಮತ್ತು ನೃತ್ಯ ಮೇಳಗಳಲ್ಲಿ ವಾದ್ಯಗಳು ಬಹುಮುಖ್ಯವಾದ ಪಾತ್ರ ವಹಿಸುತ್ತವೆ. ಪ್ರಕೃತಿಯ ನಿಕಟ ಸಂಪರ್ಕದಲ್ಲಿ ಮನುಷ್ಯ ನಿಸರ್ಗ ಸಂಪನ್ಮೂಲಗಳನ್ನೇ ಬಳಸಿಕೊಂಡು ನಾದವನ್ನು ಸೃಷ್ಟಿಸಲು ಪ್ರಯತ್ನ ಮಾಡಿದರು. ಈ ಪ್ರಯತ್ನ ಪ್ರಯೋಗಶೀಲತೆಯ ಕಾರಣದಿಂದ ವಾದ್ಯಗಳು ರೂಪಗೊಳ್ಳಲು ಕಾರಣವಾಯಿತು. ಹೀಗೆ ರೂಪಗೊಂಡ ಸರಳ ವಾದ್ಯಗಳೇ ಜನಪದ ವಾದ್ಯಗಳಾಗಿವೆ. ವಾದ್ಯಗಳ ನಿಕಟ ಸಂಪರ್ಕವನ್ನು ದೇವಾನು ದೇವತೆಗಳಿಗೂ ಹೋಲಿಸಬಹುದು. ಕೃಷ್ಣನಿಗೆ ಕೊಳಲು, ಶಿವನಿಗೆ ಢಮರು, ನಾರದನಿಗೆ ತಂಬೂರಿ, ಸರಸ್ವತಿಗೆ ವೀಣೆ, ಹೀಗೆ ವಾದ್ಯಗಳ ಬಳಕೆಯ ವಿಶೇಷತೆಯನ್ನು ಕಾಣುತ್ತೇವೆ.

ಜನಪದ ವಾದ್ಯಗಳನ್ನು ಶಿಷ್ಟವಾದ್ಯಗಳಂತೆ ನಾಲ್ಕು ವರ್ಗಗಳನ್ನಾಗಿ ವಿದ್ವಾಂಸರು

ವಿಂಗಡಿಸುತ್ತಾರೆ. ತಂತಿವಾದ್ಯಗಳು, ಊದುವ ವಾದ್ಯಗಳು, ಚರ್ಮವಾದ್ಯಗಳು ಮತ್ತು ತಾಳವಾದ್ಯಗಳು. ಗೊಂದಲಿಗರ ಮೇಳಗಳಲ್ಲಿ ಮುಖ್ಯವಾಗಿ ಸಂಬಾಳ, ತುಂತುಣಿ ಹಾಗೂ ಕಂಚಿನ ತಾಳಗಳನ್ನು ಹಿನ್ನೆಲೆ ವಾದ್ಯಗಳನ್ನಾಗಿ ಬಳಸುತ್ತಾರೆ. ಗೀತಕ್ಕೆ ಕಳೆ ಕೊಡುವುದು ವಾದ್ಯಗಳ ಕೆಲಸ. ಕಂಸಾಳೆಯವರಿಗೆ ತಾಳಗಳು, ಕಿನ್ನರಿಜೋಗಿ ಆಟಕ್ಕೆ ಕಿನ್ನರಿ ಹಾಗೂ ತಂಬೂರಿಯನ್ನು ನೀಲಗಾರರು ತಮ್ಮ ಕಥನಕ್ಕೆ ಬಳಸಿಕೊಳ್ಳುತ್ತಾರೆ. ಗೊರವರು ಢಮರು, ಸಣ್ಣಾಟಕ್ಕೆ ಡಪ್ಪು, ಜೋಗಿಗಳ ಆಟಕ್ಕೆ ಚೌಡಿಕೆ ಬಳಸುತ್ತಾರೆ. ಗೊಂದಲಿಗರ ಆಟದಲ್ಲಿ ಸಂಬಾಳ ಮತ್ತು ತುಂತುಣಿಗಳಿಗೆ ಆದ್ಯತೆ 'ಸಾವಿರ ವರ್ಷಗಳ ಹಿಂದೆ ಗೊಂದಲಿಗರಲ್ಲಿ ವೀಣೆ, ಮೃದಂಗ, ಚಂಡಕ, ತ್ರಿವಳಿ, ಮುರಜಗಳಂಥ ವಿಶಿಷ್ಟ ವಾದ್ಯಗಳ ಬಳಕೆ ಇತ್ತು ಎಂದು ಮತ್ತು ಮೇಳದ ಕಲಾವಿದರ ಸಂಖ್ಯೆ ಮೂವತ್ತರಷ್ಟು ಇತ್ತು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.' ಇಲ್ಲಿವರೆಗೂ ಗೊಂದಲಿಗರ ವಾದ್ಯಗಳಲ್ಲಿ .ಯಾವುದೇ ಬದಲಾವಣೆಯಾಗಿಲ್ಲ ಎಂಬುದು ತಿಳಿದು ಬರುತ್ತದೆ.

**೧ ತುಂತುಣಿ (ಚೌಡಿಕೆ) :**

ಚೌಡಿಕೆಯ ವಾದ್ಯಕ್ಕೆ ಒಂದು ಇತಿಹಾಸವಿದೆ. ಇದರಲ್ಲಿ ಎರಡು ವಿಧಗಳಿವೆ. ೧) ಶೃತಿ ಚೌಡಿಕೆ ೨) ಬಾರ್ಕಿ ಚೌಡಿಕೆ. ಗೊಂದಲಿಗರಲ್ಲಿ ಬಳಕೆಯಾಗುವುದು ಶೃತಿ ಚೌಡಿಕೆ ಮಾತ್ರ. ಆದರೆ ಬಾರ್ಕಿ ಚೌಡಿಕೆಯನ್ನು ಚೌಡಿಕೆಯವರು ಮಾತ್ರ ಬಾರಿಸುತ್ತಾರೆ. ಚೌಡಿಕೆ ಎಂಬ ವಾದ್ಯ ಹೇಗೆ ಸೃಷ್ಟಿಯಾಯಿತು ಎಂಬುದಕ್ಕೆ ಗೊಂದಲಿಗರಲ್ಲಿ ಒಂದು ಕಥೆ ಇದೆ. 'ಪರಶುರಾಮನು ಬೇಟಾಸುರ ಎಂಬ ದೈತ್ಯನನ್ನು ಸಂಹರಿಸಿ ಅವನ ತಲೆಯನ್ನು ಕತ್ತರಿಸಿದನು. ಆಗ ಆ ದೈತ್ಯನ ಶಿರದ ಬ್ರಹ್ಮರಂಧ್ರದಿಂದ ತಂತಿಯೊಂದು ಹೊರ ಬಿದ್ದಿತು. ಆ ದೈತ್ಯನ ದೇಹವನ್ನೇ ಚೌಡಿಕೆಯನ್ನಾಗಿ ಮಾಡಿ, ಆ ತಂತುವನ್ನು ಮಿಡಿದು 'ತಿಂತ್ಯಣ ತಿಂತ್ಯಣ' ಎಂಬ ಧ್ವನಿಯನ್ನು ಮಾಡುತ್ತ ಮಾತೃವಿನ ಹತ್ತಿರ ಬಂದು ನಮಸ್ಕರಿಸುತ್ತಾನೆ. ಎಲ್ಲಮ್ಮನ ಅಣ್ಣ ಕಾರ್ತವೀರ್ಯಾರ್ಜುನ ಜಮದಗ್ನಿಯ ಆಶ್ರಮದಲ್ಲಿದ್ದ ಕಾಮಧೇನುವನ್ನು ಬಯಸಿ ಅದಕ್ಕಾಗಿ ಋಷಿಯನ್ನು ಸಂಹರಿಸಿ ಕಾಮಧೇನುವನ್ನು ಒಯ್ಯುತ್ತಾನೆ. ಪತಿಯನ್ನು ಕಳೆದುಕೊಂಡ ತಾಯಿಯ ದುಃಖ ನಿವಾರಿಸಲು ಪರಶುರಾಮ ತನ್ನ ಗಂಡು ಕೊಡಲಿಯಿಂದ ಕಾರ್ತವೀರ್ಯನ ಶಿರವನ್ನು ಚಂಡಾಡಿದನು. ಎಂಬ ಐತಿಹ್ಯವಿದೆ. ಗೊಂದಲಿಗರಿಗೆ ಚೌಡಿಕೆಯು ಒಂದು ಪ್ರಮುಖ ಪವಿತ್ರವಾದ ಮಾತೃವಾದ್ಯವಾಗಿದೆ. ಈ ವಾದ್ಯ ಅವರ ಹಾಡು ಕಥೆ, ರಾಗಾಲಾಪ, ರೂಪಕಗಳಲ್ಲಿ ನಾಂದಿ ಪದ್ಯದಿಂದ ಮಂಗಳ ಗೀತೆಯವರೆಗೆ ತನ್ನ ನಾದಸ್ವರದಿಂದ ವಾತಾವರಣವನ್ನು ಕಂಪುಗೊಳಿಸುತ್ತದೆ. ಹಿಮ್ಮೇಳಗಾರ ಬಗಲ ಬಂಧನಲ್ಲಿರುವ ಈ ವಾದ್ಯ ಅವನ 'ಆಹಾ' 'ಹೌದು' ಎಂಬ ಉದ್ಗಾರಗಳಿಗೆ ವಿಶ್ರಾಂತಿ ನೀಡುತ್ತದೆ ಮತ್ತು ತನ್ನ 'ಟ್ವಂಯಂ' ಎಂಬ ನಾದಮಿಡಿತದಿಂದ ಕಥೆಗಾರನಿಗೆ ಸಹಕರಿಸುವುದುಂಟು. ಅವನು ಹೇಳುವ ಪದಗಳು ಬೇಸರಾಗದಂತೆ ಚೌಡಿಕೆಯು ನಿರಂತರವಾದ ಹೊಸ ನಾದ

ನವೀಕರಣವಿರುವಂತೆ ನೋಡಿಕೊಳ್ಳುತ್ತದೆ. ಹೀಗೆ ಅದು ಕೇವಲ ಶ್ರುತಿ ಪರಿಮಿತ ವಾದ್ಯವಾಗದೆ ಏಕತಾರಿ ವಾದ್ಯದಂತೆ ಹಾಡಿನ ಲಯವನ್ನು ಅನುಸರಿಸಿ ತಾಳದ ಗತಿಯನ್ನು ಕೊಡುವ ಟೇಕಾ ವಾದ್ಯದಂತೆ ವರ್ತಿಸುತ್ತದೆ.

ತೆಂಗಿನಮರದ ಒಂದು ಅಡಿ ಉದ್ದದಷ್ಟು ಕಾಂಡವನ್ನು ತೆಗೆದುಕೊಂಡು ಅದರ ತಿರುಳು ತೆಗೆದು, ಕೊಳಗದಂತೆ ಮಾಡಿಕೊಂಡು, ಒಂದು ಕಡೆಗೆ ಮೇಕೆಯ ಚರ್ಮದಿಂದ ಮುಚ್ಚಿ ಚರ್ಮದ ಮಧ್ಯೆ ಒಂದು ರಂಧ್ರದ ಮೂಲಕ ಆಡಿನ ಕರುಳಿನಿಂದ ತಯಾರಿಸಿ ಹುರಿಗೊಳಿಸಿ ಬೀವು ಮಾಡಿಕೊಂಡು ಬಿಗಿಯಾಗಿ ಕಟ್ಟಿಕೊಂಡು ಈ ವಾದ್ಯ ತಯಾರಿಸುತ್ತಾರೆ. ಒಂದು ಕಡ್ಡಿಯಿಂದ ಕರುಳಿನ ದಾರವನ್ನು ನುಡಿಸಿದಾಗ ಟಿಂಗ್, ಟಿಂಗ್ ಎಂಬ ನಾದ ಹೊರ ಹೊಮ್ಮುತ್ತದೆ. ಈ ವಾದ್ಯದಲ್ಲಿ ತಂತಿಯ ಬದಲಾಗಿ ಆಡಿನ ಕರುಳನ್ನು ಮೊದಲಿನಿಂದಲೂ ಉಳಿಸಿಕೊಂಡು ಬಳಸುತ್ತಿರುವುದರಿಂದ ಇದು ತಂತಿವಾದ್ಯಗಳಲ್ಲಿ ವಿಶಿಷ್ಟ ವಾದ್ಯವಾಗಿದೆ. ಇದಕ್ಕೆ ತುಂತುಣಿ ಎಂತಲೂ ಕರೆಯುತ್ತಾರೆ. ಡಾ. ವೀರೇಶ ಬಡಿಗೇರವರು ಎಲ್ಲಮ್ಮನ ಸಂಪ್ರದಾಯದ ಜೋಗತೇರು ಬಳಸುವ ಚೌಡಿಕೆಗಿಂತ ಗೊಂದಲಿಗರು ಬಳಸುವ ಚೌಡಿಕೆ ಗಾತ್ರದಲ್ಲಿ ಚಿಕ್ಕದಾಗಿದ್ದು ರಚನೆಯಲ್ಲಿ ಭಿನ್ನವಾಗಿದೆ ಎಂದು ತಿಳಿಸುತ್ತಾರೆ. ಆಕಾರದಲ್ಲಿ ಒಂದೆ ರೀತಿ ಇದ್ದ ಕಾರಣದಿಂದ ಬಹಳಷ್ಟು ಜನ ವಿದ್ವಾಂಸರು ಗೊಂದಲಿಗರು ಬಳಸುವ ತುಂತುಣಿಯನ್ನು ಚೌಡಿಕೆ ಎಂದೇ ಕರೆದಿದ್ದಾರೆ. ಕ್ಯಾತನಹಳ್ಳಿ ರಾಮಣ್ಣ ತಮ್ಮ ಗೊಂದಲಿಗರು ಒಂದು ಅಧ್ಯಯನ ಎಂಬ ಕೃತಿಯಲ್ಲಿ ತುಂತುಣಿ ವಾದ್ಯವನ್ನು ಚೌಡಿಕೆ ಎಂದು ಕರೆದಿದ್ದಾರೆ. ಬಳ್ಳಾರಿ ಮತ್ತು ಶಿವಮೊಗ್ಗದ ಗೊಂದಲಿಗರು ಚೌಡಿಕೆಯನ್ನೇ ಗೊಂದಲದ ಆರಾಧನೆಯಲ್ಲಿ ಬಳಸುತ್ತಾರೆ. ಗೊಂದಲಿಗರು ಹಿತ್ತಾಳೆಯಿಂದ ಮಾಡಿದ ಎರಡು ತಾಳಗಳನ್ನು ಒಂದಕ್ಕೊಂದಕ್ಕೆ ತಾಗಿಸಿ ನಾದ ಹೊಮ್ಮಿಸುತ್ತಾರೆ. ಎರಡೂ ತಾಳಗಳಿಗೆ ಮಧ್ಯದಲ್ಲಿ ರಂಧ್ರ ಮಾಡಿ ದಾರ ಕಟ್ಟಿರುತ್ತಾರೆ. ಎರಡು ತುದಿಯನ್ನು ತಮ್ಮ ಕೈಬೆರಳುಗಳಲ್ಲಿ ಸಿಕ್ಕಿಸಿಕೊಂಡು ಬಾರಿಸುತ್ತಾರೆ. ಅರ್ಧ ಮಾರುದ್ದದ ಕಲಾತ್ಮಕವಾಗಿ ಹೆಣೆದ ಹಗ್ಗದ ತುದಿಗೆ ತಾಳಗಳು ಬಂಧಿಸಲ್ಪಟ್ಟಿರುತ್ತವೆ. ಕೆಲವು ಸಲ ಒಂದು ಮಾತ್ರ ಸಂಬಾಳಕ್ಕೆ ಅಂಟಿಕೊಂಡಿರುತ್ತದೆ. ಕೆಲವು ಸಲ ಬೀಸು ಕಂಸಾಳೆಯಂತೆಯೂ ಈ ತಾಳಗಳನ್ನು ಬಳಸುವುದುಂಟು. ಇವಕ್ಕೆ 'ಪತ್ತ' ಎಂದು ಕರೆಯಲಾಗುತ್ತದೆ. ಗೊಂದಲ ಪ್ರಾರಂಭವಾದ ಕೂಡಲೇ ನೆಲದ ಮೇಲಿದ್ದ ಸಂಬಾಳ ಹೆಗಲೇರಿದ ಮೇಲೆ, ಚೌಡಿಕೆ ಶೃತಿಗೊಳ್ಳಲು ಪ್ರಾರಂಭಿಸುತ್ತದೆ. ಆಗ ಈ ತಾಳಗಳು ಮುಖ್ಯ ಕಥೆಗಾರನ ಕೈಸೇರಿ ಸಂಗೀತ ಮೇಳದ ಚಾಲನೆ ಕೊಡುತ್ತವೆ. ಇಬ್ಬರೇ ಕಲಾವಿದರು ಇದ್ದಾಗ ಈ ತಾಳಗಳು ಸಂಬಾಳವನ್ನು ಹಿಡಿದವನ ಜೊತೆಗೆ ಇರುತ್ತವೆ. ಗೊಂದಲದ ಪೂಜೆ ಮುಗಿದ ನಂತರ ದೇವಿಸ್ತುತಿ ಮಾಡುವ ಮೊದಲು ಎಲ್ಲ ವಾದ್ಯಗಳ ನಾದಕ್ರಿಯೆ ಪ್ರಾರಂಭವಾಗುತ್ತದೆ. ಗೊದಲಿಗರ ಆಟದಲ್ಲಿ ಚೌಡಿಕೆ ಒಂದು ಪ್ರಮುಖ ವಾದ್ಯದ ಸ್ಥಾನ ಪಡೆದುಕೊಂಡಿದೆ.

**ಸಂಬಾಳ:**

ಸಂಬಾಳಕ್ಕೆ ಚಮಸಮ್ಮೇಳ, ಡಂಕ ಎಂದು ಕರೆಯುತ್ತಾರೆ. ಗೊಂದಲಿಗರ ಹಾಡಿಗೆ ಚೌಡಿಕೆ (ತುಂತುಣಿ)ಯ ಹಾಗೆಯೇ ಪ್ರಧಾನ ವಾದ್ಯವಾಗಿದೆ. ವೀರಗಾಸೆ ಅಥವಾ ಪುರುವಂತರು ಬಳಸುವ ಸಮಾಳಗಳಕ್ಕಿಂತ ಗಾತ್ರದಲ್ಲಿ ಇದು ಚಿಕ್ಕದಾಗಿರುತ್ತದೆ. ಒಂದೇ ಆಕಾರದ ಮರ ಅಥವಾ ಕಂಚಿನಿಂದ ತಯಾರಿಸಿ ಜೋಡು ತಬಲಗಳು ಸಮಾಳದ ಆಕಾರ ಪಡೆದಿರುತ್ತವೆ. ಅಗಲ ಬಾಯಿಯ ಪಾತ್ರೆಗಳಂತಹ ಎರಡು ಹೊಳಪುಗಳಿಗೆ ಚರ್ಮ ಹೊದಿಸಿ ಮೇಲೆ ಕರಣಿಯನ್ನು ಲೇಪಿಸಲಾಗಿರುತ್ತದೆ. ಒಂದೇ ಕಡೆಗೆ ಮುಖ ಮಾಡಿರುವ ಇವುಗಳಲ್ಲಿ ಒಂದು ಸ್ಥಿರ ಧ್ವನಿವುಳ್ಳದ್ದಾಗಿದೆ. ಇದು ಹಿಗ್ಗುವ ಕುಗ್ಗುವ ಅನುಕೂಲವನ್ನು ಹೊಂದಿದ್ದು ಮತ್ತು ಧ್ವನಿ ವ್ಯತ್ಯಾಸವನ್ನು ಮಾಡಿಕೊಳ್ಳಲು ಸಾಧ್ಯವಿರುವಂಥದ್ದು. ಕಥಾ ವಿವರಣೆಯ ಗದ್ಯಭಾಗ ಮುಗಿದು ನೃತ್ಯದೊಡನೆ ಹಾಡು ಪ್ರಾರಂಭವಾದ ಕೂಡಲೇ ಎರಡು ಮಂಡಿಗಳ ನಡುವೆ ಸರಕ್ಕನೆ ಸೇರಿಕೊಂಡು ಕುಣಿತವನ್ನು ವರ್ಣರಂಜಿತವಾಗುವಂತೆ ಮಾಡುತ್ತದೆ. ಇದನ್ನು ನುಡಿಸಲು ಹಂಸದಾಕಾರದ ಬೆತ್ತದ ಕಡ್ಡಿಯನ್ನು ಬಳಸಲಾಗುತ್ತದೆ. ಕಡ್ಡಿ ಇಲ್ಲದೆ ಬೆರಳುಗಳಿಂದ ಬಡಿದು ನುಡಿಸುವ ಹಾಗೂ ಇತರ ವ್ಯತ್ಯಾಸಗಳು ಪ್ರಾದೇಶಿಕವಾಗಿ ಕಂಡು ಬರುತ್ತವೆ.

**೩.೧೧ ಕಥೆಗಾರ ಮತ್ತು ಹಿಮ್ಮೇಳ :**

ಗೊಂದಲಿಗರ ಮೇಳದಲ್ಲಿ ಸಾಮಾನ್ಯವಾಗಿ ಇಬ್ಬರು ಅಥವಾ ಮೂವರು ಕಲಾವಿದರು ಇರುತ್ತಾರೆ. ಗೊಂದಲಿಗರ ಆಟದಲ್ಲಿ ಮುಮ್ಮೇಳ ಅಥವಾ ಕಥೆಗಾರ ಮತ್ತು ಹಿಮ್ಮೇಳಿಗರ ಸಂಬಂಧ ಅತ್ಯಂತ ಅರ್ಥಪೂರ್ಣವುಳ್ಳದ್ದು ಇವರಿಬ್ಬರೂ ಕೂಡಿಯೇ ಕಥಾ ಸಾರವನ್ನು ಬಿಚ್ಚಿಡುತ್ತಾರೆ. ಕಥೆಯನ್ನು ಕಥೆಗಾರ ಪ್ರಾರಂಭಿಸಿದರೆ ಅದನ್ನು ಮುಂದುವರಿಸುವ ಕಾರ್ಯ ಹಿಮ್ಮೇಳಿಗರು ಮಾಡುತ್ತಾರೆ. ಕಥೆಗಾರ ಗಣಪತಿಯ ಅಥವಾ ಅಂಬಾಭವಾನಿಯ ಸ್ತುತಿಯನ್ನು ತನ್ನ ತಾಳದ ಗತಿಯೊಂದಿಗೆ ಪ್ರಾರಂಭಿಸುತ್ತಾನೆ. ಭಕ್ತರ ಬಯಕೆಯಂತೆ ಕಥೆ ಹೇಳಲು ಪ್ರಾರಂಭಿಸುತ್ತಾನೆ. ತಮ್ಮನ್ನು ತಾವು ಕಥೆಯ ಪಾತ್ರಗಳಾಗಿ ಕಲ್ಪಿಸಿಕೊಂಡು ರಾಜ, ಮಂತ್ರಿ, ರಾಕ್ಷಸ, ದೇವರು, ರಥ, ಕುದುರೆಗಳು, ಪಶುಪಕ್ಷಿಗಳು ಮುಂತಾದ ಪೋಷಕ ಪಾತ್ರಗಳಲ್ಲಿ ಧ್ವನಿಗೂಡಿಸುತ್ತಾರೆ. ಅದರ ಜೊತೆಗೆ ಹಿಮ್ಮೇಳಿಗ ಧ್ವನಿ ತೋರುವ ಹಾಂ, ಆಹಾ, ಹೌದು, ಎನ್ನುವ ಉದ್ಗಾರಗಳ ಕ್ರಿಯೆಯ ಜೊತೆಗೆ ಕಥನವು ಸಾಗುವುದು. ಆ ಕಥೆಗೆ ಆತನು ಸೊಲ್ಲು ನೀಡುತ್ತಾನೆ. ನಾಟಕದ ಪ್ರಮುಖ ಪರಿಕರಗಳು ಇರದೆ, ಪ್ರತ್ಯೇಕ ವಾದ್ಯಕಾರರು ಇರದೆ, ಜಾನಪದ ರಂಗಭೂಮಿಯ ಸಣ್ಣಾಟ ದೊಡ್ಡಾಟದಂತೆ ಇಲ್ಲಿ ಭಾಗವತರಿರುವುದಿಲ್ಲ. ಆದರೆ ಪ್ರಮುಖ ಲಕ್ಷಣಗಳಲ್ಲಿ ಒಂದಾದ ಅನುಕರಣೆಯ ನಟನಾ ಕ್ರಿಯೆಯಾಗಿ ಮತ್ತೊಂದು ಪಾತ್ರವಾಗಿ ವರ್ತಿಸುತ್ತಾರೆ. ಅರ್ಥಪೂರ್ಣ ಹಾವಭಾವ ಸಂಭಾಷಣೆಯೊಂದಿಗೆ ಕಥೆಗಾರ ಹಾಗೂ ಹಿಮ್ಮೇಳಿಗರು ಕಥನವನ್ನು ನಡೆಸಿಕೊಂಡು ಬರುತ್ತಾರೆ. ಎಲ್ಲ ಪಾತ್ರಗಳ ಗುಣ ಸ್ವಭಾವಗಳನ್ನು ಉಳಿಸಿಕೊಂಡು

ತಮ್ಮ ಆಟದ ಕಥಾ ವಸ್ತುವಿಗೆ ತಕ್ಕಂತೆ ನಿರೂಪಕರಾಗುತ್ತಾರೆ. ಕಥಾ ಪ್ರಸಂಗಗಳು ಅಪೇಕ್ಷಿಸಿದಂತೆ ಇಬ್ಬರು ಸೇರಿ ಒಂದೇ ಪಾತ್ರ ಮಾಡುತ್ತಾರೆ. ಕೆಲವು ಸಲ ವಿಭಿನ್ನ ಮನೋಧರ್ಮದ ಅನ್ಯಪಾತ್ರಗಳಾಗಿ ಭಾವನಾತ್ಮಕವಾಗಿ ರೂಪಾಂತರಗೊಳಿಸುತ್ತಾರೆ. ಹಲವಾರು ವೀರಪಾತ್ರಗಳು, ಖಳನಾಯಕ ನಾಯಕಿಯರಾಗುತ್ತಾರೆ. ಈ ಎಲ್ಲ ಪಾತ್ರಗಳಿಗೆ ಕಲಾವಿದರು ತಮ್ಮನ್ನು ತಾವು ಅದಕ್ಕೆ ಒಪ್ಪಿಕೊಳ್ಳುವ ರೀತಿ ಅದ್ಭುತವಾಗಿದೆ. ಕಥಾಪ್ರಸಂಗಗಳಲ್ಲಂತೂ ಅದ್ಭುತ ವಾಕ್‌ಚಾತುರ್ಯ್ಯವಿದೆ. ಕಥೆಗಾರ ಹೇಳುತ್ತಿರುವ ಪ್ರಸಂಗಗಳನ್ನು ಮತ್ತೆ ಹಿಮ್ಮೇಳಿಗ ಮುಂದುವರಿಕೆಯಾಗಿ ಹೇಳುತ್ತಾನೆ. ಗೊಂದಲಿಗರ ಆಟದಲ್ಲಿ 'ಕಥೆಗಾರನದೇ ಪ್ರಮುಖ ಪಾತ್ರ. ಆತ ಅರ್ಧನಟ, ಇನ್ನರ್ಧ ನಿರೂಪಕ, ಭಾಗವತ, ವಾದಕ, ನರ್ತಕಿ, ಸ್ವಯಂ ನಿರ್ದೇಶಕ, ಸೂತ್ರಧಾರನಾಗಿ ಗೊಂದಲದ ಕಥನವನ್ನು ಸ್ಪಷ್ಟಪಡಿಸುತ್ತಾನೆ. ಗೊಂದಲಿಗರ ಆಟದಲ್ಲಿ ಹಿಮ್ಮೇಳದವರೂ ಪ್ರಮುಖ ಪಾತ್ರ ವಹಿಸುತ್ತಾರೆ. ಕಥಾನಿರೂಪಣೆ ನಾಟಕೀಕರಣಗಳು ಹಿಮ್ಮೆಳ ಇಲ್ಲದೆ ನಡೆಯುವುದಿಲ್ಲ. ಕಥೆಗಾರನ ಎಡಭಾಗದಲ್ಲಿ ಚೌಡಿಕೆ ಹಿಡಿದು ಗೊಂದಲದ ಕೊನೆಯವರೆಗೂ ಅವರು ನಿಂತೇ ಇರುತ್ತಾರೆ. ದೊಡ್ಡಾಟದಲ್ಲಿ ಸಾರಥಿ, ಸಣ್ಣಾಟದಲ್ಲಿ ದೂತೆ ಇದ್ದಂತೆ ಗೊದಲಿಗರ ಹಿಮ್ಮೆಳ ಆಟದಲ್ಲಿ ಅನುಕಂಪ, ದು:ಖ ಹರ್ಷ, ಆವೇಶ, ರೋಷ, ಸಮ್ಮತಿ, ಅನುಮತಿ, ಅಚ್ಚರಿ, ಕೌತುಕ, ಭಯ, ಹಲವಾರು ರಸಾನುಭವಗಳು ನೋಡುಗರ ಅನುಭವಕ್ಕೆ ತರುತ್ತವೆ. ಕಥೆಗಾರನ ಬಾಯಿಂದ ಬರುವ ಒಂದು ಮಾತನ್ನೋ ಅಥವಾ ಕಥೆಯ ಒಂದು ವಾಕ್ಯದ ಅಂತಿಮ ಶಬ್ಧವನ್ನೋ ಕಸಿದುಕೊಂಡು ಹಿಮ್ಮೇಳಿಗರು ಅದನ್ನು ಪೂರ್ಣಗೊಳಿಸುತ್ತಾರೆ. ತನ್ನ ಕತೆಗಾರ ಆಡಿದ ಮಾತನ್ನೇ ತಾನು ಹೇಳುವಾಗ ಅದನ್ನು ಧ್ವನಿ ವ್ಯತ್ಯಾಸದಿಂದ ಒತ್ತು ಕೊಡುತ್ತಾನೆ. ಹಿಮ್ಮೇಳಿಗರು ಪೋಷಕ ವಾದ್ಯವೃಂದದಿಂದ, ಹಾಡಿಗೆ ನೀಡುವ ಸ್ವರದಿಂದ ಸೊಲ್ಲು ಮತ್ತು ಚೌಡಿಕೆಗಳ ನಾದತರಂಗವು ಗೊಂದಲಿಗರ ಆಟದ ಸೊಗಸಿಗೆ ಕಾರಣವಾಗುತ್ತದೆ.

### ೩.೧೨ ಗೊಂದಲ ಸಾಹಿತ್ಯ.

ಗೊಂದಲಿಗರ ಸಾಹಿತ್ಯವು ಕಥಾಸಾಹಿತ್ಯದಿಂದ ಕೂಡಿದೆ. ಗೊಂದಲಿಗರ ಸಾಹಿತ್ಯವೆಂದರೆ ಗದ್ಯವೇ ಆಗಿರಲಿ, ಪದ್ಯವೇ ಆಗಿರಲಿ ಒಂದು ಕಥಾವಸ್ತುವನ್ನು ತೆಗೆದುಕೊಂಡು ಹಾಡಿನ ರೂಪದಲ್ಲಿ ವರ್ಣಿಸುತ್ತಾ ಹೋಗುವುದು ಕಂಡುಬರುತ್ತದೆ. ಗೊಂದಲ ಸಾಹಿತ್ಯವನ್ನು ಕಥೆಯೆಂದೇ ಹೇಳಲು ಅವಕಾಶವಿದೆ. ಕಾರಣ ಹಿಮ್ಮೇಳಿಗ 'ಹೂಂ' ಗುಟ್ಟುವಿಕೆ ಕಥೆಗಾರ ಹೇಳುವ ಕಥೆಗೆ ಎಡರು ತೊಡರುಗಳನ್ನು ಸರಿಗೊಳ್ಳುವ ಹಾಗೂ ಕಥೆಯ ಮುಂದುವರಿಕೆಯಾದ ಕಾರ್ಯವನ್ನು ಮಾಡುತ್ತಾನೆ. ಕ್ಯಾತನಹಳ್ಳಿ ರಾಮಣ್ಣನವರು ಗೊಂದಲಿಗರ ಕಥೆಗಳನ್ನು 'ಸಂಕೀರ್ಣ ಜನಪದ ಕಥೆಗಳು' ಎಂದು ಕರೆದಿದ್ದಾರೆ. ಸಾಮಾನ್ಯವಾಗಿ ಜನಪದ ಕಥೆಗಳ ಗಾತ್ರಕ್ಕೆ ಕಥಾವಸ್ತುವಿಗೆ ಹೋಲಿಸಿದಾಗ ಗೊಂದಲಿಗರ ಕಥೆಗಳು ತುಂಬಾ ದೀರ್ಘವಾಗಿವೆ. ಕಥೆಯೊಳ

ಗೊಂದು ಕಥೆ ಹುಟ್ಟಿಕೊಳ್ಳುತ್ತದೆ. ಕನ್ನಡ ಸಾಹಿತ್ಯದಲ್ಲಿ ಪ್ರಥಮ ಗದ್ಯಕೃತಿಯಾದ 'ವಡ್ಡಾರಾಧನೆ' ಕೃತಿಯ ತತ್ವ, ಶೈಲಿಯನ್ನೇ ಇವು ಹೋಲುತ್ತವೆ ಎಂದು ಹೇಳಬಹುದು. ಜಾನಪದದಲ್ಲಿ ಗದ್ಯ, ಪದ್ಯ, ಗದ್ಯಪದ್ಯಯುಕ್ತ ಕಥನಗಳೆಂದು ವಿಭಾಗ ಮಾಡಬಹುದು. ಕಥನಗಳನ್ನು ಪುರಾಣ, ಐತಿಹ್ಯ, ಕಾಲ್ಪನಿಕಗಳೆಂದು ವಿಂಗಡಿಸಬಹುದು. ಇವುಗಳ ಕಥಾಂಶಗಳು ಹಲವು ಆಶಯಗಳ ನ್ನೊಳಗೊಂಡಿವೆ. ಇಂತಹ ಕಥೆಗಳು ಪುರಾಣಗಳಿಗೆ, ಸಾಂಪ್ರದಾಯಿಕ, ಧಾರ್ಮಿಕ ಮತ್ತು ದೈವಿಕ ನಂಬುಗೆ, ಶ್ರದ್ಧೆ ಆಚರಣೆಗಳ ನಿಕಟ ಸಂಬಂಧವಿರುತ್ತದೆ. ಮಾನವನ ಅನುಭವ, ಸನ್ನಿವೇಶ, ಇತಿಹಾಸ, ಕಲ್ಪನೆ ಭ್ರಮೆಗಳು ಒಗ್ಗೂಡಿರುತ್ತವೆ. ಗೊಂದಲಿಗರ ಕಥನ ಸಾಹಿತ್ಯವು ಗದ್ಯ ಪದ್ಯಗಳೆರಡು ಇರುವ ಕಾರಣಕ್ಕೆ ಚಂಪು ಎಂದು ಕರೆಯಲಾಗುವುದಿಲ್ಲ. ಕಾರಣ ಚಂಪುವಿನ ಲಕ್ಷಣಗಳನ್ನು ನೋಡಿದಾಗ ಅದು ಕ್ರಿ.ಶ. ೧೦ ನೇ ಶತಮಾನದಲ್ಲಿಯೇ ಪಂಪನ ಕೃತಿಗಳಲ್ಲಿ ಕಾಣಬಹುದು. ಅಂದಿನ ಹಳೆಗನ್ನಡ ಎಲ್ಲ ಕಾವ್ಯಗಳು ಚಂಪು ಸಾಹಿತ್ಯವನ್ನು ಬಳಸಿಕೊಂಡಿವೆ ಎಂಬುದು ಸತ್ಯದ ಮಾತಾಗಿದೆ. ಹಲವಾರು, ಜನಪದರು ಅಂತಹ ಸಾಹಿತ್ಯವನ್ನು ಸಾಮಾನ್ಯ ವಾಗಿ 'ಜನಪದ ಚಂಪು' ಎಂದು ಕರೆಯುತ್ತಾರೆ. ಅದರಂತೆ ಅದನ್ನು ಅನುಸರಿಸುವ ಕಾರ್ಯ ಮಾಡಿದ್ದಾರೆ. ಗೊಂದಲಿಗರ ಸಾಹಿತ್ಯವನ್ನು ಕಥಾಸಾಹಿತ್ಯವೆಂದೇ ಹೇಳಬಹುದು.

ಗೊಂದಲಿಗರ ಕಥೆಗಳು ಕಾಲ್ಪನಿಕ ಮನೋವಿಲಾಸವನ್ನು ಹೊಂದಿವೆ. ಕಥಾ ಪ್ರಪಂಚದಲ್ಲಿ ಪೌರಾಣಿಕ ಐತಿಹ್ಯವುಳ್ಳ ಕಥಾ ವಸ್ತುವಿಗಿಂತ ಕಾಲ್ಪನಿಕ ಕಥೆಗಳೇ ಹೆಚ್ಚು, ಕಾಲ್ಪನಿಕ ಕಥೆಗಳ ಕಥಾವಸ್ತು ಅದ್ವೀತಿಯವಾದದ್ದು ಇದಕ್ಕೆ ಯಾವುದೇ ಕಾಲಗತಿಗಳ, ಕಾಲದೇಶಗಳ ನಿರ್ಬಂಧವಿರುವುದಿಲ್ಲ. ನಿರೂಪಕನು ಕಥೆಯ ಎಲ್ಲ ಸಾಧ್ಯತೆಗಳನ್ನು ಲೀಲಾಜಾಲವಾಗಿ ದುಡಿಸಿ ಕೊಳ್ಳುವ ನೈಪುಣ್ಯತೆ ಹೊಂದಿರುತ್ತಾನೆ. ಈ ವರ್ಗದ ಕಥೆಗಳಲ್ಲಿ ಹೆಚ್ಚಾಗಿ ಅತಿಮಾನುಷ ಪಾತ್ರಗಳು ಬರುತ್ತವೆ. ಮಾಟಗಾತಿಯರು, ರಾಕ್ಷಸ, ಹಿಡಂಬಿಗಳು, ಮಂತ್ರವಾದಿಗಳು, ಸಾಹಸಿಗಳು, ರಮ್ಯತೆ, ಪ್ರಾಣಿ ಪಕ್ಷಿಗಳಲ್ಲಿ ಬೇರೊಬ್ಬರ ಪ್ರಾಣವಿರುವುದು. ಮಾಯದ ಕುದುರೆ ಮತ್ತು ರತ್ನಗಳನ್ನು ನುಂಗುವ ಪಕ್ಷಿಗಳು ಹೀಗೆ ಹಲವಾರು ವಿಷಯಗಳು ಅಮೋಘ ಮತ್ತು ವಿಸ್ಮಯವಾಗಿ ಮೂಡಿಬರುತ್ತವೆ. ಅಸಂಭವವಾದ ವಿಷಯಗಳು ಸಂಭವ ರೀತಿಯಲ್ಲಿ ಭ್ರಮೆ ಮೂಡಿಸುವಂತೆ ವರ್ತಿಸುತ್ತವೆ.

"ಗೊಂದಲಿಗರ ಆಟದ ಕಥಾವಸ್ತುಗಳು ಬಹುತೇಕ ಕಾಲ್ಪನಿಕ. ಅವುಗಳಿಗೆ ಮೂಲಾಧಾರ ಆಕಾರಗಳೇ ಇಲ್ಲ. ಸಂಭವನೀಯತೆಯ ಮೇಲೆ ಕಲ್ಪಿತಗೊಂಡಿದ್ದರೂ ಅವಾಸ್ತವಿಕತೆಗೆ ಹೆಚ್ಚಿನ ಪ್ರಾಮುಖ್ಯತೆ ಇರುವುದು ಕಂಡುಬರುತ್ತದೆ. ವ್ಯಕ್ತಿನಾಮಗಳು, ರಾಜ್ಯಗಳ ಹೆಸರುಗಳು, ರಾಜ-ರಾಣಿ, ಪ್ರಜೆಗಳ ಹೆಸರುಗಳು, ಬಹುತೇಕ ಕನ್ನಡ ಜಾಯಮಾನದವಲ್ಲ, ನಮ್ಮ ಚಾರಿತ್ರಿಕ ಹಾಗೂ ಭೌಗೋಳಿಕ ಅಸ್ತಿತ್ವಕ್ಕೆ ಅವು ಹೊರತಾದವು, ಅದರೇನಂತೆ ನಮ್ಮ ಅದ್ಭುತ ರಮ್ಯತೆಯಿಂದ ನಮ್ಮ ಪ್ರೇಕ್ಷಕರು ಸೈ ಎನ್ನುವಂತೆ ಅವು ಪ್ರಸ್ತುತಗೊಳಿಸುವ ಸಾಮರ್ಥ್ಯವನ್ನು ಗೊಂದಲಿಗರ

ಆಟದಲ್ಲಿ ಪಡೆದುಕೊಂಡಿವೆ.

ಪುರಾಣಗಳಲ್ಲಿ ಸ್ಥಾನಪಡೆದಿರುವ ಮತ್ತು ಮಾನವಾತೀತ ಪವಾಡ ಸದೃಶ ಘಟನೆಗಳೇ ಗೊಂದಲಿಗರ ಆಟದ ಕತೆಗಳಲ್ಲಿ ಸಮಪ್ರಮಾಣದಲ್ಲಿರುವುದು ಕಂಡುಬರುತ್ತವೆ. ಕಥಾ ನಾಯಕ-ನಾಯಕಿಯರು ಏಕಾಂಗಿಗಳಾಗಿ ಪ್ರದರ್ಶಿಸುವ ಶೌರ್ಯ ಆವೇಶಗಳಿಗೆ ಮಿತಿ ಇಲ್ಲ.ಕವಿ ನೇಮಿಚಂದ್ರನು ತನ್ನ ಲೀಲಾವತಿ ಪ್ರಬಂಧದಲ್ಲಿ ಹೀಗೆ ಹೇಳಿದ್ದಾನೆ.

"ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ತಮಂ
ಮಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳು ಕೃತಿ ಬಂದದೊಳತ್ತಿ ಕಟ್ಟಿದರೆ
ಮುಟ್ಟಿದರೊತ್ತಿ ಮೆಟ್ಟಿದರದೇನಳವಗ್ಗಳವ್ಗೆ ಕವೀಂದ್ರರಾ"

ಗೊಂದಲಿಗರೂ ಸಹ ನೇಮಿಚಂದ್ರ ಕವಿಯಂತೆ ಪ್ರತಿಭೆ ಹೊಂದಿದವರಾಗಿದ್ದಾರೆ ಎಂದು ಹೇಳಿದರೆ ಅತಿಶಯೋಕ್ತಿ ಆಗಲಾರದು. ಗೊಂದಲಿಗರ ಆಟಗಳ ಕಾಲ್ಪನಿಕ ಕಥಾವಸ್ತು ಮತ್ತು ಪ್ರಪಂಚದಲ್ಲಿ ಎಲ್ಲವೂ ಸಂಭವನೀಯವೇ ಎನ್ನುವಂತಿರುತ್ತವೆ. ಶಿಲಾವತಿ ಗಂಡು ವೇಷದಲ್ಲಿ ಏಕಾಂಗಿಯಾಗಿ ವೈರಿ ಸೈನ್ಯದೊಂದಿಗೆ ಕದನವಾಡಿ ವೀರ ಮಹಿಳೆಯಾಗಿ ಗೋಚರಿಸುತ್ತಾಳೆ. ಗೊಂದಲಿಗರ ಕಥನಗಳು ವೀರ ಪರಾಕ್ರಮಿಯಂತೆ ತೋರುವ ಅದ್ಭುತ ಸಾಹಸ ಪರಾಕ್ರಮಗಳು ಮಾನವಾತೀತವಾದವು. ಭಾರತೀಯ ಪುರಾಣ ಪುಣ್ಯ ಕಥಾ ಘಟನೆಗಳಿಗೂ ಗೊಂದಲಿಗರ ಕಾಲ್ಪನಿಕ ಆಟಗಳ ಘಟನೆಗಳಿಗೂ ಹೊಲಿಕೆ ಇರುವುದು ಕಂಡುಬರುತ್ತದೆ. ವನವಾಸ ಕಾಲದಲ್ಲಿ ರಾಮಲಕ್ಷ್ಮಣರು ಸೀತಾನ್ವೇಷಣೆಯಲ್ಲಿ ನಿರತರಾದಂತೆ ಶೀಲಾವತಿ ಕಥೆಯಲ್ಲಿ ಉದಯವಾನ ಸಹೋದರರೂ ಶೀಲಾವತಿಯನ್ನು ಹುಡುಕುತ್ತಾರೆ. ತನ್ನ ಅಣ್ಣ ಶ್ರೀರಾಮಚಂದ್ರನ ಬಗ್ಗೆ ಭರತ ತೋರುವ ಪ್ರೇಮವನ್ನೇ ಶುಭವಾನನು ತನ್ನ ಅಣ್ಣನಲ್ಲಿ ತೋರುತ್ತಾನೆ."[೨೨]

ಗೊಂದಲಿಗರು ಹೇಳುವ ಕಥೆಗಳು ಕಾಲ್ಪನಿಕ ನೆಲೆಗಟ್ಟಿನ ಮೇಲೆ ಇದ್ದರೂ ಅವು ನಮ್ಮ ಸಂಸ್ಕೃತಿಯ ಹಲವಾರು ಪೌರಾಣಿಕ ವಿಷಯಗಳ ಜೊತೆಗೆ ಹೊಂದಿಕೊಂಡಿರುವಂತೆ ಭಾಸವಾಗುತ್ತವೆ. ಆ ಮೂಲಕ ಅವರು ಜನಪದರಿಗೆ, ಜೀವನದ ವಾಸ್ತವಿಕ ಅರಿವನ್ನು ಮೂಡಿಸುತ್ತವೆ. ಗೊಂದಲಿಗರು ಬದುಕಿಗೆ ಹತ್ತಿರವಾದ ಸಂಗತಿಗಳನ್ನು ತಿಳಿಸುತ್ತಾರೆ. ನೀತಿಯ ಸಾರವನ್ನು, ಜನತೆಗೆ ಬದುಕಿನ ಸಾರ್ಥಕತೆಯನ್ನು, ಆದರ್ಶದ ತತ್ವದ ದರ್ಶನ ಮಾಡಿಸುತ್ತಾರೆ. ಸಾಮಾಜಿಕ ನೆಲೆಗಟ್ಟಿನ ಮೇಲೆ ಲೌಕಿಕ ಅಲೌಕಿಕ ಧಾರ್ಮಿಕ ಹಿನ್ನೆಲೆಯಲ್ಲಿಯೇ ಇವರ ಕಥಾಸಾರವು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಒಂದು ಸಂವಿಧಾನಿಕ ಕಟ್ಟೆಯನ್ನೇ ಕಟ್ಟುತ್ತಾರೆ. ಬದುಕಿನ ಭದ್ರತೆಯ ಅರಿವನ್ನು ಮೂಡಿಸುತ್ತಾರೆ. ಜನ ಸಮುದಾಯವನ್ನು ನಿಕಟ ಸಂಪರ್ಕದಲ್ಲಿ ಇಡುವಂತೆ ಮಾಡುತ್ತಾರೆ. ಪರಸ್ಪರ ನೀತಿಯ ಬಾಂಧವ್ಯವನ್ನು ಬೆಸೆಯುವ ಇವರ ಕಥಾ ಬೋಧನೆಯು ಒಂದು ಆರೋಗ್ಯಕರ ಸಮಾಜ ನಿರ್ಮಾಣಕ್ಕೆ ದಾರಿ ಎಂದು ಹೇಳಬಹುದು.

"ಒಂದು ಕಾಲದಲ್ಲಿ ಈ ಗೊಂದಲವೆಂಬ ಉಪಾಸನಾ ವಿಧಿ ಕೇವಲ ಭಕ್ತಿಭರಿತ ಪದ್ಯಗಳನ್ನು, ನೃತ್ಯಗಳನ್ನು ಮೇಳೈಸಿಕೊಂಡಿರಬೇಕು. ಹೀಗಾಗಿ ಗೊಂದಲಿಗರು ಧಾರ್ಮಿಕ ವೃತ್ತಿಗಾಯಕರೆನಿಸಿದ್ದಾರೆ. ಆದರೆ ಈಗ ಅವರನ್ನು ಹಾಗೆ ಕರೆಯುವಂತಿಲ್ಲ ಅವರ ಕಥೆಗಳು ಸಾಮಾಜಿಕ ನೀತಿಪರವಾದ ಕಥೆಗಳನ್ನು ಹೊಂದಿದೆ. ಈಗ ಗೊಂದಲದ ವಿಧಾನದ ಪೂರ್ವರಂಗದಲ್ಲಿ ದೇವಿಸ್ತುತಿಗಳಿದ್ದರೆ ಉತ್ತರ ರಂಗದಲ್ಲಿ ಆಯ್ದ ಕಥೆಗಳು ಅವರ ವಿಷಯವಸ್ತುವಾಗಿವೆ. ಅವು ಸಂಪೂರ್ಣ ಗೀತಗೋಷ್ಟಿಯೇನಲ್ಲ. ಕಥೆಯನ್ನು ಹಾಡುವುದಿಲ್ಲ. ಆ ಕಥೆಯೊಂದನ್ನು ನಾಟಕೀಕರಿಸುವ ರೀತಿಯಲ್ಲಿ ಪ್ರಸ್ತುತಗೊಳಿಸುತ್ತಾರೆ. ಅದರಲ್ಲಿ ದೃಶ್ಯ ಮತ್ತು ಶ್ರವ್ಯಗಳ ಏಕತ್ರತೆ ಇರುತ್ತದೆ.

ಗೊಂದಲಿಗರು ತಮ್ಮ ಗೊಂದಲಕ್ಕೆ "ಬನ್ನಿಮಹಾಂಕಾಳಿ, ರೇಣುಕಾ ಮಹಾತ್ಮೆ ಇಂತಹ ಭಕ್ತಿ ಪ್ರಧಾನ ಕಥೆಗಳನ್ನು ಆಯ್ದುಕೊಳ್ಳುವುದೇ ಹೆಚ್ಚಾಗಿದ್ದರೂ ಜಯರಾಣಿ, ಬಾಳಾವತಿ, ರಸ್ತಾಳರಾಜ ಶೀಲಾವತಿ, ಬಾಳಭಿಕ್ಷುಕ, ಅರಣ್ಯಕುಮಾರ, ಮುಂತಾದ ನೀತಿಪರ ಕಥೆಗಳನ್ನು ಬಳಸಿಕೊಳ್ಳುವುದುಂಟು. ಗೊಂದಲದ ಆಟಗಳಲ್ಲಿ ದೇವಿಸ್ತುತಿ ಮತ್ತು ಕುಣಿತಗಳಿಗೆ ಪ್ರಾಧಾನ್ಯತೆ ಹೆಚ್ಚು. ಆಟದ ಮಧ್ಯೆ ಉಪಕತೆ, ತತ್ವಪದಗಳು ಬೇಸರ, ಯಾಂತ್ರಿಕತೆಗಳನ್ನು ನೀಗಿ ಮನರಂಜನೆ ಮೂಲಕ ನಡುರಾತ್ರಿ ಕಳೆಯುವುದಕ್ಕೆ ನೆರವಾಗುತ್ತವೆ."[೨೩] ಗೊಂದಲಿಗರು ಕಥೆಯ ಪ್ರಾರಂಭದಲ್ಲಿ ದೇವಿ ಸ್ತುತಿಗಳನ್ನು ಹೇಳಿ ಗೊಂದಲ ಕಾರ್ಯವು ಸುಗಮವಾಗಿ ಸಾಗಲು ದೇವಿಯನ್ನು ಆಹ್ವಾನಿಸುತ್ತಾರೆ. ಕಾರಣ ಯಾವುದೇ ಕಂಟಕವಾಗದಂತೆ, ನಮ್ಮನ್ನೆಲ್ಲ ರಕ್ಷಿಸುವಂತೆ ಆ ದೇವಿಯಲ್ಲಿ ಬೇಡಿಕೊಳ್ಳಲಾಗುತ್ತದೆ. ಈ ದೇವಿ ಸ್ತುತಿಗಳಷ್ಟೇ ಅಲ್ಲದೆ ಬೇರೆ ಬೇರೆ ದೇವರ ಸ್ತುತಿಗಳನ್ನು ಅಂದರೆ ಗಣಪತಿ, ಶಿವ, ಸರಸ್ವತಿ, ಜಗದಂಬೆ, ಹೀಗೆ ದೈವಗಳ ಹಲವಾರು ಸ್ತುತಿಗಳನ್ನು ಮಾಡುತ್ತಾರೆ.

### ೩.೧೪ ಗೊಂದಲಿಗರ ಕಥನ ಸಂಸ್ಕೃತಿ-ಬದುಕು

ಮೌಖಿಕ ಪರಂಪರೆಯಿಂದ ಬಂದ ಈ ಕಥನ ಸಂಸ್ಕೃತಿಯು ಗೊಂದಲಿಗರಿಗೆ ಒಂದು ಕಾಲದಲ್ಲಿ ಬದುಕನ್ನು ರೂಪಿಸಿಕೊಟ್ಟಿತ್ತು. ನಿಂಗಣ್ಣ ಸಣ್ಣಕ್ಕಿಯವರು ತಮ್ಮ ಗ್ರಂಥದಲ್ಲಿ "ಭಾರತದಲ್ಲಿ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳು ಒಂದಾಗಿ ಕೂಡಿಬಂದಿರುವುದು ಕಾಣುತ್ತೇವೆ. ಆರ್ಯ-ದ್ರಾವಿಡ ಧರ್ಮ, ಸಂಸ್ಕೃತಿಗಳು ಒಂದನ್ನೊಂದು ಕೂಡಲು ಆರ್ಯರ ಕೆಲವು ಸಾಂಸ್ಕೃತಿಕ ಅಂಶಗಳು ದ್ರಾವಿಡರವುಗಳಾಗಿ, ದ್ರಾವಿಡರ ಕೆಲವು ಸಾಂಸ್ಕೃತಿಕ ಅಂಶಗಳ ಆರ್ಯರವುಗಳಾಗಿ ಬೆಸುಗೆಗೊಂಡ ಸಾಂಸ್ಕೃತಿಯಾಗಿದೆ. ಅದೇ ಭಾರತೀಯ ಸಂಸ್ಕೃತಿಯಾಗಿದೆ. ಈ ಭಾರತೀಯ ಸಂಸ್ಕೃತಿಯ ಪ್ರಭಾವವೇ, ಗೊಂದಲಿಗರ ಮೇಲಾಗಿರುವ ಪ್ರಭಾವವಾಗಿದೆ."[೨೪] ಎಂದು ಹೇಳುತ್ತಾರೆ. ಪಾರಂಪರಿಕವಾಗಿ ಬಂದಂತ ಧರ್ಮಾಚರಣೆಗಳನ್ನು ಸಮಾಜದಲ್ಲಿ ಪ್ರತಿಷ್ಟಿತ ವರ್ಗದವರು

ಅಷ್ಟೇ ಅಲ್ಲ ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಯು ತನ್ನ ಸಮಾಜದ ನೆಲೆಗಟ್ಟಿನಲ್ಲಿ ಆಚರಿಸುತ್ತ ಬಂದಿರುತ್ತಾನೆ. ಅದರಲ್ಲಿ ಶಕ್ತಿ ಆರಾಧನೆಯು ಒಂದಾಗಿದೆ. ಈ ಶಕ್ತಿ ಆರಾಧನೆಯನ್ನು ಗೊಂದಲಿಗರು ಗೊಂದಲದ ರೂಪದಲ್ಲಿ ಮಾಡುತ್ತಾರೆ. ಈ ಗೊಂದಲವನ್ನು ಹಾಕುವುದರ ಮೂಲಕ ಒಂದು ಸಮಾಜದ, ಒಂದು ಮನೆತನದ ಒಳಿತನ್ನು ಬಯಸುತ್ತಾರೆ. ಇಂಥಹ ಗೊಂದಲವನ್ನು ಹಾಕಿಸುವ ಬ್ರಾಹ್ಮಣರು ಗೊಂದಲದ ಸಮಯದಲ್ಲಿ ಶಕ್ತಿಯನ್ನು ಪೂಜಿಸಿ ನಮಸ್ಕರಿಸಿದ ನಂತರ ಈ ಗೊಂದಲಿಗರ ಕಾಲುಮುಟ್ಟಿ ನಮಸ್ಕರಿಸುತ್ತಾರೆ. ಇದನ್ನೇ ಎಂ.ಎಂ. ಮದರಿಯವರು ತಮ್ಮ ಆತ್ಮಕಥನವಾದ 'ಗೊಂದಲಿಗ್ಯಾ' ಎಂಬ ಗ್ರಂಥದಲ್ಲಿ ತಾವು ಚಿಕ್ಕವರಿರುವಾಗ ಅಜ್ಜಿ ಗೊಂದಲಕ್ಕೆ ಕರೆದುಕೊಂಡು ಹೋದಾಗ ಆ ಮನೆಯಲ್ಲಿ ಅವರ ಗುರುಗಳೇ ಗೊಂದಲ ಹಾಕಿಸುತ್ತಿದ್ದರು. ಇವರು ಒಳಪ್ರವೇಶ ಮಾಡಿದ ಕೂಡಲೇ ಊಟ ಉಪಚಾರದ ನಂತರ ಅಜ್ಜಿಗೆ ಹಾಗೂ ಚಿಕ್ಕವರಾದ ಮದರಿ ಮತ್ತು ಅವರ ತಮ್ಮನಿಗೆ ಗುರುಗಳೇ ನಮಸ್ಕರಿಸಿದ್ದನ್ನು ಮುಜುಗರದಿಂದ ನೆನಪಿಸಿಕೊಳ್ಳುತ್ತಾರೆ. ಅಂದರೆ ಯಾವುದೇ ಒಂದು ಪೂಜೆ, ಧರ್ಮಾಚರಣೆಗಳಲ್ಲಿ ಆ ವ್ಯಕ್ತಿಯ ಜಾತಿ ಮುಖ್ಯವಾಗಿರದೆ, ಆತನ ಆಚರಣೆ, ಆಚಾರ ವಿಚಾರಗಳು ಮುಖ್ಯವಾಗಿರುತ್ತವೆ. ಅದಕ್ಕಾಗಿ ಗೊಂದಲಿಗರನ್ನು ಬ್ರಾಹ್ಮಣರು ನಮಸ್ಕರಿಸುವುದೆಂದರೆ, ಮರ್ಯಾದೆಯಲ್ಲಿ ಸಮಾನತೆಯನ್ನು ತೋರಿಸಿದಂತಾಗಿದೆ. ಇಂಥಹ ಕಥನಗಳ ಸಂಸ್ಕೃತಿಯ ಆಚರಣೆಯಿಂದ ಗೊಂದಲಿಗರು ಸಮಾಜದಲ್ಲಿ ಸಾಂಸ್ಕೃತಿಕವಾಗಿ ಒಂದು ಸ್ಥಾನವನ್ನೇ ಗಿಟ್ಟಿಸಿಕೊಂಡಿದ್ದಾರೆ.

ಗೊಂದಲಿಗರು ಅಲೆಮಾರಿ ಪ್ರವೃತ್ತಿವುಳ್ಳವರಾಗಿದ್ದಾರೆ. ಊರಿಂದ ಊರಿಗೆ ಅಲೆದಾಡುವ ಇವರಿಗೆ ಯಾರು ವೀಳ್ಯವನ್ನುಕೊಟ್ಟು ಹೋಗುತ್ತಾರೋ ಅಲ್ಲಿ ಹೋಗಿ ಗೊಂದಲ ಹಾಕಿ ಮಾತೃದೇವತೆಗಳ ಸಂಸ್ಕೃತಿಯನ್ನು ಬಿತ್ತರಿಸುವ ಮತ್ತು ಪ್ರಚಾರ ಮಾಡುವ ಕಾರ್ಯವನ್ನು ಮಾಡುತ್ತಾರೆ. ಜನಪದ ಸಂಸ್ಕೃತಿಯ ಜೀವಾಳವಾದ ಇವರು ಶುದ್ಧ ಜನಪದ ಸಂಸ್ಕೃತಿಯನ್ನು ತಮ್ಮ ಕಥನಗಳ ಮೂಲಕ ಪ್ರಚಾರ ಪಡಿಸುತ್ತಾರೆ. ಗೊಂದಲಿಗರು ತಾವು ತಮ್ಮ ಮನೆಯಲ್ಲಿ ಮಂಗಳವಾರ ಶುಕ್ರವಾರ ದೇವಿವಾರಗಳಂದು ಉಪಾಸನೆ ಮಾಡುವುದನ್ನೇ ಅವರು ತಮ್ಮ ಕಥೆಗಳಲ್ಲಿ ವಾಸ್ತವ ಸಂಗತಿಗಳಾಗಿ ಪ್ರಚಾರ ಪಡಿಸುತ್ತಾರೆ. ನಿಸರ್ಗದ ಮಡಿಲಲ್ಲಿ ಬಾಳಿಬದುಕಿದ ಅವರು ಆಕಾಶ, ಸೂರ್ಯ, ಚಂದ್ರ, ಭೂಮಿ, ನೀರು, ಗಾಳಿ, ಮಳೆ, ಬೆಂಕಿ, ಜೀವ, ಇವೆಲ್ಲ ದೇವನ ಸೃಷ್ಟಿ ಎಂದು ತಿಳಿಸುವರು. ಜೀವನದ ನಡುವಳಿಕೆ, ಹಾಗು ಸಂಸ್ಕೃತಿಯನ್ನು ತಾತ್ವಿಕವಾಗಿ ತಿಳಿಸುತ್ತಾರೆ.

ಗೊಂದಲಿಗರು ಜನಪದ ಸಂಸ್ಕೃತಿಯನ್ನು ಪ್ರಚಾರ ಪಡಿಸುವುದರ ಜೊತೆಗೆ ಜನಪದ ಸಾಹಿತ್ಯವನ್ನು ಸಹ ಪ್ರಚಾರ ಮಾಡುತ್ತಾರೆ. ಅಲೆಮಾರಿಗಳಾದ ಇವರ ಮೇಲೆ ಆಯಾ ಸ್ಥಳೀಯ ಜ್ಞಾನ, ಘಟನಾವಳಿಗಳು ಪ್ರಭಾವ ಬೀರಿವೆ. ಈ ಗೊಂದಲ ವೃತ್ತಿಯಲ್ಲಿ ಗೊಂದಲಿಗರು ಆಯಾ ಪ್ರಾದೇಶಿಕ ಭಿನ್ನತೆಯಿಂದ ಪುರಾಣ, ಪುಣ್ಯಕಥೆಗಳನ್ನು ಭಿನ್ನ ಭಾಷೆಯಲ್ಲಿ ನಿರೂಪಣೆ

ಮಾಡಿದರೂ ಅದರ ತಿರುಳು, ಜ್ಞಾನ, ಸಂಸ್ಕೃತಿ ಒಂದೇ ಎಂಬುದಾಗಿ ತಿಳಿಯುತ್ತದೆ. ಇದರಿಂದ ಭಾರತದಲ್ಲಿ ಇವರಿಂದ ಭಾವೈಕ್ಯತೆಯ ಭಾವ ಮಾಡಲೂ ಸಹಾಯವಾಗಿದೆ. ಇವರು ಹೇಳುವ ಪತಿವೃತಾ ಕಥೆಗಳು, ಸತ್ಯವಂತರ ಕಥೆಗಳು, ಅತಿಮಾನುಷ ಕಥೆಗಳು, ರಾಜ ಮಹಾರಾಜರ ಕಥೆಗಳು, ನೀತಿ, ಆಚಾರ ವಿಚಾರಗಳನ್ನು ಬಿತ್ತುವ ಕಥಾನಕರಾಗಿದ್ದಾರೆ. ಗೊಂದಲಿ ವೃತ್ತಿಗಾಯಕರು ಸಾಹಿತ್ಯವನ್ನು ಕಲೆಯ ಮೂಲಕ ಜನಪದ ಕಾವ್ಯದ ಸೇವೆಯನ್ನು ಮಾಡುತ್ತಾ ಬಂದಿದ್ದಾರೆ. ಗದ್ಯ-ಪದ್ಯ ಮಿಶ್ರಿತ ಇವರ ಕಲೆ, ಮತ್ತು ಆರಾಧನೆ ಕೇಳಲು ನೋಡಲು ಚಂದವಾಗಿದೆ. ಜನಪದ ಎಲ್ಲ ಪ್ರಕಾರಗಳಾದ ತ್ರಿಪದಿ, ಕೀರ್ತನೆ, ದಾಸರಪದ, ವಚನ ಎಲ್ಲವನ್ನು ಹಾಡುವ ಇವರು ನಾಡಿನ ಹಾಗೂ ರಾಷ್ಟ್ರದ ಆಸ್ತಿಯಾಗಿದ್ದಾರೆ. ಜನಪದ ಸಾಹಿತ್ಯದ ಏಳ್ಗೆಗೆ ದುಡಿಯುವ ಪ್ರಚಾರಕರಾಗಿದ್ದಾರೆ. ಈ ವೃತ್ತಿ ಕಲಾಜೀವಿಗಳು ತಾತ್ವಿಕ, ನೈತಿಕ ಮತ್ತು ಗೀತೆಗಳನ್ನು ಸೂಕ್ಷ್ಮವಾದ ವಾಸ್ತವ ಪ್ರಜ್ಞೆಯನ್ನು ತಿಳಿಸುವವರಾಗಿದ್ದಾರೆ ಎಂದು ಹೇಳಿದರೆ ತಪ್ಪಾಗಲಾರದು.

**ಅಡಿಟಿಪ್ಪಣಿಗಳು**

೧. ನಿಂಗಣ್ಣ ಸಣ್ಣಕ್ಕಿ ಗೊಂದಲಿಗರ ಸಂಸ್ಕೃತಿ, ೧೯೯೩, ಪುಟ, ಸಂ. ೧೪.
೨. ಅದೇ ಪುಟ ಸಂ. ೧೬.
೩. ಅದೇ ಪುಟ ಸಂ. ೧೧.
೪. ಅದೇ ಪುಟ ಸಂ. ೧೪.
೫. ಅದೇ ಪುಟ ಸಂ. ೧೬.
೬. ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩, ಪುಟ ಸಂ.೨೨, ೨೩.
೭. ಅದೇ ಪುಟ ಸಂ. ೨೮.
೮. ಸತ್ಯನಾಯಕ ಎ.ಎಂ, ಉತ್ತರ ಕರ್ನಾಟಕ ಮದುವೆ ಸಂಪ್ರದಾಯಗಳು, ಪುಟಸಂ.೨೦.
೯. ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩, ಪುಟ ೨೩.
೧೦. ಅದೇ ಪುಟ ಸಂ. ೨೭.
೧೧. ಅದೇ ಪುಟ ಸಂ. ೩೪.
೧೨. ಗಂಗಾಧರ ದೈವಜ್ಞ, ಗೊಂದಲಿಗರು ,೨೦೧೦, ಪುಟ ಸಂ. ೨೮, ೨೯.
೧೩. ಚಂದ್ರಕಾಂತ ಪೊಕಳೆ, ತುಳಜಾಭವಾನಿ ,೨೦೦೮ , ಪುಟ ಸಂ. ೨೪೨.
೧೪. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩, ಪುಟ ಸಂ. ೪೮.
೧೫. ಅದೇ ಪುಟ ಸಂ. ೮೨.
೧೬. ಅದೇ ಪುಟ ಸಂ. ೮೩.

೧೭. ಗಂಗಾಧರ ದೈವಜ್ಞ, ಗೊಂದಲಿಗರು, ೨೦೧೦, ಪುಟ ಸಂ. ೬೪.

೧೮. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ೧೯೭೯, ಪುಟ ಸಂ.೭೮.

೧೯. ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರು ಒಂದು ಅಧ್ಯಯನ, ೧೯೮೨, ಪುಟ. ಸಂ. ೧೦.

೨೦. ಅದೇ ಪುಟ ಸಂ. ೨೦.

೨೧. ಮುದೇನೂರ ಸಂಗಣ್ಣ ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩, ಪುಟ ಸಂ.೩೧.

೨೨. ಅದೇ ಪುಟ ಸಂ. ೧೭.

೨೩. ಅದೇ ಪುಟ ಸಂ. ೨೧.

೨೪. ನಿಂಗಣ್ಣ ಸಣ್ಣಕ್ಕಿ, ಕರ್ನಾಟಕ ಗೊಂದಲಿಗರು ಹಾಗೂ ಅವರ ಸಾಹಿತ್ಯ, ಮಹಾಪ್ರಬಂಧ, ೧೯೮೨, ಪುಟ ಸಂ.೬೨೨.

# ಅಧ್ಯಾಯ ೪

# ಗೊಂದಲಿಗರ ಕಥನಗಳು : ವಸ್ತು ವಿನ್ಯಾಸ ಮತ್ತು ವಿವೇಚನೆ

## ೪.೧ ಪೀಠಿಕೆ

ಗೊಂದಲಿಗರ ಕಥನ ಶೈಲಿ ಮತ್ತು ಕಥನ ಶಿಲ್ಪ ಒಂದೇ ಮಾದರಿಯಾಗಿರುವುದು ಕಂಡು ಬರುತ್ತದೆ. ಗೊಂದಲಿಗರ ಕಥನ ಪರಂಪರೆಯೂ ಮೂಲದಲ್ಲಿ ಒಂದೇ ನಿಟ್ಟಿನಿಂದ ಹುಟ್ಟಿಕೊಂಡು ಸಾಗಿ ಬಂದಿದೆ. ಜನಪದ ಕಥೆಗಳನ್ನು ಗ್ರಂಥರೂಪದಲ್ಲಿ ಬರೆದು ಶಿಷ್ಟ ಸ್ವರೂಪಕ್ಕೆ ತಂದುದನ್ನು ಭಾರತೀಯ ಸಾಹಿತ್ಯದಲ್ಲಿ ಕಾಣುತ್ತೇವೆ. ವಸುಭಾಗ ಭಟ್ಟನಾಗಲಿ, ವಿಷ್ಣುಶರ್ಮನಾಗಲಿ ಕಥೆಗಳನ್ನು ಬರೆಯುವಾಗ ಪೂರ್ವದಲ್ಲಿ ಅವುಗಳನ್ನು ತಲೆಮಾರಿನಿಂದ ತಲೆಮಾರಿಗೆ ಅಸಂಖ್ಯ ಜನರು ಹೇಳುತ್ತಾ ಬಂದಿದ್ದು ಜನಸಾಮಾನ್ಯರ ನಾಲಿಗೆ ಮೇಲೆ ಅವು ಸಹಜವಾಗಿ ಪ್ರಚಲಿತವಾಗಿರಬೇಕು. ಇಂಥಹ ಕಥಾ ಸಾಮಗ್ರಿಗೆ ವಿಶಿಷ್ಟ ರೂಪ ಕೊಟ್ಟವರು ವಸುಭಾಗಭಟ್ಟ ಮತ್ತು ವಿಷ್ಣುಶರ್ಮ. ಇಂತಹ ಗ್ರಂಥ ರಚನೆಗಾರರ ಕೈಯಲ್ಲಿ ಶ್ರೇಷ್ಠ ಸಾಹಿತ್ಯದ ಒಂದು ಸೃಷ್ಟಿಗೆ ಸಾಕ್ಷಿಯಾಗಿ ನಿಂತಿದೆ. ಜನಪದ ಸಾಹಿತ್ಯದಲ್ಲಿ ಸುಪ್ರಸಿದ್ದವಾಗಿರುವ ಜನಪದ ಮೂಲದ್ದೆಂದು ನಂಬಲಾಗಿರುವ "ಗೋವಿನ ಹಾಡು" ಬದುಕಿನಲ್ಲಿ ಸತ್ಯದ ಸ್ಥಾನವನ್ನು ಸಮರ್ಥವಾಗಿ ಚಿತ್ರಿಸುವ ಕಥೆಯಾಗಿದೆ. ಅಲ್ಲಿ ಹುಲಿಯ ಕೈಗೆ ಸಿಕ್ಕ ಹಸು ತನ್ನ ಮಗುವಿಗೆ ಹಾಲುಣಿಸಿ ಬರುವೆನೆಂದು ಕಾತರಿಸುತ್ತದೆ. ತಪ್ಪಿಸಿಕೊಳ್ಳುವ ಯಾವ ಆಟವು ಇದರಲ್ಲಿ ಇಲ್ಲ. ತನ್ನ ಮಾತೃತ್ವದ ಋಣವನ್ನು ಕರ್ತವ್ಯವನ್ನು ಪೂರ್ಣಗೊಳಿಸುವ ಸಲುವಾಗಿ ತನ್ನ ಕಂದನ ನೆನಪಾಗಿ ಕರುವನ್ನು ಕಾಣಲು ಬರುವುದು. ಸತ್ಯವೇ ನನ್ನ ತಂದೆ, ಸತ್ಯವೇ ನನ್ನ ತಾಯಿ ಎಂದು ಪ್ರಮಾಣ ಮಾಡಿ ಹುಲಿಯನ್ನು ನಂಬಿಸಿ ತನ್ನ ಮಗುವಿಗೆ ಹಾಲುಣಿಸಿ ಬಂದು, ಇದೋ ನಿನ್ನ ಆಹುತಿಗೆ ಸಿದ್ದವಾಗಿದ್ದೇನೆ ಎಂದಾಗ ಅನಿರೀಕ್ಷಿತವಾದ ಈ ನಡುವಳಿಕೆ ಹಾಗೂ ಸತ್ಯತೆಯನ್ನು ಕಂಡು ಹುಲಿ ತನ್ನ ಪ್ರಾಣವನ್ನು ತೊರೆಯುತ್ತದೆ. ಆಡಿದ ಮಾತಿಗೆ ತಪ್ಪದ ಅಂಥ ಪ್ರಸಂಗವೊಂದು ಗೊಂದಲಿಗರ ಸಾಹಿತ್ಯದಲ್ಲಿಯೂ ಲಭ್ಯವಾಗುತ್ತದೆ. ಗೊಂದಲಿಗರ ಉಪಕಥೆಯಾದ 'ಅಮೃತ ಮಾವಿನ ಗಿಡ' ಕಥೆಯಲ್ಲಿ ನೂರು ಮುದಿ ವಯಸ್ಸಿನ ಗಿಳಿಗಳು

ಗುಂಪಾಗಿ ಎಲ್ಲಿಗೋ ಹೊರಟಿರುತ್ತ ಅರಸನೊಬ್ಬನ ಪಂಜರದಲ್ಲಿ ಬಂದಿಯಾಗಿದ್ದ ಗಿಳಿಯೊಂದು ಆ ಗುಂಪನ್ನು ನೋಡುತ್ತದೆ. ಎಲ್ಲಿಗೆ ಯಾಕೆ ಇತ್ಯಾದಿಗಳನ್ನೆಲ್ಲ ವಿಚಾರಿಸಿದಾಗ ಈ ಗಿಳಿಗೂ ಆಸೆ ಚಿಗುರೊಡೆಯುತ್ತದೆ. ಆಗ ಅರಸನಿಗೆ ಗಿಳಿಯು ಹೇಳುತ್ತದೆ. ಸ್ವಾಮಿ, ಏಳು ಸಮುದ್ರದ ದಂಡೆಯಲ್ಲಿ ಅಮೃತ ಮಾವಿನ ಗಿಡ ಇದೆಯಂತೆ, ಈ ನೂರು ಗಿಳಿಗಳೂ ಅದರ ಹಣ್ಣನ್ನು ತಿನ್ನಲು ಹೋಗುತ್ತಿವೆ. ಅವರ ಜೊತೆ ನಾನು ಹೋಗುತ್ತೇನೆ. ಪುನ: ಬರುತ್ತೇನೆ. ಆಗ ಅರಸ ಪಂಜರದ ಬಾಯಿ ತೆಗೆದು ಗಿಳಿಯನ್ನು ಬಿಡುತ್ತಾನೆ. ಆ ನೂರು ಗಿಳಿಗಳೊಂದಿಗೆ ಈ ಗಿಳಿಯೂ ಕೂಡಿಕೊಂಡು ಏಳು ಸಮುದ್ರದ ದಂಡೆಗೆ ಬಂದು ಆ ಮಾವಿನ ಗಿಡದ ಮೇಲೆ ಕುಳಿತವು. ಆಗ ಅವು ಒಂದೊಂದು ಕಾಯಿ ತಿಂದು ಮೈ ಝಾಡಿಸುತ್ತಿದ್ದವು. ಮೈ ಝಾಡಿಸಿದ ಕೂಡಲೆ ಮುದುಕತನ ಹೋಗಿ ಹರೆಯ ಗಿಳಿಗಳಾಗುತ್ತವೆ. ಅರಸನ ಗಿಳಿ ಅದನ್ನೆಲ್ಲ ನೋಡಿತು. ತಾನೂ ಒಂದು ಕಾಯಿ ತಿಂದು ಮೈ ಝಾಡಿಸಿ ಅದು ಹರೆಯದ್ದಾಯಿತು. ನಾನೇನೋ ಹರೆಯವನಾದೆ ಅರಸ ಮುದುಕ ಇದ್ದಾನೆ. ಅರಸನಿಗೊಂದು ಕಾಯಿ ಒಯ್ಯಬೇಕು. ಎಂದು ಮನಸ್ಸಿನಲ್ಲಿಯೇ ಅಂದುಕೊಂಡು ಬಾಯಲ್ಲಿ ಒಂದು ಕಾಯಿ ಹಿಡಿಯಿತು. ಎಲ್ಲಾ ಗಿಳಿಗಳು ಜಾಗ ಬಿಟ್ಟುವು ಅರಸನ ಊರಿಗೆ ಬಂದುವು. ನೂರು ಗಿಳಿಗಳು ಮುಂದಕ್ಕೆ ಹೋಗಿಬಿಟ್ಟುವು. ಈ ಗಿಳಿ ಅರಸನ ಬಳಿ ಬಂತು. ಹರೆಯದವನಾಗಿದ್ದೀಯೆನಪ್ಪಾ? ಎಂದು ಅರಸ ಕೇಳಿದ ಹೌದ್ರೀ, ಹರೆಯದವನಾಗಿದ್ದೇನೆ. ಬಾಯಿಯಲ್ಲಿ ಏನು ಹಿಡಿದಿದ್ದಿ? ಇದು ನಿಮಗೋಸ್ಕರ ತಂದಿದ್ದೇನೆ. ನೀವು ತಿನ್ನಿರಿ ನೀವು ಹರೆಯದವರಾಗುತ್ತೀರಿ. ನಾವು ನೀವು ಕೂಡಿ ಮತ್ತೆ ಮುಂದೆ ಬಹಳ ದಿವಸ ರಾಜಕೀಯ ಮಾಡೋಣ ಎಂದು ಗಿಳಿ ಹೇಳಿತು. ಅರಸ ವಿಚಾರ ಮಾಡುತ್ತಾನೆ. ಅನಾಯಾಸವಾಗಿ ಅಮೃತದ ಕಾಯಿಯನ್ನು ತಂದಿದೆ. ನಾನು ತಿಂದರೆ ನಾನೊಬ್ಬನೇ ಹರೆಯದವನಾಗುತ್ತೇನೆ. ಊರಿನಲ್ಲಿ ಬಹಳ ಮಂದಿ ಮುದುಕರಿದ್ದಾರೆ. ಈ ಕಾಯಿ ಒಯ್ದು ತೋಟದಲ್ಲಿ ಹುಗಿಯಬೇಕು. ಅದಕ್ಕೆ ನೀರು ಹಾಕಬೇಕು ಗಿಡ ಹುಟ್ಟುತ್ತದೆ. ಕಾಯಿ ಆಗುತ್ತವೆ. ಕಾಯಿಯನ್ನು ಒಯ್ದು ಊರಿನಲ್ಲಿ ಎಷ್ಟು ಮಂದಿ ಮುದುಕರಿದ್ದರೋ ಅಷ್ಟು ಮಂದಿಗೂ ಕೊಟ್ಟರೆ ಅಷ್ಟೂ ಮಂದಿ ಹರೆಯದವರಾಗುತ್ತಾರೆ. ಈ ಕಥಾ ಭಾಗದ ಉದ್ದಕ್ಕೂ ಒಂದು ಬಗೆಯ ವಿಶಾಲ ಮನೋಭಾವ ನಂಬಿಕೆ, ಪರೋಪಕಾರ ಬುದ್ಧಿ ಕಂಡು ಬರುತ್ತವೆ. ಜನಪದ ಸಾಹಿತ್ಯಕ್ಕೂ ಜನಪದ ಬದುಕಿಗೂ ಅವಿನಾಭಾವ ಸಂಬಂಧವಿರುತ್ತದೆಯೆಂದು ನಂಬುವುದಾದರೆ ಇದೊಂದು ಅತ್ಯಂತ ಆದರ್ಶಮಯ ಚಿತ್ರಣವಾಗುತ್ತದೆ. ತನ್ನ ಸುಖಕ್ಕೋಸ್ಕರ ಅಥವಾ ಮನಸಂತೋಷಕ್ಕೊಸ್ಕರ. ಹೆಚ್ಚೆಂದರೆ ತನ್ನ ಕೌರ್‍ಯದ ಪ್ರತೀಕಕ್ಕೋಸ್ಕರ, ಬಂದಿಯಾಗಿ ತನ್ನ ಮಾತಿಗೆ ಅಲ್ಲಿನ ಅರಸ ಮತ್ತು ಗಿಳಿಯ ಸಂಬಂಧವನ್ನು ಉಲ್ಲೇಖಿಸಬಹುದು. ಕೈಗೊಂಡ ಕೆಲಸ ಪೂರೈಸಿದ ಕೂಡಲೆ ಗಿಳಿ ಪ್ರಾಮಾಣಿಕವಾಗಿ ಹಿಂತಿರುಗುವುದರಲ್ಲಿದೆ. ತಾನು ಪಡೆದುದು ತನ್ನೊಡೆಯನಿಗೂ ದಕ್ಕಲಿ ಎಂಬ ಗಿಳಿಯ ಅಭಿಮಾನದ ಹಿನ್ನೆಲೆಯನ್ನು ಇಲ್ಲಿ ತೀವ್ರವಾಗಿ ಪರಿಗಣಿಸಬೇಕಾಗುತ್ತದೆ. ಹೀಗೆ ಅನೇಕ ರೀತಿಯ ಮಾನವೀಯ ಮೌಲ್ಯಗಳನ್ನು ಒಳಗೊಂಡ

ಕಥಾಸಾರವನ್ನು ಜನರ ಮನಸ್ಸಿಗೆ ಮುಟ್ಟುವಂತೆ ಗೊಂದಲಿಗರು ಹೇಳುತ್ತಾರೆ. ಇವರ ಕಥೆಗಳು ಮನುಷ್ಯ, ಪ್ರಾಣಿ ಪಕ್ಷಿಗಳು, ಪರಿಸರ ಈ ಮೂರು ತ್ರಿಕೋನಗಳ ನಡುವೆಯೇ ಹೊಂದಿಕೊಂಡಿವೆ. ಇವರು ತಮ್ಮ ಬದುಕಿನ ಜೊತೆ ಜೊತೆಗೆ ಕಥೆಗಳನ್ನು ಹೆಣೆದುಕೊಂಡಿದ್ದಾರೆ. ತಾವೇ ರಚಿಸಿದ ಹಾಡುಗಳು ಕಥೆಗಳು ವೈಶಿಷ್ಟ್ಯತೆಯಿಂದ ಕೂಡಿವೆ. ಹಲವಾರು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡ ಸಮಾಜ ನೀತಿಪರವಾದ ನೈತಿಕ ಮೌಲ್ಯಗಳನ್ನು ಒಳಗೊಂಡ ಕಥೆಗಳನ್ನು ಹೇಳುತ್ತಾರೆ. ಇವರು ಇತಿಹಾಸದಲ್ಲಿ ಹುದುಗಿಹೋದ ಮಹತ್ವದ ಅಂಶಗಳನ್ನು ಹೊರಗೆಳೆಯುವ ಇತಿಹಾಸಕಾರರಾಗಿದ್ದಾರೆ.

### ೪.೨ ಕುಟುಂಬ ವ್ಯವಸ್ಥೆ

ಒಂದು ಕಾಲದಲ್ಲಿ ಗೊಂದಲಿಗರದ್ದು ಮಾತೃ ಪ್ರಧಾನ ವ್ಯವಸ್ಥೆಯ ಕುಟುಂಬವಾಗಿದ್ದುದು ಕಂಡು ಬರುತ್ತದೆ. ಇಂದು ಪಿತೃ ಪ್ರಧಾನ ವ್ಯವಸ್ಥೆಗೆ ವರ್ಗಾವಣೆಯಾಗಿದೆ. ಮೂಲತ: ದೈವಿ ಸಂಸ್ಕೃತಿಯ ಆರಾಧಕರಾದ ಇವರು ಶಕ್ತಿಯನ್ನು ಆರಾಧ್ಯ ದೈವವನ್ನಾಗಿ ಮಾಡಿಕೊಂಡು ಪೂಜಿಸುವವರಾಗಿದ್ದಾರೆ. ಮೊದಲು ಇಡೀ ಕುಟುಂಬದ ಜವಾಬ್ದಾರಿಯನ್ನು ಮಹಿಳೆಯರೇ ಹೊರುತ್ತಿದ್ದರು. ಇದಕ್ಕೆ ಗೊಂದಲಿಗರ ಮಹಿಳೆಯರು ಹೊರತಲ್ಲ. ಅರೇ ಅಲೆಮಾರಿ ಸಮುದಾಯದವರಾಗಿರುವುದರಿಂದ ಸಂಸಾರದ ನಿರ್ವಹಣೆಯ ಕಾರ್ಯವನ್ನು ಗೊಂದಲಿಗರ ಸ್ತ್ರೀಯರೇ ಮಾಡುತ್ತಿದ್ದರು.

### ೪.೨.೧ ಮಾತೃ ಪ್ರಧಾನ ಕುಟುಂಬ

"ಪ್ರಾಚೀನ ಕಾಲದಿಂದಲೂ ಪ್ರಾಚೀನ ಕರ್ನಾಟಕದಲ್ಲಿ ಗೊಂದಲಿಗರು ತಾಯಿಗೆ ಮನೆಯಲ್ಲಿ ಮಹತ್ವವನ್ನು ಕೊಟ್ಟ ಸಂಗತಿಗಳನ್ನು ತಿಳಿಸುತ್ತಾರೆ. ಅವರೇ ಹೇಳುವಂತೆ ಶಕ್ತಿ ರೂಪಳಾಗಿರುತ್ತಾಳೆ. ಕಾಪಾಡುವ ದೇವಿಯಾಗಿರುತ್ತಾಳೆ. 'ಮಾತೃದೇವೋಭವ'ಎಂಬ ಉಕ್ತಿಯನ್ನು ಇವರು ಎತ್ತಿ ಹೇಳುತ್ತಾರೆ. ಸಂಚಾರಿ ಸಮುದಾಯವಾದ ಈ ಗೊಂದಲಿಗರು ಮದುವೆಯಾದ ಮೇಲೆ ಗಂಡ ಹೆಂಡತಿ ಜೊತೆಯಾಗಿ ಅಲೆಯಬೇಕಾಗುತ್ತದೆ. ನೆಲೆಯಾಗಿ ಉಳಿದರೂ ಜೊತೆಯಾಗಿ ಹೆಂಡತಿಯು ಮಕ್ಕಳು ಮರಿಗಳನ್ನು, ಮುದುಕರನ್ನು ನೆಲೆಯೊಡನೆ ನಿಲ್ಲಿಸಿಕೊಳ್ಳಬೇಕಾಗುತ್ತದೆ. ಅಲ್ಲಿ ಜೋಪಾನ ಮಾಡುವ ತಾಯಿಯಾಗುತ್ತಾಳೆ. ಕುಟುಂಬ ನಿರ್ವಹಣೆಯ ಜವಾಬ್ದಾರಿ ಬಿದ್ದಮೇಲೆ ಭಾರ ತಾಳುವ ಶಕ್ತಿಯಾಗುತ್ತಾಳೆ. ಪಾಲನೆ, ಪೋಷಣೆ ಮಾಡುವ ತನ್ನ ಕುಟುಂಬದ ಜಗದಂಬೆಯಾಗುತ್ತಾಳೆ."[೧] ಹೆಣ್ಣನ್ನು ಪೂಜ್ಯ ಭಾವನೆಯಿಂದ ಕಾಣುವ ಕಾರಣದಿಂದಲೇ ಇವರ ಹಲವಾರು ಕಥೆಗಳು ಸ್ತ್ರೀಪ್ರಧಾನವಾದ ಕಥೆಗಳಾಗಿವೆ.

ಅನುಭವಿಯಾದ ಈ ತಾಯಿಯು ಹಲವು ಅನುಭವಗಳನ್ನು ತನ್ನ ಸಹ ಬಂಧುಗಳೊಂದಿಗೆ ಹಂಚಿಕೊಳ್ಳುತ್ತಾಳೆ. ಗಂಡು ಹಡೆದಾಗ ಮಾತ್ರ ಹಿಗ್ಗುತ್ತಾಳೆ. ಹೆಣ್ಣು ಹಡೆದಾಗ ಮಾತ್ರ

ಕುಗ್ಗುತ್ತಾಳೆ. ಏಕೆಂದರೆ ಹೆಣ್ಣು ಯಾವಾಗಲೂ ಪರರೊಡವೆ. ಪ್ರಾಚೀನ ಕರ್ನಾಟಕದಲ್ಲೂ ಹೆಣ್ಣು ಮಗಳೇ ಬೇಕು ಎಂದು ಶಕ್ತಿಯನ್ನು ಸ್ತುತಿಸಿ ಮಗಳನ್ನು ಪಡೆದ ಉದಾಹರಣೆಗಳು ಕಂಡು ಬರುವುದಿಲ್ಲ. ಗಂಡು ಸಂತಾನ ಬೇಕೆಂಬ ಬೇಡಿಕೆಗಳೆ ಬಹಳ. ಅನೇಕ ಕಥೆಗಳಲ್ಲಿಯೂ ಸಹ ಕಥೆಯ ನಾಯಕ ನಾಯಕಿಯರಿಗೆ ತಮಗೆ ಹುಟ್ಟುವ ಮಗು ಮಗನಾಗಿರಬೇಕೆಂಬ ಬೇಡಿಕೆಗಳೇ ಹೆಚ್ಚು. ಹೆಣ್ಣು ಮಗು ಬೇಡ ಎನ್ನುವುದಕ್ಕೆ ಹಲವಾರು ಕಾರಣಗಳಿರಬಹುದು. ಆ ಮಗು ಮದುವೆಯಾಗಿ ಬೇರೆ ಮನೆಗೆ ಹೋಗುವ ಪರಿಣಾಮ, ಪ್ರಸೂತಿಯಲ್ಲಿ ಅನ್ಯರನ್ನು ಆಶ್ರಯಿಸುವ ಬಗೆ ಅಥವಾ ವಿಧವೆಯಾಗುವ ಅಂಜಿಕೆ ಇವೇ ಎಲ್ಲ ಅನೇಕ ಮೂಲ ಕಾರಣ. ಹೆಣ್ಣು ಸಂತಾನ ಬೇಡವೆಂಬ ಅನಿಸಿಕೆ ತಾಯಿಯಾದವಳಿಗೆ ಅನ್ನಿಸದೇ ಇರದು. ಇದಕ್ಕೆ ಗೊಂದಲಿಗರ ಹೆಣ್ಣು ಮಕ್ಕಳು ಸಹ ಹೊರತಲ್ಲ. "ಗಂಡು ಮಗನೊಬ್ಬನೇ ಸಂಸಾರದ ಆಶಾಜ್ಯೋತಿ ಎಂದು ಪುತ್ರನಿದ್ದರೆ ಸ್ವರ್ಗ ಎಂಬ ಪರಂಪರೆಯೂ ಕಾರಣವಾಗಿರುತ್ತದೆ."[೨] ಜನಪದರ ಜೀವನ ದಲ್ಲಿಯೂ ಗರತಿಯರು ದೇವರಲ್ಲಿ ಬೇಡಿಕೊಳ್ಳುವುದು ಮಗನನ್ನೇ ಹೊರತು ಮಗಳನ್ನಲ್ಲ.

"ಅಂಗಿ ತೊಡುವ ಬಾಳ ಎಂದಿಗಾದಾನೆಂದು
ಕಂಡ ದೇವರಿಗೆ ಕೈಮುಗಿದೆ । ನನಬಾಳಾ
ಎಂದಿಗಾದಾನು ಮಹಾದೇವ"

ತಾಯಿಯಾದವಳಿಗೆ ಹುಟ್ಟಿದ ಮಕ್ಕಳಿಗೆ ಯಾವುದೇ ಸಮಸ್ಯೆ ಇಲ್ಲದೇ ಉಣ್ಣಲು ತಿನ್ನಲು ಕೊರತೆ ಕಾಣದೆ ಸಾಕುವ ಶಕ್ತಿಯನ್ನು ಹೊಂದಿದ್ದರು. ಬಹಳ ಮಕ್ಕಳ ಪಡೆಯಬೇಕೆಂಬ ಅಭಿಲಾಷೆ ಅವಳಲ್ಲಿ ಕಾಣುತ್ತೇವೆ.

"ಬಡತನ ನನಗಿರಲಿ ಬಹಳ ಮಕ್ಕಳಾಗಲಿ
ಮ್ಯಾಗ ಗುರುವಿನ ದಯವಿರಲಿ । ನನಗುರುವೆ
ಬಡತನ ಚಿಂತೆ ನಿನಗಿರಲಿ."

ಹೀಗೆ ಮಾತೃ ಪ್ರಧಾನ ಕುಟುಂಬದಲ್ಲಿ ತಾಯಿ ತನ್ನ ಎಲ್ಲ ಬಯಕೆ ಭಾವಗಳನ್ನು ತೋರಿಕೊಳ್ಳುವ ಜವಾಬ್ದಾರಿಯುತ ಹೆಣ್ಣಾಗಿ, ಶಕ್ತಿಯಾಗಿ ತೋರುತ್ತಾಳೆ.

**೪.೨.೨ ಪಿತೃ ಪ್ರಧಾನ ಕುಟುಂಬ**

ಕಾಲ ಕಳೆದಂತೆ ಬದಲಾವಣೆ ಹೊಂದುತ್ತ ಅರೇ ಅಲೆಮಾರಿಗಳಾದ ಗೊಂದಲಿಗರು ಒಂದು ಕಡೆ ನೆಲೆನಿಂತು ತಮ್ಮ ಮಕ್ಕಳ ವಿದ್ಯಾಭ್ಯಾಸದ ಕಡೆ ಗಮನಹರಿಸುವುದರ ಮೂಲಕ ಭದ್ರತೆಯನ್ನು ಕಂಡುಕೊಳ್ಳುತ್ತಿದ್ದಾರೆ. ಈ ಬದಲಾವಣೆ ಮೂಲಕ ಪಿತೃ ಪ್ರಧಾನವಾದ ಕುಟುಂಬಗಳನ್ನು ನಾವು ಇಂದು ಕಾಣುತ್ತಿದ್ದೇವೆ. ಇಡೀ ದಕ್ಷಿಣ ಭಾರತ ಮೂಲತ: ಮಾತೃ

ಮೂಲ ಕುಟುಂಬ ವರ್ಗಕ್ಕೆ ಸೇರಿದ್ದು ಎಂಬುದು ಹಲವಾರು ಅಧ್ಯಯನಗಳಿಂದ ತಿಳಿದು ಬರುತ್ತದೆ. ಏಕೆಂದರೆ ಗ್ರಾಮಗಳಲ್ಲಿ ಇರುವ ನೂರಾರು ಗ್ರಾಮದೇವತೆಯರು ಇದಕ್ಕೆ ಸಾಕ್ಷಿಯಾಗಿದ್ದಾರೆ. ಅಂದರೆ ಹೆಣ್ಣೆ ಮನೆಯ ಯಜಮಾನಿ. ಆದರೆ ಬರಬರುತ್ತಾ ಈ ಮೌಲ್ಯ ಶಿಥಿಲಗೊಂಡು ಪುರುಷ ಪ್ರಧಾನ ಸಮಾಜ ಅಸ್ತಿತ್ವಕ್ಕೆ ಬಂತು. ಇದಕ್ಕೆ ಸಮರ್ಥನೆ ಎಂಬಂತೆ 'ಹೆಣ್ಣು ಗಂಡನ ಮನೆಯಲ್ಲಿ ತೊತ್ತಿನಂತಾದರು ಇರಬೇಕು.' ಎಂಬ ಮೌಲ್ಯವನ್ನು ಸಾರುವ ನೂರಾರು ಜನಪದ ಕಾವ್ಯ, ಕಥೆಗಳು ಹುಟ್ಟಿಕೊಂಡವು. ಇವೆಲ್ಲ ಬಯಲು ಸೀಮೆಯ ಸೃಷ್ಟಿಯೆಂಬುದಾಗಿದೆ. ಹಲವಾರು ಕಥನ ಕಾವ್ಯಗಳಲ್ಲಿ ಮಾತೃ ಪ್ರಧಾನಿಕೆ ಹಾಗೂ ಪಿತೃ ಪ್ರಧಾನಿಕೆ ಕುಟುಂಬಗಳ ಪ್ರತಿಬಿಂಬಗಳು ನಮಗೆ ಕಂಡು ಬರುತ್ತವೆ. ಹೆಣ್ಣು ತನ್ನ ಗಂಡನಿಗೆ ಮತ್ತು ಅತ್ತೆ ಮಾವಂದಿರಿಗೆ ಅಡಿಯಾಳಾಗಿ ಇರುವುದು ಯಾವಾಗಲೂ ಒಂದು ಸಾರ್ವತ್ರಿಕ ಮೌಲ್ಯವಾಗಿ ಕಂಡು ಬರುತ್ತದೆ. ಮಾವನಾದವನು ತನ್ನ ಊರಿನ ಹಿತಕ್ಕಾಗಿ ಕೆರೆಯೊಂದನ್ನು ಕಟ್ಟಿಸುತ್ತಾನೆ. ಆದರೆ ಕೆರೆಗೆ ನೀರೇ ಬರುವುದಿಲ್ಲ. ಚಿಂತೆಯನ್ನು ಮಾಡುವ ಮಾವ ಶಾಸ್ತ್ರ ಕೇಳಲಾಗಿ ಅವನ ಸೊಸೆಯಾದ ಭಾಗೀರಥಿಯನ್ನು ಹಾರ ಕೊಡಲು ಕೆರೆ ತುಂಬುತ್ತದೆ ಎಂದು ಹೇಳಲಾಗುತ್ತದೆ. ಇದನ್ನು ತಿಳಿದ ಭಾಗೀರಥಿ ತನ್ನ ದು:ಖ ತೋಡಿಕೊಳ್ಳುವುದಕ್ಕಾಗಿ ತವರಿಗೆ ಹೋಗುತ್ತಾಳೆ. ಹಾಗೇ ಅಣ್ಣ ತಮ್ಮ ಹಾಗೂ ಗೆಳತಿಯರನ್ನು ಕಾಣುತ್ತಾಳೆ. ಆದರೆ ಅವರೆಲ್ಲರೂ ತನ್ನ ಗಂಡನ ಮನೆಯ ಮರ್ಯಾದೆಗಾಗಿ ಮತ್ತು ನಾಡಿನ ಸುಖ ಸಮೃದ್ಧಿಗಾಗಿ ಆಹುತಿಯಾಗುವುದೇ ಒಳ್ಳೆಯದೆಂದು ಹೇಳಿ 'ಅವರು ಇಟ್ಟಾಂಗ ಇರಬೇಕು' ಎಂಬ ಬುದ್ದಿವಾದ ಹೇಳಿ ಕಳುಹಿಸುತ್ತಾರೆ. ಅನಿವಾರ್ಯವಾಗಿ ಅವಳು ಕೆರೆಗೆ ಹಾರವಾಗುತ್ತಾಳೆ. ಇದು ಕನ್ನಡದ ಸುಪ್ರಸಿದ್ಧ ಜನಪದ ಕಥನ ಗೀತೆಯಾಗಿದೆ. ಇಂತಹ ಕಥನ ಗೀತೆಗಳು ಹೆಣ್ಣಿನ ಸಾಮಾಜಿಕ ನೆಲೆ, ಕೌಟಂಬಿಕ ನೆಲೆಗಳನ್ನು ಪ್ರತಿಬಿಂಬಿಸುತ್ತದೆ. "ಇದಕ್ಕೆ ತದ್ವಿರುದ್ದವಾದ ಕಥನಗಳು ನಮಗೆ ಬುಡಕಟ್ಟು ಸಮುದಾಯಗಳಲ್ಲಿ ಸಿಗುತ್ತವೆ. ಸಮಾಜದ ಕಟ್ಟು ಪಾಡುಗಳನ್ನು ಮೀರಿ ನಿಲ್ಲುವ ಅನುಮಾನಿತ ಪತಿಯ ಮಾತನ್ನೇ ಧಿಕ್ಕರಿಸಿ ಸ್ವಾಭಿಮಾನದಿಂದ ಸಂಬಂಧವನ್ನು ತ್ಯಜಿಸಿ ಹೋಗುವ ದಿಟ್ಟ ಹೆಣ್ಣು ಸಂಕಮ್ಮನನ್ನು ನಾವು ಸೋಲಿಗೆ ಬುಡಕಟ್ಟು ಜನರ 'ಮಲೆಮಾದೇಶ್ವರ' ಮಹಾಕಾವ್ಯದಲ್ಲಿ ಕಾಣುತ್ತೇವೆ. 'ಅವಳಿಗೆ ಮಕ್ಕಳ ಹಂಬಲವಿದೆ. ಅದು ತನ್ನ ಗಂಡನಿಂದ ಸಾಧ್ಯವಿಲ್ಲವೆಂಬುದು ಗೊತ್ತಾಗಿದೆ. ಅವಳ ಪಾತಿವ್ರತ್ಯಕ್ಕಿಂತ ಅವಳಿಗೆ ಮಕ್ಕಳ ಫಲವೇ ಮುಖ್ಯವಾಗಿದೆ. ಅವಳು ಅಂಥಹ ಒಂದು ಕ್ರಾಂತಿಗೆ ಸಿದ್ದಳಾಗುತ್ತಾಳೆ.'"[3] ಶೀಲ, ಪತಿಭಕ್ತಿ, ಪಾತಿವೃತ್ಯದ, ಸಾಂಪ್ರದಾಯಕ ನೀತಿಸಂಹಿತೆಯ ಮೌಲ್ಯದಲ್ಲಿ ಮಹಿಳೆಯನ್ನು ಕಟ್ಟಿಹಾಕುವುದು ಸಾಧ್ಯವಾಗದು. ಅದು ಆತ್ಮವಂಚನೆಯೇ ಹೊರತು ಧರ್ಮವಲ್ಲ,

'ಗಂಡನ ಹಿತುವೇನು ಕೆಂಡದ ತಂಪೇನು
ಕೊಂಡ ಮಜ್ಜಿಗಿ ರುಚಿಯೇನು, ಎಲೆಗಿಳಿಯೇ
ಬಂಡ ಬದುಕಿ ಫಲವೇನು.'[4]

ಎಂಬಂತೆ ಕೆಂಡದ ತಂಪಿನ ಭಂಡ ಬದುಕನ್ನು ಅಷ್ಟೇ ದಿಟ್ಟತನದಿಂದ ನಿರಾಕರಿಸಬಲ್ಲಳು. ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ವೈವಾಹಿಕ ಸಂಬಂಧಕ್ಕಿಂತ ರಕ್ತ ಸಂಬಂಧಗಳ ನಡುವಣ ಬಾಂಧವ್ಯ ಹೆಚ್ಚು ಆಪ್ತವಾದುದು. ಹೀಗಾಗಿ ಅತ್ತೆ-ಸೊಸೆ, ಅತ್ತೆಗೆ- ನಾದಿನಿ, ಗಂಡ-ಹೆಂಡತಿ ನಡುವಣ ಸಂಬಂಧಗಳು ಆತ್ಮೀಯವಾಗದೆ ಇದ್ದಾಗ ಅಂತಹ ಸಂಬಂಧವನ್ನು ಮುರಿದು ಹೊಸ ಬದುಕನ್ನು ಪಡೆಯುವ ಸ್ವಾತಂತ್ರ್ಯ ಈ ಹೆಣ್ಣಿಗಿದೆ.

**೪.೩ ಗೊಂದಲಿಗರ ಕಥನಗಳಲ್ಲಿ ಸ್ತ್ರೀ**

ಜನಪದದ ಹಲವಾರು ಕಥನ ಗೀತೆಗಳಲ್ಲಿ ಸ್ತ್ರೀ ಪ್ರಾಧಾನ್ಯತೆ ಹೊಂದಿದ ಅನುಭವಿಯ ಪದಗಳನ್ನು, ಕಥೆಗಳನ್ನು ಕಾಣುತ್ತೇವೆ. ಇಲ್ಲಿ ಕಾಣುವ ಸ್ತ್ರೀ ಅಥವಾ ನಾಯಕಿ ತನ್ನ ಸುತ್ತಲಿನ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಕಾರಣಗಳ ಪ್ರತಿಬಿಂಬವಾಗಿ ಕಾಣುತ್ತಾಳೆ. ಹೆಚ್ಚಾಗಿ ಕಥನ ಗೀತೆಗಳು ಸ್ತ್ರೀಯ ದುರ್ಬಲ ಮನೋಧರ್ಮವನ್ನು ಎತ್ತಿತೋರಿಸುವ ಅಥವಾ ಅವಳು ದುರ್ಬಲವಾಗುವಂತೆ ಮಾಡಿ ಅದಕ್ಕೊಂದು ತ್ಯಾಗದ ಮನೋಭಾವದ ಪರದೆಯನ್ನು ಕಟ್ಟುವ ಸಮಾಜದ ಚೌಕಟ್ಟನ್ನು ಎತ್ತಿತೋರಿಸುವ ಕಥನಗಳಾಗಿವೆ. ಇನ್ನೂ ಕೆಲವು ಕಥನಗಳು ಎಲ್ಲ ಸಂಪ್ರದಾಯಿಕ ಚೌಕಟನ್ನು ಮೀರಿ ತನ್ನ ವೀರತನವನ್ನು ತೋರಿಸುವ ಸ್ತ್ರೀ ಹೆಣ್ಣಿನ ಕಥನ ಗೀತೆಗಳನ್ನು ಕಾಣುತ್ತೇವೆ. ಅವಳ ಸಹನೆ ಎಲ್ಲೇ ಮೀರಿದಾಗ ಅವಳ ತಾಳ್ಮೆಯ ಕಟ್ಟೆ ಒಡೆದಾಗ ಅವಳು ಮೌನ ಮುರಿದು ರುದ್ರಿಯಾಗುವ ಪ್ರಸಂಗಗಳು ಈ ಕಥನಗಳಲ್ಲಿ ಕಾಣುತ್ತೇವೆ.

"ಸಹಜ ಹಾಗೂ ಪಾವಿತ್ರ್ಯದ ಅಚ್ಚಿನೊಳಗೆ ಹೆಣ್ಣನ್ನು ಎರಕ ಹೊಯ್ಯಲಾಗಿದೆ. ಈ ಚೌಕಟ್ಟು ಹೆಣ್ಣಿನ ಸಂತಾನೊತ್ಪತ್ತಿ ಮತ್ತು ಸಂಗೋಪನೆಗಳನ್ನು ಆಕೆಯ ಅತ್ಯುತ್ಕೃಷ್ಟ ಅಂಶಗಳೆಂದು ಸ್ಥಿತಿಕರಿಸಿ ಹೆಣ್ಣನ್ನು ಅದಕ್ಕೆ ನಿಬದ್ಧಗೊಳಿಸುತ್ತದೆ. ಇಂತಹ ಪುರುಷ ಪರ ಯೋಚನೆಗಳು ಹೆಣ್ಣನ್ನು ಪ್ರಕೃತಿಯೊಂದಿಗೆ ಸಮೀಕರಿಸಿದೆ. ಹೆಣ್ಣು ಪ್ರಕೃತಿ ಎನ್ನುವ ಈ ನೆಲೆ ಪ್ರಕೃತಿಯ ಗುಣ ಧರ್ಮವನ್ನು ಹೆಣ್ಣಿಗೆ ಆರೋಪಿಸಿತು. ಆಸರೆ, ಸೃಷ್ಟಿ, ತ್ಯಾಗ, ಸಹನೆ, ಯಥಾಸ್ಥಿತಿಯ ಕಾಪಾಡುವಿಕೆ ಹೆಣ್ಣುತನವನ್ನು ಅಧಿಕೃತಗೊಳಿಸುವ ಮಾನ ದಂಡಗಳಾದವು. ಪ್ರಕೃತಿಯ ಬಗೆಗೆ ಪುರುಷನಿಗೆ ತೀವ್ರ ದ್ವಂದ್ವಭಾವಗಳಿವೆ. ಪ್ರಕೃತಿಯಲ್ಲಿಯೇ ಹುಟ್ಟಿ ಹಾಗೂ ಅಲ್ಲಿಯೇ ಸಾಯುತ್ತಾನೆ. ಇಂತಹ ಪ್ರಕೃತಿಯನ್ನು ಪುರುಷನ ಕಲ್ಪನೆಯಲ್ಲಿ ಸ್ತ್ರೀ ಪ್ರತಿನಿಧಿಸುತ್ತಾಳೆ."[೫]

ಪ್ರಕೃತಿಯೇ ಇಲ್ಲಿ ಹೆಣ್ಣಾಗಿ ತೋರಿ ಹೆಣ್ಣು ಸಹನಾಶೀಲಳಾಗಿ, ಮಮತೆಯ ಮಡಿಲಲ್ಲಿ ಪುರುಷನ ಚೈತನ್ಯ ಸ್ವರೂಪಳಾಗಿದ್ದಾಳೆ ಎನ್ನಬಹುದು. ಆದರೆ "ಹೆಣ್ಣಿನ ಕುರಿತ ಇಂತಹ ಮೂಲಭೂತ ಯೋಚನಾ ಕ್ರಮವನ್ನೇ ನಾವು ಪ್ರಶ್ನಿಸಬೇಕಾಗಿದೆ. ಇಂತಹ ಯೋಚನಾ ಕ್ರಮಗಳಿಗೆ ಮೂಲವಾಗಿರುವ ನಮ್ಮ ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಹಾಗೂ ಆರ್ಥಿಕ ಕಾರಣಗಳನ್ನು ನಾವು ಶೋಧಿಸಬೇಕಾಗಿದೆ. ಯಾಕೆಂದರೆ ಈ ಎಲ್ಲ ಯೋಚನಾ ಕ್ರಮಗಳನ್ನು

ಪ್ರಭಲ ಸಂಸ್ಕೃತಿ ರೂಪಿಸಿದೆ ಮತ್ತು ಆ ಪ್ರಭಲ ಸಂಸ್ಕೃತಿ ಅಷ್ಟೇ ಮಹತ್ವದ ಸ್ತ್ರೀ ಸಂಸ್ಕೃತಿಯನ್ನು ಅಲ್ಲಗಳೆದಿದೆ. ಈ ನಿರ್ಲಕ್ಷ್ಯ ಜನಸಂಸ್ಕೃತಿಯ ನೆಲೆಯಿಂದ ಒಟ್ಟು ಸಂಸ್ಕೃತಿಯನ್ನು ಪುನರ್ರಚಿಸಬೇಕಾಗಿದೆ."[೬] ಇಂತಹ ಜನಸಂಸ್ಕೃತಿಯ ನಡುವೆ ಹೆಣ್ಣು ತನ್ನ ಸ್ಥಾನ ಬದ್ಧತೆಯನ್ನು ಕಾಯ್ದುಕೊಳ್ಳಬೇಕಾಗಿದೆ.

"ನಮ್ಮ ಮುಂದಿರುವ ಇತಿಹಾಸವು ಬೇಟೆ, ಯುದ್ಧ ದಿಗ್ವಿಜಯ, ರಾಜ್ಯ ವಿಸ್ತರಣೆ, ಸೃಜನ ಪರಂಪರೆಯಂತಹ ಗಂಡಿನ ಯಶೋಗಾಥೆ ಹಾಗೂ ಅವರ ಅನುಭವಗಳನ್ನು ಮಹತ್ವೀಕರಿಸುವ ದಾಖಲೆಯೇ ಆಗಿದೆ. ಈ ನಿಲುವು ಗಂಡಿನ ಚಟುವಟಿಗಳನ್ನು ಮುಖ್ಯ ಎಂದು ಗ್ರಹಿಸುವುದರಿಂದ ಹೆಣ್ಣಿನ ಗರ್ಭಧಾರಣೆ, ತಾಯ್ತನ, ಸಂಗೋಪನ, ಲೈಂಗಿಕತೆಗಳಂತಹ ಚಟುವಟಿಕೆಗಳನ್ನು ಅಮುಖ್ಯವಾಗಿ ಕಂಡಿದೆ. ಅಥವಾ ತೀರಾ ಸಾಮಾನ್ಯ ಎಂದು ನಿರಾಕರಿಸಲಾಗಿದೆ. ಹೀಗೆ ಮರೆಯಾದ ಹೂಳಲಾದ ಮಹಿಳಾ ಮುಖವನ್ನು ಹೊರ ತೆಗೆದು ಹೆಣ್ಣಿನ ಚರಿತ್ರೆಯವನ್ನು ಕಟ್ಟಬೇಕಾಗಿದೆ."[೭] ಇಂತಹ ಹೆಣ್ತತನದ ಪ್ರಾಮುಖ್ಯತೆ ಹಾಗೂ ಅವಳ ನಿಲುವು ,ಅವಳ ಸಹಾನುಭೂತಿ, ಪ್ರೀತಿ, ತ್ಯಾಗ, ಮಮತೆ, ಧೈರ್ಯ, ಪತಿವೃತಾ ಧರ್ಮ, ಸಿಟ್ಟು, ಸೇಡು, ಕರ್ತವ್ಯ ಏನು ಎಂಬುದನ್ನು ತೋರಿಸುವಲ್ಲಿ ಗೊಂದಲಿಗರ ಕಥನಗಳು ಪ್ರಮುಖ ಪಾತ್ರವಹಿಸುತ್ತವೆ. ಮಹಾಸತಿ ಶಿವಲೋಚನ, ವಿಘ್ನಾವತಿ, ಪದ್ಮಾವತಿ, ಶೀಲಾವತಿ, ನೀಲಮ್ಮ ಹಲವಾರು ಸ್ತ್ರೀವಾದಿ ಕಥನಗಳ ಮೂಲಕ ಸಮಾಜವನ್ನು ಎಚ್ಚರಿಸುವ ಕಾರ್ಯವನ್ನು ಗೊಂದಲಿಗರು ಮಾಡುತ್ತಿದ್ದಾರೆ. ಸಮಾಜೋಭಿಮುಖವಾದ ಕಾರ್ಯವನ್ನು ಎಲೆಮರೆಯ ಕಾಯಿಯಂತೆ ಕಾರ್ಯವನ್ನು ಮಾಡುತ್ತಿದ್ದಾರೆ. ಅಂತಹ ಗೊಂದಲಿಗರ ಕಥನಗಳನ್ನು ಗೊಂದಲಿಗರನ್ನು ಸಮಾಜೋಮುಖವಾಗಿ ಅವರನ್ನು ಗುರುತಿಸುವುದು ಕರ್ತವ್ಯವಾಗಿದೆ.

### ೪.೪ ಜನಪದ ಕಥನಗಳಲ್ಲಿ ಸ್ತ್ರೀತ್ವ

ಜನಪದ ಕಥನಗಳ ಉತ್ಪಾದನೆಯಲ್ಲಿ ಮಹಿಳಾ ಪಾತ್ರ ಮುಖ್ಯವಾಗಿದೆ. ಹಲವಾರು ಅಧ್ಯಯನಗಳಂತೆ ಜನಪದ ಅಧ್ಯಯನವು ಸಹ ಪುರುಷ ದೃಷ್ಟಿಕೋನದ ಅರ್ಥೈಸುವಿಕೆ ಆಗಿದೆಯಾದರೂ ಇಂತಹ ಅಧ್ಯಯನಗಳಲ್ಲಿ ಸ್ತ್ರೀತ್ವವನ್ನು ಎತ್ತಿ ತೋರಿಸುವ ಕ್ರಿಯೇ ಭಿನ್ನವಾಗಿದೆ ಎನ್ನಬಹುದು. "ಈ ಪುರುಷಪರ ಅಧ್ಯಯನಗಳು ಮಹಿಳೆಯರು ಶೋಷಿತರು ದುರ್ಬಲರು ಎನ್ನುವ ನೇತ್ಯಾತ್ಮಿಕ ಚಿತ್ರಣವನ್ನು ನೀಡಿ ಅದು ವಿಶ್ವಾಸಾತ್ಮಕ ಸತ್ಯ ಎಂದು ನಂಬುವಂತೆ ಮಾಡಿವೆ. ಹೆಣ್ತನವನ್ನು ಸಾಧ್ವಿ, ತ್ಯಾಗಿ, ಪತಿವೃತೆ ಎಂದೋ ಅಥವಾ ದುಷ್ಟೆ, ಕಪಟೆ, ರಕ್ಕಸಿ ಎಂದೋ ಎರಡು ಅತಿರೇಕಗಳಲ್ಲಿ ನಿರ್ವಚಿಸಿದೆ. ಮಹಿಳಾ ಜಾನಪದ ಅಧ್ಯಯನ ಮಾಡುವಾಗಲೂ ಈ ವಿರೋಧಾಭಾಸ ಕಾಣಿಸಿಕೊಳ್ಳುತ್ತದೆ."[೮]

ಗೊಂದಲಿಗರು ಹೇಳುವ ಕಥೆಗಳು ಸಾಕಷ್ಟು ಸ್ತ್ರೀತ್ವವನ್ನು ಹೊಲುವ ಹಾಗೂ ತಿಳಿಸುವ ಕಥೆಗಳಾಗಿದ್ದರೂ ಕಥೆಗಳ ಒಳನೋಟವನ್ನು ನೋಡಿದಾಗ ಪುರುಷ ಕೇಂದ್ರಿತ ಸಮಾಜ

ನಮಗೆ ಕಂಡುಬರುತ್ತವೆ. ಮೌಖಿಕ ಪರಂಪರೆಯಿಂದಲೇ ಬಂದ ಇಂತಹ ಕಥನಗಳು ವೃತ್ತಿ ಕಲಾವಿದರ ಸಂರಚನೆಯಲ್ಲಿ ಅವು ಸಹಜವಾಗಿ  ಪುರುಷ ಕೇಂದ್ರಿತ ಸಮಾಜವನ್ನು ಈ ಕಥೆಗಳು ನಿರ್ಮಾಣ ಮಾಡಿವೆ. ಉದಾಹರಣೆ 'ಬಾಳಭಿಕ್ಷುಕ' ಕಥೆಯಲ್ಲಿ ಬಾಳಭಿಕ್ಷುಕನು ಮೂಲಾ ನಕ್ಷತ್ರದಲ್ಲಿ ಹುಟ್ಟಿದನು. ಹಾಗೂ ಆತನಿಂದ ರಾಜ ರಾಣಿಗೆ (ತಂದೆ-ತಾಯಿ) ಮರಣವಿದೆ ಎಂಬ ಕಾರಣದಿಂದ ಜೋಯಿಸರು ಹನ್ನೊಂದು ದಿನದ ಮಗುವಿನೊಂದಿಗೆ ಬಾಳ ಭಿಕ್ಷುಕನ ಲಗ್ನ ಮಾಡಬೇಕು ಎಂದು ಪರಿಹಾರವನ್ನು ಸೂಚಿಸುತ್ತಾರೆ.

"ಕ : ಇದಕ್ಕೆ ಪರಿಹಾರ ಎಂದ್ರೆ, ನಿಮ್ಮ ಮಗನ ಮದುವೆ ಮಾಡ್ಬೇಕು, ಅಂದ್ರ ಮಾತ್ರ ನಿಮ್ಮ ಮರಣ ದೋಷ ದೂರಾಗ್ತೈತಿ.

ಹಿ : ಓಹೋ ಲಗ್ನ. !

ಕ : ಹ್ಯಾಂಗ ಮಾಡ್ಬೇಕ್ರಿ, ಏನು ಎರಡು ವರ್ಷದ ಕೂಸು ಒಂದು ವರ್ಷದ ಮಗನೇ

ಹಿ : ಆಹಾ !

ಕ : ಹನ್ನೊಂದು ದಿವಸದ ಕೂಸಿಗೆ ಲಗ್ನ ಮಾಡ್ಬೇಕು-ಅಂತೀರಲ್ರಿ ಯಂಕಂಭಟ್ರೆ.

ಹಿ : ಕನ್ಯೆ ಎಷ್ಟ ವಯಸ್ಸಿಂದು ತರ್ಬೇಕು ?

ಕ : ಆಹಾ ಅದನ್ನು ಹೇಳ್ಬೇಕೇನ್ರಿ ನಿಮಗೆ ?

ಹಿ : ಹೌದು.

ಕ : ಐದು ದಿವಸದ ಕನ್ಯೆ ಹುಡಕ್ರಿ ಎಲ್ಲಿದ್ರೂ.-

ಕ : ಕೊನಿಗೆ ಎಂಟು ದಿವಸದ ಕನ್ಯಾ ತಗದು ಮದುವಿ ಮಾಡ್ರೀ : ಅಂದ್ರ ಮಾತ್ರ ನಿಮ್ಮ ಪಾಲಿನ ದೋಷ ನಿವಾರಣೆ ಆಗ್ತದೆ."[7]

ಎಂದು ಹೇಳಿದ ಯಂಕಂಭಟ್ರ ಮಾತು ಕೇಳಿದ ಮಂತ್ರಿ ರಾಜ ಮತ್ತು ನಾಲ್ಕು ದಿಕ್ಕಿನಲ್ಲಿ ಹೆಣ್ಣು ಶೋಧ ನಡೆಸಿ ಕೊನೆಗೆ ಮಂತ್ರಿಯ ಚಾಣಾಕ್ಷತನ ಹಾಗೂ ಮೋಸದಿಂದ  ಹನ್ನೆರಡು ವರ್ಷದ  ಪದ್ಮಾವತಿಯನ್ನು  ತಂದು ಮದುವೆ ಮಾಡಲಾಗುತ್ತದೆ.

ಇಲ್ಲಿ ಪುರೋಹಿತಶಾಯಿ ವರ್ಗದ ಅಡಿಯಲ್ಲಿ ಅಂದಿನ ರಾಜರು ರಾಜ್ಯದ ಆಗುಹೋಗುಗಳ ಬಗ್ಗೆ ಮತ್ತು ಪ್ರತಿಯೊಂದು ಧಾರ್ಮಿಕ ಕಾರ್ಯಗಳ ಬಗ್ಗೆ ಅವರ ಸಲಹೆ ಸೂಚನೆಗಳನ್ನೇ ನಂಬಿದ್ದರು. ಅದೇ ನಂಬಿಕೆಯನ್ನು ಈ ರಾಜನಲ್ಲಿಯೂ ಕಾಣುತ್ತೇವೆ. ಯಂಕಂಭಟ್ರ ಒಬ್ಬ ಪುರೋಹಿತನಾಗಿ ಇಲ್ಲಿ ಸಲಹೆ ನೀಡಿದ್ದಾನೆ. ಇದರಿಂದ ಗೊಂದಲಿಗರು ಅಂದಿನ ಸಾಮಾಜಿಕ, ಧಾರ್ಮಿಕ ನೆಲೆಯ ವಾಸ್ತವತೆ ಹೇಗಿತ್ತು ಎಂಬುದು ತಿಳಿದು ಬರುತ್ತದೆ. ಇಂತಹ ಪುರೋಹಿತಶಾಯಿ ವರ್ಗದ ಅಡಿಯಲ್ಲಿ ಪದ್ಮಾವತಿ ಒಬ್ಬ ಬಾಲೆ ಬಲಿಯಾಗಬೇಕಾಗುತ್ತದೆ.  ಮೂಲಾ ನಕ್ಷತ್ರ

ಎಂಬ ಮೂಢನಂಬಿಕೆಯ ಸಮಸ್ಯೆಯ ಪರಿಹಾರವಾಗಿ ಒಬ್ಬ ಸ್ತ್ರೀಯೇ ಆಹಾರವಾಗಿದ್ದಾಳೆ. 'ಮೂಲಾನಕ್ಷತ್ರ' – ನಕ್ಷತ್ರಗಳಲ್ಲಿ ಇದು ಒಂದು ಸಾಮಾನ್ಯ ನಕ್ಷತ್ರ. ಆದರೂ ಜನರ ದೃಷ್ಟಿಯಲ್ಲಿ ಇದೊಂದು ಕೆಟ್ಟ ನಕ್ಷತ್ರ ಅಪಾಯವನ್ನು ತರುವುದು ಎಂಬ ನಂಬಿಕೆ ಇದೆ. ಹೆಣ್ಣು ಸಮಾಜದ ಅನಿಷ್ಟ ಪದ್ಧತಿಗೆ ಕೊರಳೊಡ್ಡುವಾಗ ಅಲ್ಲಿಯ ಸಾಮಾಜಿಕ ಕಟ್ಟುಪಾಡುಗಳು, ಶಾಸ್ತ್ರ, ಸಂಪ್ರದಾಯಗಳು, ಮೂಢನಂಬಿಕೆಗಳು ಹೆಣ್ಣಿನ ನೋವನ್ನು ಹೆಚ್ಚಿಸುವ ಚಿತ್ರಣಗಳಾಗಿವೆ. ಧರ್ಮ, ಅಧಿಕಾರಶಾಹಿ ಮತ್ತು ಪುರೋಹಿತ–ಶಾಹಿಗಳು ತಾತ್ವಿಕ ಬೆಂಬಲ ನೀಡುವ ನೆಪದಲ್ಲಿ ಸಂಸ್ಕೃತಿಯನ್ನು ಪೋಷಿಸುವ ಕಾರ್ಯವನ್ನು ಮಾಡುತ್ತವೆ. ಈ ಕೆಳಗಿನ ಜನಪದ ಗೀತೆ ಯೊಂದರಲ್ಲಿ ನೊಂದ ಹೆಣ್ಣೊಂದರ ಕಣ್ಣಿರಿನ ಪರಿಣಾಮವನ್ನು ಕಾಣಬಹುದು.

"ಹೆಣ್ಣಿನಗೋಳಿಟ್ಟ ಬನ್ನಿಯ ಮರಬೆಂದೋ
ಅಲ್ಲಿ ಸನ್ಯಾಸಿ ಮಠಬೆಂದೋ ಹಾರಾವು
ಪಂಚಾಂಗ ಕತ್ತಿ ಉರಿದಾವೋ"[೧೦]

ಮತ್ತೊಂದು ಕಡೆ ಮುದೇನೂರ ಸಂಗಣ್ಣವರು ಸಂಪಾದಿಸಿದ ಗೊಂದಲಿಗರ 'ಸತ್ಯ ಶೀಲಾವತಿ' ಕಥೆಯಲ್ಲಿ ತನ್ನ ಗೆಳೆಯನ ಹೆಂಡತಿ ಎಂಬುದನ್ನು ಮರೆತು ಶೀಲಾವತಿಯನ್ನು ದುರ್ಜಯ ಬಯಸುತ್ತಾನೆ. ಅದಕ್ಕಾಗಿ ಅವನು ಹೊಂಚು ಹಾಕುತ್ತಿರುತ್ತಾನೆ. ಆ ಸಂದರ್ಭವು ಬಂದಾಗ ಅದನ್ನು ಉಪಯೋಗಿಸಿಕೊಂಡು ತನ್ನ ರಾಜನ ಮಡದಿ ಶೀಲಾವತಿಯನ್ನು ತವರು ಮನೆಯಿಂದ ಕರೆತರಲು ಸ್ವತ: ತಾನೇ ಹೋಗುತ್ತಾನೆ. ಬರುವಾಗ ದಾರಿಯನ್ನು ತಪ್ಪಿಸಿ ಅಡವಿಯಲ್ಲಿ ಕರೆದುಕೊಂಡು ಬಂದು ಸರಿರಾತ್ರಿ ಅಲ್ಲಿಯೇ ಎಲ್ಲರೂ ಬಿಡಾರ ಹೂಡುತ್ತಾರೆ.

"ಕ : ಈಗ ಮಧ್ಯರಾತ್ರಿ ಶೀಲಾವತಿಗೆ ಸ್ವಾಧೀನ ಮಾಡ್ಕೊಬೇಕು ಎಂದ ಚಾಂಡಾಲ, ಒಳ್ಳೇ ನಡುರಾತ್ರಿಗೆ ಆಕಿ ಡೇರಾಗ ಬಂದು ನೋಡ್ತಾನೆ. ಶಾಲು ಹೊಚ್ಚಿಕೊಂಡ ಮಲ್ಕೊಂಡಾಳೆ ಮಹಾಪತಿವೃತಾ ಶೀಲಾವತಿ! ಎದ್ದೇಳೀೀ. ಶೀಲಾವತೀೀ. ಎಂಥ ನಿದ್ರಿ ಮಾಡ್ತೀೀ. ಮಡದೀ

ಹಿ : ಅಂತಾ

ಕ : ಗದರಿಸಿ ಮಾತಾಡ್ಬೇಕಾದ್ರೆ ತಾಯಿಗೆ ಎಚ್ಚರಾಗೇತಿ .!

ಹಿ : ಆಹಾ !

ಕ : ದಿಗ್ಗನೇ ಎದ್ದು ಕುಳಿತು ನೋಡ್ತಾಳೆ ದುರ್ಜಯ ! ಮಂತ್ರಿ ಮಗ. !

ಕ : ಮಹಾರಾಣಿ ಇದ್ದ ಜಾಗದಲ್ಲಿ ಬರಬಾರ್ದು ನಡಿ –

ಕ : ಅಣ್ಣಾ ಅನ್ನಬಾರ್ದು ಈಗ, ಅಪ್ಪ ಅನ್ನ ಕೂಡ್ದು , ತಮ್ಮಾ ಅನ್ನಬಾರ್ದು ನಿನಗೆ ನಮ್ಮ ತಂದಿ ನಿಶ್ಚಯ ಮಾಡಾಕ ಬಂದಾಗ ನಿನ್ನ ಪೋಟೋ ನೋಡಿ ನಿನ್ನ ಮ್ಯಾಲೆ ಪ್ರೀತಿ

ಆತು. ನನ್ನ ಕೈವಾಸ ಆಗ್ಬೇಕು ನೀನು.'[೧೧] ಎಂದ ದುರ್ಜಯನು ಸಮಯ ಸಾಧಕನಾಗಿ ತನ್ನ ಬಯಕೆಯನ್ನು ಅವಳಿಗೆ ತಿಳಿಸುತ್ತಾನೆ. ಶೀಲಾವತಿ ಆ ಸಂದರ್ಭದ ಅರಿವಾಗಿ ಚಾಣಾಕ್ಷತನದಿಂದ ಅಲ್ಲಿಂದ ಪಾರಾಗಿ ಚಂಡಿಕಾ ಗುಡಿಯನ್ನು ಸೇರುತ್ತಾಳೆ.

ಇತ್ತ ದುರ್ಜಯನು ಅವಳನ್ನು ಹುಡುಕುತ್ತಾ ಚಂಡಿಕಾ ಗುಡಿ ಬಂದು ನೋಡುತ್ತಾನೆ. ಅಲ್ಲಿ ಒಳಗೆ ಕುಳಿತಿರುವುದನ್ನು ಕಂಡು ಬಾಗಿಲು ತೆಗೆ ಎಂದು ಹೇಳುತ್ತಾನೆ. ಆದರೆ ಅವಳು ಬಾಗಿಲನ್ನು ತೆಗೆಯದೇ ಮೌನವಾಗಿದ್ದಳು.

"ಕ : ಶೀಲಾವತೀ ಬರೋದಿಲ್ವೇ ? ನಿನ್ನ ಮಗನ್ನ ತರ್ತೀನಿ ನಿಲ್ಲು ಅಂದು ಓಡಿ ಬಂದ ದುರ್ಜಯ

ಹಿ : ಡೇರಿಯೊಳಗೆ ಐದು ತಿಂಗಳ ಕೂಸು ರತನ ರತನ ಇದ್ದಾಂಗ ಐತಿ. !

ಕ : ಗಂಡುಮಗ !. ತೊಗೊಂಡು ಬಂದ ಗುಡಿ ಮುಂದಕ ಅದನ್ನ !

ಹಿ : ಆಹಾ !

ಕ : ಶೀಲಾವತಿ ಹೊರಗಡಿಗೆ ಬರ್ತೀಯೋ ಏನು ನಿನ್ನ ಮಗನಿಗೆ ಕಡದು ಬಿಡ್ಲಾ ? ಅಂದ ಚಾಂಡಾಲ. !

ಹಿ : ದೇವಾ ಪರಮಾತ್ಮಾ !

ಕ : (ರಾಗವಾಗಿ) ಅವ್ವಾ ಮಗನಿಗೆ ಕಡೀತೀನಿ ಅಂತಾನ — ಹೊರಗ ಹೋದ್ರ. ಪತಿವೃತಾ ಧರ್ಮ ಹೋಗ್ತೈತಿ..—ಸತಿ-ಪತಿ ಜಲ್ಮ ತಣ್ಣಗಿದ್ದರೆ ಇಂಥ ಮಗನಿಗೆ ಹತ್ತು ಮಂದಿ ನೋಡೇನಂದ್ಲು.— ಆಯಮ್ಮ. !

ಹಿ : ಪತಿವ್ರತಾ ಹಾನಿಯಾದ ಮಾಲೆ ಮಗನ ಮುಖಾ ನೋಡ್ಬಾರ್ದು ಅಂದ್ಲು.

ಕ : ದುರ್ಜಯ ಕೇಳ್ತಾನೆ - ಹಾಗಾದರೆ ನೀನು ಬರೋದಿಲ್ವೇನೆ ?

ಹಿ : ಆಹಾ.

ಕ : ನೋಡು ಹಂಗಾದ್ರೆ, - ನನ್ನ ಏಟು" ಅಂದು ಬಿಚ್ಚುಗತ್ತಿ ತೊಗೊಂಡು ಬಿಸಿ ಮಗನಿಗೆ ಎರಡು ತುಂಡ ಮಾಡಿದಾ.

ಹಿ : ರುಂಡಾ ಮುಂಡಾ ಕಿಟಕಿ ಒಳಗ ಒಗೆದ."[೨]

ಶೀಲಗೆಟ್ಟು ತನ್ನ ಮಗನ ಮುಖ ನೋಡುವುದಕ್ಕಿಂತ ಪತಿವ್ರತಾ ಧರ್ಮವೇ ಮುಖ್ಯ ಎಂದು ಸಾರುವ ಶೀಲಾವತಿ ಸ್ತ್ರೀತ್ವಕ್ಕೆ ಮಾದರಿಯಾಗಿದ್ದಾಳೆ. ಅದರಂತೆ ತಾನು ಬಯಸಿದ್ದನ್ನು ಹೇಗಾದರೂ ಮಾಡಿ ಪಡೆಯಲೇಬೇಕು ಎಂಬ ಹಟದಿಂದ ಮುಗ್ಧ ಮಗುವನ್ನೇ ಬಲಿಕೊಡುವ ದುರ್ಜಯ ಒಬ್ಬ ಕೆಟ್ಟ ವ್ಯಕ್ತಿಯಾಗಿ ತೋರಿದ್ದಾನೆ. ಇಂತಹ ಕಥೆಗಳು ವಾಸ್ತವದ ಅರಿವನ್ನು ಮೂಡಿಸುವ ಸಮಾಜಕ್ಕೊಂದು ನಿದರ್ಶನಗಳಾಗಿವೆ.

ಗೊಂದಲಿಗರ ಆಟಗಳಲ್ಲಿ ಹೆಚ್ಚಾಗಿ ಸ್ತ್ರೀ ಪ್ರಾಧಾನ್ಯತೆ ಹೊಂದಿದ ಕಥೆಗಳನ್ನೇ ಕಾಣುತ್ತೇವೆ. ಅವರ ಕಥೆಗಳ ಶೀರ್ಷಿಕೆಯು ಸಹ ಸ್ತ್ರೀಯರ ಹೆಸರುಗಳನ್ನೇ ಸೂಚಿಸುತ್ತವೆ. ಶೋಷಣೆ, ತ್ಯಾಗ, ಸಾಹಸ ಮುಂತಾದ ಗುಣಗಳಲ್ಲಿ ಸ್ತ್ರೀ ಪಾತ್ರ ಮುಖ್ಯವಾಗಿದೆ. ಹಾಗೆ ನೋಡಿದರೆ ಸ್ತ್ರೀಯು ಕೌಟುಂಬಿಕ ಸಮಸ್ಯೆಯಾಗಿದ್ದಾಳೆ. ನಮ್ಮ ಭಾರತೀಯ ಸಮಾಜದಲ್ಲಿ ಸ್ತ್ರೀಗೆ ಉತ್ತಮ ಸ್ಥಾನವಿದ್ದರೂ ಸ್ವತಂತ್ರತೆ ಜೀವನ ಇದ್ದರೂ, ಅವಳನ್ನು ತಮ್ಮ ಕೆಲಸ ಪರಿಪೂರ್ಣವಾಗಲೂ ಅಥವಾ ದೋಷ ಪರಿಹಾರವಾಗಲೂ ಅವಳನ್ನು ಬಳಸಿಕೊಳ್ಳಲಾಗುತ್ತದೆ. ಗೊಂದಲಿಗರ ಕಥೆಗಳಲ್ಲಿ 'ಬಾಳಭಿಕ್ಷುಕ' ಕಥೆಯನ್ನು ನೋಡಿದಾಗ ತಿಳಿಯುತ್ತದೆ.

'ಮಹಾಸತಿ ಶಿವಲೋಚನಾ' ಕಥೆಯಲ್ಲಿ ನೀಲಕುಮಾರನು ಲೇಶಿಯಾದ (ವೇಶ್ಯೆ) ರಂಭಾವತಿ ಮನೆಯಲ್ಲಿದ್ದುದರಿಂದ ಅವಳಿಂದ ಅವನನ್ನು ಬಿಡುಗಡೆ ಮಾಡಲು ಮಂತ್ರಿಯು ರಂಭಾವತಿ ಗಿಂತಲೂ ಸುಂದರವಾದ ಹೆಣ್ಣನ್ನು ತೆಗೆದು ಲಗ್ನ ಮಾಡಲು ನಿಶ್ಚಯಿಸುತ್ತಾನೆ. ರುದ್ರಸೇಕ ಮಹಾರಾಜರಿಗೆ ನೀಲಕುಮಾರನ ಪೋಟೋ ತೋರಿಸಿ,

ಕ : ಕನ್ಯಾದಾನ ಮಹಾರಾಜ ಮಗನ ಪೋಟೋ ತಂದೀನಿ ಮಗನಿಗೆ ಪೋಟೋ ನೋಡಿ ನೀವು ಕನ್ಯೆ ಕೊಡ್ಬೇಕು.

ಹಿ : ಪೋಟೋ ತಂದೀವಿ, ನೀಲಕುಮಾರ ವರ.

ಕ : ವರನೋಡಿ ಕನ್ಯೆ ಕೊಡ್ಬೇಕು, ಕುದರಿ ನೋಡಿ ಬೆಲೆ ಮಾಡ್ಬೇಕು, ಆಳು ನೋಡಿ ಅನ್ನ ಇಡಬೇಕು ಅಂತ ಜಗತ್ತಿನಲ್ಲಿ ಸೃತಿ ಸಾರೈತಿ.

ಕ : ಯಾವಾಗ ವರ ನೋಡ್ತಿನಿ ಆವಾಗ ಮಗಳ ಕೊಡ್ತೀವಿ ಅಂದ.

ಹಿ : ತೊಗಳ್ರಿ ಇದೇ ವರ ಅಂದು ಪೋಟೋ ಕೈಯಾಗ ಕೊಟ್ಟುಬಿಟ್ಟ.

ಸಭಾದಲ್ಲಿ ರುದ್ರಸೇಖ ಮಹಾರಾಜ ಹಾಗೂ ಮಡದಿ ಮಹಾದೇವಿ ಅಳಿಯನ ಪೋಟೋವನ್ನು ನೋಡಿ ಮಾತು ಕೊಟ್ಟರು. "ಮಾತು ಕೊಟ್ರೆ ಹೋತು ಮುತ್ತು ಒಡದ್ರೆ ಹೋತು ಎಂಬಂತೆ, ವಿಳ್ಯಾಹಂಚಿದರು ಕ್ಷತ್ರೀಯರು ಹೆಣ್ಣು ನಿಶ್ಚಯ ಆತು."[೧೩]

ಇಲ್ಲಿಯು ಮಂತ್ರಿ ಚಾಣಾಕ್ಷತನದಿಂದ ಬರಹದ ಮೂಲಕ ನೀಲಕುಮಾರ (ವರ) ಇರದೆ ಶಿವಲೋಚನಾಳನ್ನು ಮದುವೆ ಮಾಡಿಸಿಕೊಂಡು ಕರೆದುಕೊಂಡು ಬರುತ್ತಾನೆ. ಮುಂದೆ ಪತಿಯು ಇಲ್ಲದೆ ಅರಮನೆಯಲ್ಲಿ ಒಂಟಿಯಾಗಿ ಅತ್ತೇ ಮಾವರ ಸೇವೆ ಮಾಡುವ ಶಿವಲೋಚನಗಳ ತ್ಯಾಗವೂ ಒಂದು ಕಡೆ ಕಂಡು ಬಂದರೆ ಮತ್ತೊಂದು ಕಡೆ ಪುರುಷ ಕಪಟತನಕ್ಕೆ ಶೋಷಣೆಗೆ ಒಳಗಾಗುತ್ತಾಳೆ ಎಂಬುದು ತೋರುತ್ತದೆ.

ಗೊಂದಲಿಗರ ಸಾಮಾಜಿಕ ಬದುಕಿನ ವ್ಯಕ್ತಿತ್ವತೆ ಇಲ್ಲಿ ಈ ಕಥೆಗಳಲ್ಲಿ ಒಳಗೊಂಡಿವೆ. "ಮಾತು ಕೊಟ್ರೆ ಹೋತು. ಮುತ್ತು ಒಡೆದರೆ ಹೋತು" ಎನ್ನುವ ಮಾತಿನಲ್ಲಿ ಅವರು ಮಾತು

ಪ್ರಮಾಣ ವಚನಗಳಿಗೆ ಎಷ್ಟು ಪ್ರಾಮುಖ್ಯತೆ ಕೊಡುತ್ತಿದ್ದರು ಎಂಬುದು ತಿಳಿಯುತ್ತದೆ. ಅದರಂತೆ ಅವರು ಅದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಅಲೆಮಾರಿ ಸಮುದಾಯದವರಾದ ಗೊಂದಲಿಗರು ಪುರುಷರೆಲ್ಲರೂ ಊರೂರು ತಿರುಗುತ್ತಾ ತಮ್ಮ ವೃತ್ತಿಯನ್ನು ಮಾಡುತ್ತಿರುತ್ತಾರೆ. ಅವರ ಸತಿಯರು ಇಡೀ ಕುಟುಂಬದ ಜವಾಬ್ದಾರಿಗಳನ್ನು ಹೊತ್ತು ತಮ್ಮ ಕರ್ತವ್ಯ ಹಾಗೂ ಪತಿವೃತಾ ಶಿರೋಮಣಿಗಳಾಗಿ ಕಾಯಕ ಮಾಡುವುದನ್ನು ಈ ಕಥೆಗಳು ಪ್ರತಿಬಿಂಬಿಸುತ್ತವೆ.

**೪.೫ ಚಾಲಾಕಿ ಸ್ತ್ರೀಯರು**

ಗೊಂದಲಿಗರ ಕಥೆಗಳಲ್ಲಿ ಕಪಟ ಸ್ತ್ರೀ ಪಾತ್ರಗಳು ಬಹಳಷ್ಟು ಪ್ರಮುಖ ಪಾತ್ರವಹಿಸಿವೆ. ಕಥೆಯು ಸ್ವಾರಸ್ಯದ ಕಡೆಗೆ ತಿರುಗಲು ಹಾಗೂ ಕಥೆಯ ಮುಂದುವರಿಕೆಯಾಗಿ ಈ ಪಾತ್ರಗಳು ಕಾರಣವಾಗಿವೆ. ಇಲ್ಲಿ ಬರುವ ಹಲವಾರು ಕಥೆಗಳಲ್ಲಿ ರಂಭಾವತಿ ಅಥವಾ ಸಂಗವ್ವನ ಪಾತ್ರವಾಗಿರಬಹುದು. ರಂಭಾವತಿ ತಾಯಿ ಕೈವಲ್ಯಾಳ ಪಾತ್ರವಾಗಿರಬಹುದು ಇವೆಲ್ಲವೂ ಸ್ವಾರ್ಥದ ರೂಪವಾಗಿ ಮೂಡಿಬಂದಿವೆ. ತಮಗೆ ಒಳ್ಳೆಯದಾಗಬೇಕಾದರೆ ಅಥವಾ ತಮಗೆ ಬೇಕಾದದ್ದನ್ನು ಪಡೆಯುವ ಸಲುವಾಗಿ ಅವು ಏನೆಲ್ಲಾ ಕೆಟ್ಟ ಕೆಲಸವನ್ನು ಮಾಡುತ್ತವೆಂಬುದನ್ನು ಕಾಣುತ್ತೇವೆ.

**ರಂಭಾವತಿ**

ಮಹಾಸತಿ ಶಿವಲೋಚನ ಕಥೆಯಲ್ಲಿ ರಂಭಾವತಿಯ ಪಾತ್ರವು ಕಥೆಯ ಪ್ರಾರಂಭದ ಉದ್ದೇಶವನ್ನು ತಳ್ಳಿ ಹಾಕಿ ಇಡೀ ಕಥೆಯ ಉದ್ದೇಶವನ್ನೇ ತಿರುಚುತ್ತದೆ. ಕಥೆಯ ಪ್ರಮುಖ ನಾಯಕ ನೀಲಕುಮಾರನು ತನ್ನ ತಂದೆ ಕೊಡುವ ರಾಜ್ಯಭಾರವನ್ನು ಒಪ್ಪದೇ ಸ್ವತಂತ್ರವಾಗಿ ತಾನು ಗಳಿಸಿದ ಹಣದಲ್ಲಿ ರಾಜ್ಯವಾಳುತ್ತೇನೆಂದು ಹೇಳಿ ಪರರಾಜ್ಯಗಳ ಮೇಲೆ ದಾಳಿ ಮಾಡಲು ಮಂತ್ರಿಯನ್ನು ಕರೆದುಕೊಂಡು ಹೋಗುತ್ತಾನೆ. ಹೋಗುವಾಗ ವಿಶ್ರಾಂತಿಗಾಗಿ ವನವಂತರದಲ್ಲಿ ತಂಗಿದಾಗ ಗೆಳೆಯನನ್ನು ಕಂಡು ಬರುತ್ತೇನೆಂದು ಮರಳಿ ರಾಜ್ಯದೊಳಗೆ ಬರಲು ಹೋಗುವಾಗ ಮಹಡಿಯ ಮೇಲೆ ನಿಂತ ರಂಭಾವತಿ ಅವನನ್ನು ಕಂಡು ಮನಸೋತು.

ಪಾತ್ರದಾಕಿ ರಂಭಾವತಿ ಸೂಳಿಮನಿ ನೋಡ್ರಿ ಹರಹರಯನ್ನದೇವ ಲೇಶಿ ರಂಭಾವತಿ ಮನಿಯ್ಯೆ.... ಶಿವಯನ್ನ ಮಾದೇವ.' !

ಕ : ರಂಭಾವತಿ ಎಂಥೆಂಥಾರು ಬಂದು ಮನಸ್ಸು ಕೊಟ್ರೂ, ಆಕೆ ಒಬ್ಬರಿಗೂ ಮನಸ್ಸು ಕೊಟ್ಟಿರ್ಲಿಲ್ಲ. ! ಆಯಮ್ಮ ಒಳಗೆ ಯಾರ್ನೂ ಕರ್ಕೊಂಡಿಲ್ಲ. !

ಹಿ : ಒಳ್ಳೆಯದು ಪತಿವೃತಾ

ಕ : ಪತಿವೃತಾ ಧರ್ಮದಿಂದ ನನಗೆ ತಕ್ಕಂಥ ಒಡೆಯ ಬರ್ಬೇಕು. ಅಂಥಾ, ಆ ಮಹಾರಾಜಗೆ ಒಳಗೆ ಕರ್ಕೊಬೇಕು ಅಂತ್ಹೇಳಿ ಏಕ ಭಕ್ತಿಯಿಂದ ಇದ್ದಾಳೆ. ಆ ರಂಭಾಸಾನಿ.

ಕ : ಆವತ್ತು ಬಾಜಾರದಾಗ ನೀಲಕುಮಾರನ ಕುದ್ರಿ ಬರ್ಬೆಕಾದ್ರ ರಂಭಾವತಿ ನೋಡಿಬಿಟ್ಲು

ರಾಜಗೆ ! ಆಹಾ ಇಲ್ಲಿ ನನಗೆ ತಕ್ಕಂಥ ರಾಜಾ ಬರ‍್ತಾ ಇದ್ದಾನೆ.

"ಇದೇ ರಾಜಗೆ ಕರ್ಕೊಂಡು ಬರ್ಬೇಕಾ ನಾನು __.

ಕುದ್ರಿ ಬಾಜಾರದಲ್ಲಿ ಬಂದು ನಿಂತಾಳ ಹರಯನ್ನ ಮಾದೇವ.

ಕುದ್ರಿ ಹತ್ರ ಬಂದಾಳಯ್ಯ-ಹರಯನ್ನ ಮಾದೇವ.

ಇಕಿ ಕುದ್ರಿಗೆ ಅಡ್ಡ ಗಟ್ಯಾಳ ರಂಭಾ-ರಂಭಾ-ಹರಯನ್ನ ಮಾದೇವ.

ಆಹ ನಿಂದರ್ರೀ ಮರಾಜಾ ಮರಾಜಾ-ಹರಯನ್ನ ಮಾದೇವ.

ಓಹೋ ಸ್ತ್ರೀಯಳೆ ನೀನಿ ಯಾರೇ. _.

ನಿನ್ನ ಊರು ಯಾವುದ ಉದ್ಮಾನ ಯಾವುದು ಸ್ತ್ರೀಯಳೇ .__ ಹರಯನ್ನ ಮಾದೇವ.

ನಿನ್ನ ಹೆಸರು ಏನು ಹೇಳಾ ___ ಹರಯನ್ನ ಮಾದೇವ "![೧೪]

ಹೀಗೆ ರಂಭಾವತಿ ರಾಜಕುಮಾರ ನೀಲಕುಮಾರನನ್ನು ಅಡ್ಡಗಟ್ಟಿ ಅವನನ್ನು ಮರಳು ಮಾಡಿ ತನ್ನ ಮಹಲಿಗೆ ಕರೆದುಕೊಂಡು ಹೋಗುತ್ತಾಳೆ. ಇತ್ತ ಮಂತ್ರಿ ಎಲ್ಲ ಕಡೆಗೆ ಹುಡುಕಿ ರಂಭಾವತಿ ಮಹಲಿಗೆ ಬಂದಾಗ ರಂಭಾವತಿಯು ನೀಲಕುಮಾರನಿಗೆ ಹೇಳಿ ಮಂತ್ರಿಯನ್ನು ಹೊಡೆಸುತ್ತಾಳೆ. ಮೂಗಿನಲ್ಲಿ, ಬಾಯಲ್ಲಿ ರಕ್ತ ಬರೋಹಾಗೆ ಹೊಡೆದು ಹೊರಗೆ ಅಟ್ಟುತ್ತಾರೆ. ಜೀವಕ್ಕೆ ಜೀವನಾದ ಗೆಳೆಯನನ್ನು ಒಬ್ಬ ಲೇಶಿಯ ಮಾತು ಕೇಳಿ ತನ್ನ ಸ್ನೇಹವನ್ನು ಮರೆತನು ಎಂದು ಮನಸ್ಸು ಭಾರ ಮಾಡಿಕೊಂಡು ಅಲ್ಲಿಂದ ಹೊರಡುತ್ತಾನೆ. ನೀಲಕುಮಾರ ಇಲ್ಲಿ ಸಾಮಾಜಿಕ ಮೌಲ್ಯವಾದ ಸ್ನೇಹವನ್ನು ಮರೆತು ಹೆಣ್ಣಿನ ಆಸೆಗೆ ಬಲಿಯಾಗುತ್ತಾನೆ ಎಂಬುದು ತಿಳಿದು ಬರುತ್ತದೆ. ನೀಲಕುಮಾರನಿಗೆ ರಂಭಾವತಿಗಿಂತಲೂ ಸುಂದರವಾದ ಹೆಣ್ಣನ್ನು ತೆಗೆದು ಮದುವೆ ಮಾಡಿ ಮನೆಗೆ ಕರೆದುಕೊಂಡು ಬರಬೇಕು. ಎಂದು ಮಂತ್ರಿ ಸುಂದರವಾದ ರಾಜಕುಮಾರಿ ಶಿವಲೋಚನಳನ್ನು ಹುಡುಕುತ್ತಾನೆ. ಪೋಟೋ ತೆಗೆದುಕೊಂಡು ಜೇಬಿನಲ್ಲಿ ಇಟ್ಟುಕೊಂಡು ರಂಭಾವತಿ ಮನೆಗೆ ಬರುತ್ತಾನೆ. ಅಲ್ಲಿ ಕೈವಲ್ಯಾ ಲೇಶಿಯ ತಾಯಿ ಗೇಟ್ ಬಾಗಲ್ದಾಗ ಕುಂತಿದ್ಲು ಅವನನ್ನು ತಡೆದು ತಾನೇ ಆ ಪೋಟೋವನ್ನು ರಾಜಕುಮಾರನಿಗೆ ತೋರಿಸುತ್ತೇನೆಂದು ಪೋಟೋ ತೆಗೆದುಕೊಂಡು ಒಳಗೆ ಹೋಗುತ್ತಾಳೆ.

"ಕ : ' ಮಂತ್ರಿ ಬಾಯಾಗ ಮಣ್ಣು ಹಾಕಲೀ. _ ಎಂಥಾ ಹೆಣ್ಣು ತೆಗೆದು ಬಂದಾನೆ ಯಪ್ಪಾ_ರಾಜ ಲಗ್ನಕ್ಕ ಹೋಗ್ತಾನ._ನನ್ನ ಮಗಳು ಪರದೇಶಿ ಆಗ್ತಾಳೆ ತಾಯಿ._ನನ್ನ ಮಗಳು ಒಟ್ಟಾರೆ ಆಗ್ತಾಳ._' ಎಂದು ಕೌಸಲ್ಯ ಆಲೋಚನೆ ಮಾಡ್ತಾಳೆ. ಹೆಣ್ಣಿಂದು ಒಂದು ಕಣ್ಣು ಕೆಡಿಸ್ಯಾಳಯ್ಯಾ. _ ಪೋಟೊದೊಳಗ ಕುಳ್ಳಿ ಮಾಡ್ಯಾಳಯ್ಯಾ ಶಿವಹರಯನ್ನ ಮಾದೇವ."[೧೫]

ಶಿವಲೋಚನ ಪೋಟೋದಲ್ಲಿ ಅವಳ ಒಂದು ಕಣ್ಣನ್ನು ಕುಡ್ಡು ಮಾಡಿ ನೀಲಕುಮಾರನಿಗೆ ತೋರಿಸುತ್ತಾರೆ. ಅವನು ಲಗ್ನಕ್ಕೆ ಒಪ್ಪದ ಹಾಗೇ ಮಾಡುತ್ತಾರೆ.

**ಕೌಶಲ್ಯ**

'ಸೂಳಿದ್ರೂ ಸೂಳಿ ತಾಯಿ ಇರಬಾರ್ದಂತ' ಶಾಸ್ತ್ರ ಒಂದಿದೆ. ಅದರಂತೆ ಕೌಶಲ್ಯ ತನ್ನ ಮಗಳು ರಂಭಾವತಿಯನ್ನು ಬಿಟ್ಟು ರಾಜಕುಮಾರ ಎಲ್ಲಿಯೂ ಹೋಗಬಾರದೆಂದು ಕಪಟತನದಿಂದ ಅವಳ ಮರಣವನ್ನು ಕಂಡುಹಿಡಿಯುತ್ತಾಳೆ. ಸಮುದ್ರದೊಳಗಿನ ಮೀನಿನ ಹೊಟ್ಟೆಯೊಳಗಿನ ಶಿವದಾರವನ್ನು ನೀಲಕುಮಾರನಿಂದಲೇ ತರಿಸುವ ಮೂಲಕ ಶಿವಲೋಚನಾಳ ಪ್ರಾಣವನ್ನು ಕಳೆಯುತ್ತಾಳೆ.

"ರಾಮಾ ರಾಮಾ ಅಂತಾ ಪ್ರಾಣ ಬಿಟ್ಟಾಳ್ರಿ ಹರಯನ್ನ ಮಾದೇವ.

ಮೂರುಗಂಟಿ ಬೈಮು ಜಲ್ಮ ಹೋಗ್ಯೆತಿ. ಹರಯನ್ನ ಮಾದೇವ.

ಶಿವಲೋಚನಾ ಅಯ್ಯೋ ಮಗಳೇ. — ಸೊಸಿ ಹರಯನ್ನ ಮಾದೇವ.

ಗಂಗಾಸಾಗ್ರ ಅತ್ತಿ ಮಾವ ದಂಡೂ. — ಹರಯನ್ನ ಮಾದೇವ.

ಅಯ್ಯೋ ಸೊಸಿ ಜಲ್ಮ ಹೋತ್ರೋ. – ಹರಯನ್ನ ಮಾದೇವ."[೧೬]

ಇಲ್ಲಿ ಸೊಸೆಯನ್ನು ಕಳೆದುಕೊಂಡ ಅತ್ತೆ ಮಾವರ ಗೋಳಾಟ ಮನಕಲಕುವಂತಿದೆ.

**ಸಂಗವ್ವ**

'ಬಾಳಭಿಕ್ಷುಕ' ಕಥೆಯಲ್ಲಿ ಬರುವ ಈ ಸಂಗವ್ವನ ಪಾತ್ರವು ಸಮಾಜದಲ್ಲಿ ಲಾಭ ಪಡೆಯುವ ಮೂರನೇಯ ವ್ಯಕ್ತಿಯಾಗಿ ಕಾಣುತ್ತಾಳೆ. ಪದ್ಮಾವತಿಗೆ ಆಶ್ರಯ ಕೊಡುವ ನೆಪಮಾಡಿ ಅವಳಿಂದ ವಸ್ತ್ರ ಒಡವೆ ಎಲ್ಲವನ್ನು ಪಡೆಯುತ್ತಾಳೆ. ಪದ್ಮಾವತಿ ತನ್ನ ಪತಿ ಬಾಳಬಿಕ್ಷುಕ ಅವಳಲ್ಲಿ ಬೆಳೆಯಲಿ ಎಂದು ತಾನು ಬೇರೆ ಬಾಡಿಗೆ ಮನೆಯಲ್ಲಿ ಇರುತ್ತಾಳೆ. ಇತ್ತ ಬಾಳಬಿಕ್ಷುಕನನ್ನು ಸಾಕುವ ಜವಾಬ್ದಾರಿ ಹೊತ್ತ ಸಂಗವ್ವ ಅವನನ್ನು ಕೊಲ್ಲುವ ವಿಚಾರ ಮಾಡುತ್ತಾಳೆ.

"ಹಿ : ಪಲ್ಲೇದ ಸಂಗವ್ವ.

ಕ : ಒಂದು ಪಾಮು ಮುಗ್ಗು ಜ್ವಾಳ ನುಚ್ಚಿಗೆ, ಹೊಡೆದು, ಗಡಿಗೆ ಹಾಕಿ ಕಟಾಂಬ್ಲಿ ಮಾಡಿದ್ಲು, ಸುಡು ಸುಡೋ ಕಟಾಂಬ್ಲಿ ಮಗುವಿನ ಬಾಯಿಗೆ ಹಾಕಿದ್ಲು. !

ಹಿ : ಆಹಾ.

ಕ : ಆ ಸುಡೋ ಕಟಾಂಬ್ಲಿ ಬಾಯಿಗೆ ಹಾಕಿ ಬಾಳಭಿಕ್ಷುಕನ ಎದಿ ಮ್ಯಾಲೆ ಕುಂದ್ರುತ್ತಾಳೆ.

ಕ : ಕೂಸು ತಳಮಳಿಸ್ತಾ ಐತಿ ಕಣ್ ಕಣ್ ಬಿಟ್ಟು ಒದ್ದಾಡ್ತಾ ಐತಿ !"[೧೭]

ಇಂಥ ಸಮಯದಲ್ಲಿ ಪರಮಾತ್ಮನ ಕರುಣೆಯಿಂದ ಬಾಳಭಿಕ್ಷುಕ ಉಳಿಯುತ್ತಾನೆ. ಕಟಾಂಬ್ಲಿ ಹೋಗಿ ಅಮೃತವಾಗುತ್ತದೆ. ಬಾಳಬಿಕ್ಷುಕನಿಗೆ ಸರಿಯಾದ ವಿದ್ಯೆ ಕಲಿಸಲು ಗುರುಗಳಿಗೆ ಹೇಳದೇ ಅವನಿಗೆ ಯಾವ ವಿದ್ಯೆಯನ್ನು ಕಲಿಸಬೇಡಿಯೆಂದು ಸಂಗವ್ವ ಹೇಳುತ್ತಾಳೆ. ಇಲ್ಲಿ ಸಂಗವ್ವ ತನ್ನದಲ್ಲದ ಮೊಮ್ಮಗನ ಸಮಾನವಾದ ಬಾಳ ಭಿಕ್ಷುಕನನ್ನು ಸರಿಯಾಗಿ ನೋಡಿಕೊಳ್ಳದೇ ಅವನ ಬೆಳವಣಿಗೆಯನ್ನು ಬಯಸದೇ ಅವರಿಂದ ಆಗುವ ಲಾಭದ ಕಡೆಗೆ ಮಾತ್ರ ಅವಳ ಗಮನವಿರುತ್ತದೆ.

### ೪.೬ ಖಳನಾಯಕಿಯರು

ಗೊಂದಲಿಗರ ಹಲವಾರು ಕತೆಗಳಲ್ಲಿ ಸ್ತ್ರೀಯ ಪಾತ್ರಗಳೇ ಖಳನಾಯಕಿಯರಾಗಿದ್ದಾರೆ. ತಾವು ಬಯಸಿದ ವಸ್ತುವನ್ನು ಪಡೆಯುದಕ್ಕೋಸ್ಕರ ಏನನ್ನಾದರೂ ಮಾಡುವುದು, ಅರಸರನ್ನು ಒಲಿಸಿ ಉಳಿಸಿಕೊಳ್ಳುವುದಕ್ಕಾಗಿ ಎಂತಹ ಕಾರ್ಯವನ್ನಾದರೂ ಮಾಡುತ್ತಾರೆ. ಮಾಹಾಸತಿ ಶಿವಲೋಚನ ಮತ್ತು ವಿಘ್ನಾವತಿ, ರಾಜಾ ವೀರ ಪರಾಕ್ರಮ, ಅರಣ್ಯಕುಮಾರ, ಗಂಡುಗಲಿ ಕುಮಾರರಾಮ ಮುಂತಾದ ಕಥೆಗಳಲ್ಲಿ ಇಂತಹ ಸ್ತ್ರೀ ಪಾತ್ರಗಳನ್ನು ಕಾಣಬಹುದು. ಸ್ತ್ರೀ ಲಂಪಟತನದಿಂದ ವಿಶ್ವಾಸ ಘಾತುಕತನದಿಂದ ತಾವು ಒಲಿದ ಅರಸರ ಮೂಲಕ ತಮ್ಮ ಸವತಿಯರನ್ನು ಹಿಂಸಿಸುತ್ತಾ ಮೈಸುಖ ಪಡೆಯುತ್ತಾರೆ. ಶಿವಲೋಚನ ಕಥೆಯಲ್ಲಿ ಅವಳ ಪ್ರಾಣ ಸಮುದ್ರದ ಸಜ್ಜಕಾನ ಮೀನಿನ ಹೊಟ್ಟೆಯಲ್ಲಿರುವ ಶಿವದಾರದಲ್ಲಿರುವುದು ಎಂಬುದು ತಿಳಿದು ರಂಭಾ ಎಂಬ ಲೇಶಿ ರಾಜನ ಕೈಯಲ್ಲಿಯೇ ತರಿಸಿ ತಾನು ಧರಿಸುತ್ತಾಳೆ. ಪ್ರತಿಕ್ಷಣವು ಶಿವಲೋಚನಾ ಸಾಯುವಂತೆ ಮಾಡುತ್ತಾಳೆ. "ಸೂಳಿದ್ರೂ ಸೂಳಿ ತಾಯಿ ಇರಬಾರದು." ಎನ್ನುವಂತೆ ಇದಕ್ಕೆ ರಂಭಾನ ತಾಯಿಯ ಕಪಟಯೋಚನೆಯು ಕಾರಣವಾಗುವುದು.

ಶಿವಲೋಚನಾಳ ಶವವನ್ನು ಬೀದಿಯಲ್ಲಿ ಮೆರವಣಿಗೆ ಹೊರಟಾಗಲು ಲೇಶಿಯಾದ ರಂಭಾ ರಾಜ ನೀಲಕುಮಾರನಿಗೆ ನಿನ್ನ ಮಡದಿ ಸತ್ತಾಳ ಮಣ್ಣು ಕೊಡಾಕ ಹೋಗ್ತಾರ ಅಂತಹ ಹೇಳಬಾರದು ಅಂದ್ಲು. ಆಕೆ ಈ ಊರಿಗೆ ಹೊಸ ಗಾಳೆಮ್ಮಾ ಹೊಕ್ಕೊಂಡಿದ್ದಾಳೆ. ಊರೆಲ್ಲಾ ಹಾಳ ಮಾಡಾಕ ಬಂದಿತ್ತು. ಅದನ್ನು ಕಳಸಾಕ ಹೊಂಟಾರ ಎಂದು ಹೇಳಿ ಅವನನ್ನು ಒಳಗೆ ಕರೆದುಕೊಂಡು ಹೋಗುತ್ತಾಳೆ.

### ೪.೭ ಪಾತಿವ್ರತ್ಯ

ನಮ್ಮ ಜನಪದರು ಹೆಣ್ಣಿನ ಬಗ್ಗೆ ವಿಶೇಷವಾದ ಗೌರವ ಸ್ಥಾನಮಾನವನ್ನು ನೀಡಿದ್ದಾರೆ. "ಎಲ್ಲಿ ನಾರಿ ಪೂಜಿಸಲ್ಪಡುವಳೊ, ಅಲ್ಲಿ ದೇವಾನು ದೇವತೆಗಳು ನೆಲೆಸಿರುತ್ತಾರೆ." ಎಂಬ ಒಂದು ನುಡಿಯಿದೆ. ಪುರಾತನ ಕಾಲದಿಂದ ಹೆಣ್ಣು ತನ್ನ ಸ್ಥಾನವನ್ನು ಪುರುಷ ಪ್ರಧಾನ

ಗೊಡೆಯ ನಡುವೆ ಕಟ್ಟಿಕೊಂಡು ಬಂದಿದೆ ಎನ್ನಬಹುದು ಕಾರಣ ‘ ಬಾಲ್ಯದಲ್ಲಿ ತಂದೆಯ ಆಶ್ರಯ, ಯೌವ್ವನದಲ್ಲಿ ಗಂಡನ ಆಶ್ರಯ, ಮುಪ್ಪಿನಲ್ಲಿ ಮಗನ ಆಶ್ರಯದಲ್ಲಿ ಇರಬೇಕು’ ಎಂಬುದನ್ನು ವೇದಗಳಲ್ಲಿಯೇ ಹೇಳಲಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು ದೈಹಿಕವಾಗಿ ಅಶಕ್ತಳು. ಬಲಹೀನಳು ಅಬಲೆ ಎನ್ನುವ ಕಾರಣಗಳನ್ನು ಕೊಡುತ್ತಾ ಅವಳಿಗಾಗಿಯೇ ಕೆಲವೊಂದು ನಿರ್ಭಂದಗಳನ್ನು ಹೇರುತ್ತ ಬಂದಿತು. ನಾರಿ ಯಾವಾಗಲೂ ತನ್ನ ಶೀಲವನ್ನು ತಾನೇ ಕಾಯ್ದುಕೊಳ್ಳಬೇಕು. ಹೆಣ್ಣು ಶೀಲವಂತಳಾಗಿರಬೇಕು. ಅವಳು ಪಾತಿವ್ರತ್ಯಳಾಗಿರಬೇಕು. ಹೀಗೆ ಹಲವಾರು ಎಣಿಕೆಗಳನ್ನು ಮಾಡುವ ಸಮಾಜ ಅದರ ಹಿಂದೆಯೇ ಅವಳನ್ನು ದೋಷಳನ್ನಾಗಿಮಾಡಲು ಮುಂದಾಗುತ್ತದೆ. ಕ್ರೂರ ವ್ಯಕ್ತಿಗಳ ಕೈಗೆ ಸಿಕ್ಕು ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಲು ಆ ಹೆಣ್ಣು ಏನೆಲ್ಲ ಹೋರಾಟ ಮಾಡಬೇಕಾಗುತ್ತದೆ. ಹಲವಾರು ತ್ಯಾಗಗಳನ್ನು ಮಾಡಬೇಕಾಗುತ್ತದೆ. ಕಾಲಾಯ ತಸ್ಮೈನಮ: ಕಾಲವೇ ಎಲ್ಲವನ್ನು ನಿರ್ಧರಿಸುತ್ತದೆ ಎನ್ನುವಂತೆ ಆಯಾ ಕಾಲಕ್ಕೆ ತಕ್ಕಂತೆ ಹೆಣ್ಣಿನ ಪಾತಿವ್ರತ್ಯಕ್ಕಾಗಿ ಶೀಲಕ್ಕಾಗಿ ತನ್ನ ಹೊರಾಟವನ್ನು ಮುಂದುವರೆಸಿಕೊಂಡು ಬಂದಿದ್ದಾಳೆ.

ಪೌರಾಣಿಕವಾಗಿ, ಐತಿಹಾಸಿಕವಾಗಿ, ಸಾಮಾಜಿಕವಾಗಿ ಹಲವಾರು ರಂಗಗಳ ಹಿನ್ನೆಲೆಯಲ್ಲಿ ನೋಡಲಾಗಿ ಪಾತಿವೃತ್ಯವು ತನ್ನ ಪ್ರಭಲತೆಯನ್ನು ಮೆರೆದಿದೆ. ಪಾತಿವೃತ್ಯ ಒಂದು ಬೆಂಕಿ, ಶಕ್ತಿಯಿದ್ದಂತೆ. ಈ ಶಕ್ತಿಯಿಂದ ಅವಳು ತನ್ನನ್ನು ತಾನು ರಕ್ಷಿಸಿಕೊಳ್ಳುವುದಲ್ಲದೆ ತನ್ನ ಪತಿಯನ್ನು ಸಹ ರಕ್ಷಿಸುವ, ಕೋಟೆ ಕೊತ್ತಲಗಳನ್ನು ರಕ್ಷಿಸುವ, ಕೋಟೆಯ ದ್ವಾರ ಬಾಗಿಲುಗಳನ್ನು ತೆರೆಯುವ, ಬೆಂಕಿಯಿಂದ ರಕ್ಷಿಸಿಕೊಳ್ಳುವ ಹಲವಾರು ರಕ್ಷಣಾತ್ಮಕ ಕೆಲಸಗಳನ್ನು ಮಾಡುತ್ತಾಳೆ. ಹಾಗೆಯೇ ದುಷ್ಟ ಪತಿಗಳು ತಮ್ಮ ಹೆಂಡಂದಿರ ಪಾತಿವೃತ್ಯವನ್ನು ರಕ್ಷಣಾ ಕವಚವನ್ನಾಗಿ ಮಾಡಿಕೊಂಡು, ತಮ್ಮ ಹಿಂಸಾತ್ಮಕ ಕಾರ್ಯಗಳನ್ನು ಮುಂದುವರಿಸುತ್ತಾರೆ. ಇಂಥಹ ಘಟನಾವಳಿಗಳನ್ನು ಸೂಚಿಸುವ ಹಲವಾರು ಕಥೆಗಳನ್ನು ನೋಡಬಹುದು.

“ಪೂರ್ವದಲ್ಲಿ ತರಕಾಸುರ ಮರಕಾಸುರ ಮತ್ತು ಯುದ್ಧಮಾರಿ ಎಂಬ ರಾಕ್ಷಸ ಅಣ್ಣ ತಂಗಿಯರಿದ್ದರು. ಯುದ್ಧ ಮಾರಿ ತಂಗಿಯಾಗಿದ್ದು ಅವಳು ಭೂಮಿಗೂ ಆಕಾಶಕ್ಕೂ ನಡುವೆ ಹೆಬ್ಬಟ್ಟಿನ ಮೇಲೆ ಇವರ ಪಟ್ಟಣವನ್ನು ಹಿಡಿದುಕೊಂಡಿದ್ದಳು. ತರಕಾಸುರ ಮತ್ತು ಮರಕಾಸುರರಿಗೆ ಮಾಲಿ ಮತ್ತು ಸುಮಾಲಿ ಎಂಬುವರು ಪತಿವೃತಾ ಧರ್ಮಿಯರಾದ ಹೆಂಡತಿಯರಿದ್ದರು. ಇವರ ಪತಿವೃತಾ ಬಲದಿಂದ ದೇವಾನು ದೇವತೆಗಳನ್ನೆಲ್ಲಾ ಬಂಧನದಲ್ಲಿಟ್ಟು ಮೆಟ್ಟಿಲುಗಳನ್ನಾಗಿ ಮಾಡಿಕೊಂಡಿದ್ದರು. ತ್ರಿಮೂರ್ತಿಗಳು ಮಾತ್ರ ಇವರ ಕೈಗೆ ಸಿಕ್ಕಿರಲಿಲ್ಲ. ಇವರಿಗೆ ಬಲಸಾಮಾರ್ಥ್ಯಗಳಿದ್ದುದು ಅವರ ಹೆಂಡಂದಿರ ಪತಿವೃತಾ ಧರ್ಮದಿಂದ. ಅದಕ್ಕಾಗಿ ಈ ಪತಿವೃತಾ ಧರ್ಮವನ್ನು ಹಾಳು ಮಾಡಿದರೆ ರಾಕ್ಷಸರ ಶಕ್ತಿ ಕುಂದುತ್ತದೆ. ಆಗ ಈ ರಾಕ್ಷಸರನ್ನು ಸಂಹಾರ ಮಾಡಬಹುದು ಎಂದು ಶ್ರೀಕೃಷ್ಣನಿಗೆ ಈ ಕಾಯಕವನ್ನು ವಹಿಸುತ್ತಾರೆ. ಆತನು

ಬುಡುಬುಡುಕಿಯ ವೇಷದಲ್ಲಿ ಬಂದು ಶಕುನ ನುಡಿಯುತ್ತಾನೆ. ಮಾಲಿ ಸುಮಾಲಿ ರಾಣಿಯರು ಶಕುನವನ್ನು ಪರೀಕ್ಷೆ ಮಾಡಲು ಬೆಳಗಾಗುವುದರೊಳಗಾಗಿ ಬೆಳೆದು ನಿಂತ ಅಶ್ವತ್ಥ ವೃಕ್ಷವನ್ನು ಪ್ರದಕ್ಷಿಣೆ ಮಾಡಿ ತಬ್ಬಿಕೊಳ್ಳುತ್ತಾರೆ. ಆಗಲೇ ಕೃಷ್ಣನು ಪ್ರತ್ಯಕ್ಷನಾಗುತ್ತಾನೆ. ಆಗ ಅವರ ಪತಿವೃತಾ ಧರ್ಮ ಹಾಳಾಗಿ ಅಲ್ಲಿ ರಾಕ್ಷಸರು ನಾಶವಾಗುತ್ತಾರೆ."[೧೮] ಕಾರಣ ಒಂದು ದುಷ್ಟ ಶಕ್ತಿಯನ್ನು ಸಂಹಾರ ಮಾಡಲು ಪತಿವೃತಾ ಧರ್ಮವೂ ಅದಕ್ಕೆ ಕಾರಣವಾಗುತ್ತದೆ ಎಂಬುದನ್ನು ಅನಾದಿಕಾಲದಿಂದಲೂ ನಾವು ಕೇಳುತ್ತಿದ್ದೇವೆ. ಅಷ್ಟೇ ಏಕೆ ನಳದಮಯಂತಿಯ ಕಥೆಯಲ್ಲಿ ತನ್ನ ಪತಿವೃತಾ ಧರ್ಮದಿಂದ ಅಡವಿ ಪಾಲಾದ ದಮಯಂತಿಯನ್ನು ಒಂದು ಘಟಸರ್ಪವೂ ಹಾಗೂ ಒಬ್ಬ ಬೇಡನು ಅಡ್ಡಗಟ್ಟಿದಾಗ ಇದರಿಂದ ಅವಳು ಪಾರಾಗುತ್ತಾಳೆ. ಪತಿವೃತಾ ಧರ್ಮದಿಂದ ಬೇಡನು ಸುಟ್ಟು ಬಸ್ಮವಾಗುತ್ತಾನೆ. ರಾಮಾಯಣದಲ್ಲಿ ಸೀತೆಯನ್ನು ರಾವಣ ಎತ್ತಿಕೊಂಡು ಹೋದಾಗ ತನ್ನ ಪತಿವೃತಾಧರ್ಮದಿಂದ ತನ್ನನ್ನು ಕಾಪಾಡಿಕೊಳ್ಳುತ್ತಾಳೆ.

ಪೌರಾಣಿಕ, ಸಾಮಾಜಿಕ, ಐತಿಹಾಸಿಕ, ಜಾನಪದೀಯ ಹೀಗೆ ಹಲವಾರು ರಂಗಗಳಲ್ಲಿಯೂ ಹೆಣ್ಣು ತನ್ನ ' ಪತಿಯೇ ಪರದೈವ ' ಎನ್ನುವಂತೆ ಪತಿಯ ಸೇವೆಯೇ ಪರಮ ಸೇವೆಯನ್ನಾಗಿ ಮಾಡಿಕೊಂಡು ಅದರಿಂದ ಪ್ರಭಲವಾದ ಶಕ್ತಿಯನ್ನು ಪಡೆಯುತ್ತಿದ್ದಳು. ಸ್ವಾಮಿನಿಷ್ಠೆ ಅವಳಿಗೆ ಶ್ರೀರಕ್ಷೆಯಾಗಿತ್ತು. ಗೊಂದಲಿಗರ ಕಥೆಗಳಲ್ಲಿಯೂ ಸಹ ಹಲವಾರು ಪತಿವ್ರತಾ ಸ್ತ್ರೀಯರನ್ನು ಕಾಣುತ್ತೇವೆ. ಅದರಲ್ಲಿ ಸತಿ ಶಿವಲೋಚನ "ಕಥೆಯಲ್ಲಿ ಗಂಡ ನೀಲಕುಮಾರ ಲೇಶಿಯ ಮನೆಯಲ್ಲಿದ್ದರೂ ಅವನ ಹೆಸರಿನಲ್ಲಿಯೇ ಶಿವಲೋಚನ ಬದುಕುತ್ತಿರುತ್ತಾಳೆ. ಆದರೆ ಲೇಶಿಯ ಕುತಂತ್ರದಿಂದ ಹಲವಾರು ಕಷ್ಟಗಳನ್ನು ಅನುಭವಿಸಿ ಕೊನೆಗೆ ತನ್ನ ಪತಿಯಾದ ನೀಲಕುಮಾರನನ್ನು ಸೇರುತ್ತಾಳೆ.

'ಬಾಳಭಿಕ್ಷುಕ' ಕಥೆಯಲ್ಲಿ ಹನ್ನೊಂದು ದಿವಸದ ಬಾಳ ಭಿಕ್ಷುಕನಿಗೆ ಹನ್ನೆರಡು ವರ್ಷದ ಪದ್ಮಾವತಿಯನ್ನು ಮಂತ್ರಿ ತನ್ನ ಕುತಂತ್ರ ಜಾಣ್ಮೆಯಿಂದ ಮದುವೆ ಮಾಡುತ್ತಾನೆ. ನಂತರ ನಿಜ ತಿಳಿದ ಮೇಲೆ ಪದ್ಮಾವತಿ ಬಹಳಷ್ಟು ದು:ಖಿಸುತ್ತಾಳೆ ಅವರನ್ನು ಕಾಡಿನಲ್ಲಿಯೇ ಬಿಟ್ಟು ಆ ಕೂಸನ್ನು ಪದ್ಮಾವತಿ ಸಲಹುತ್ತಾಳೆ. ಇವಳ ನಿಷ್ಠೆಯನ್ನು ಕಂಡ ಶಿವ ಇವಳಿಗೆ ಪತಿ ಬೆಳೆದು ಹರೆಯಕ್ಕೆ ಬರುವರೆಗೂ ನೀನು ಹೀಗೆ ಇರು ಎಂದು ವರಕೊಡುತ್ತಾನೆ. ಮುಂದೆ ಪತಿಯನ್ನು ಬೆಳೆಸಲು ಹಲವಾರು ಕಷ್ಟಗಳನ್ನು ಅನುಭವಿಸಿ ಕೊನೆಗೆ ಒಂದಾಗುತ್ತಾಳೆ.

'ಸತ್ಯ ಶೀಲಾವತಿ' ಕಥೆಯಲ್ಲಿ ಮಂತ್ರಿಯ ಮಗನ ಕ್ರೂರ ದೃಷ್ಟಿಗೆ ಬಲಿಯಾಗಿ ಶೀಲಾವತಿಯನ್ನು ಬೋಗಿಸಲು ಹೋಗುತ್ತಾನೆ. ಇದರಿಂದ ತಪ್ಪಿಸಿಕೊಂಡ ಶೀಲಾವತಿ ಚಂಡಿಕಾ ಗುಡಿಯನ್ನು ಸೇರಿ ಬಾಗಿಲು ಭದ್ರಪಡಿಸಿಕೊಳ್ಳುತ್ತಾಳೆ. ಆದರೆ ಆಕೆಯ ಮಗ ರತನಸೇಕ ಕೂಸು ಮಂತ್ರಿಯ ಮಗನ ಕೈಸೆರೆಯಾಗುತ್ತದೆ. ಅದನ್ನು ತುಂಡು ತುಂಡಾಗಿ ಕತ್ತರಿಸಿ ಹಾಕುತ್ತಾನೆ. ಇದನ್ನು ಕಂಡ ಅವಳು " ಹೋಗss ಹೋಗss ಹೋದ್ರ ಪತಿವ್ರತಾ ಧರ್ಮ

ಹೋಗ್ತೈತೀ ಸತಿಪತಿ ಜಲ್ಮ ತಣ್ಣಗಿದ್ದರೆ ಇಂಥ ಮಗನಿಗೆ ಹತ್ತು ಮಂದಿ ನೋಡೆನಂದ್ಲು ಆಯಮ್ಮ"[೧೯] ಮುಂದೆ ಪತಿವ್ರತಾ ಧರ್ಮದಿಂದ ಪತಿಯನ್ನು ಸೇರಿ ದುರ್ಜಯನಾದ ಮಂತ್ರಿ ಮಗನನ್ನು ಚಂಡಿಕಾ ದೇವಿಗೆ ಬಲಿಕೊಟ್ಟು ತನ್ನ ಮಗ ರತನಕುಮಾರನ್ನು ಪಡೆಯುತ್ತಾಳೆ. ಈ ಒಂದು ಕಥೆ ಜನಪದೀಯ ಕಥೆಯಾದ ಕಡ್ಲಿಮಟ್ಟಿ ಕಾಶಿಬಾಯಿಯ ಕಥೆಯನ್ನು ಹೋಲುತ್ತದೆ. ಇವಳು ಸಹ ತನ್ನ ಪಾತಿವೃತ್ಯವನ್ನು ಉಳಿಸಿಕೊಳ್ಳಲು ಸ್ಟೇಷನ್ ಮಾಸ್ತರನಿಂದ ಪಾರಾಗಲು ತನ್ನ ಮಗುವನ್ನು ಕಳೆದುಕೊಳ್ಳುತ್ತಾಳೆ. ಪತಿವೃತಾ ಶಿರೋಮಣಿಯಾಗಿ ತನ್ನ ಶೀಲವನ್ನು ಮೆರೆಯುತ್ತಾಳೆ.

ಹೆಣ್ಣಿನ ಪಾವಿತ್ರತೆ ಬಗ್ಗೆ ಹೇಳುವುದು ಒಂದು ಕಡೆಯಾದರೆ, ಅದೇ ಹೆಣ್ಣಿನ ಬಗ್ಗೆ ಮಡಿ ಮೈಲಿಗೆ ಎಂಬ ಮಾತುಗಳು ಕೇಳುವುದು ಅಷ್ಟೇ ಸಹಜವಾಗಿದೆ. "ಶೌಚ, ಅಶೌಚದ ಪರಕಲ್ಪನೆಯಲ್ಲಿ ಹೆಣ್ಣನ್ನು ಮೈಲಿಗೆಯಾಗಿ ನಿರ್ವಚಿಸಲಾಗಿದ್ದು ಗಂಡು ಮಾಡುವ ಅನೇಕ ಕೆಲಸ ಮತ್ತು ಕ್ಷೇತ್ರದಿಂದ ಆಕೆಯನ್ನು ಹೊರಗಿರಿಸಿದೆ. ಗಂಡಿನ ವೀರ್ಯಸ್ರಾವ ಅವನ ಪುರುಷತ್ವವನ್ನು ಸಾಬೀತುಪಡಿಸಿ ' ಗಂಡಸಿನ ' ಗೌರವ ತರುತ್ತದೆ. ಅದೇ ಹೆಣ್ಣಿನ ಮಾಸಿಕ ಸ್ರಾವ ಆಕೆಯ ಪಾವಿತ್ರ್ಯ ನಾಶಕ್ಕೆ ಕಾರಣವಾಗಿ ಅಶೌಚಳಾಗುತ್ತಾಳೆ. ಹೆಣ್ಣಿನ ಪ್ರಜನನ ಶಕ್ತಿಯನ್ನು ಉತ್ಪಾದನಾ ಪ್ರಕ್ರಿಯೆಯಾಗಿ ತಿಳಿಯದೇ ಆ ಇಡಿಯ ಕಾಲಾವಧಿಯನ್ನೇ ಅಶೌಚ್ಚಗೊಳಿಸಿ ಹೆಣ್ಣನ್ನು ಅಗೋಚರಗೊಳಿಸಲಾಗಿದೆ. ನಿಸರ್ಗಕ್ರಿಯೆಯಾದ ಮುಟ್ಟು ಸಾಮಾಜಿಕ, ಧಾರ್ಮಿಕ ಸಂದರ್ಭಗಳಲ್ಲಿ ಹೆಣ್ಣಿನ ಕೆಲಸದ ಮೇಲೆ ಬೀರುವ ಪರಿಣಾಮವನ್ನು ತಾತ್ವಿಕವಾಗಿ ಚರ್ಚಿಸಬೇಕಾಗಿದೆ. ಹೆಣ್ಣಿನ ಕೆಲಸದ ವಿನ್ಯಾಸ ಮತ್ತು ಪ್ರಾಮಾಣಗಳು ಪ್ರಧಾನ ವಾಹಿನಿಯ ಸ್ತ್ರೀ ಮಾದರಿಗೆ ಅನುಕೂಲವಾಗಿಯೇ ಇದೆ ಮತ್ತು ಹೆಣ್ಣನ್ನು ಬದಿಗೆ ಬಿತ್ತರಿಸುವಲ್ಲಿ ನೆರವಾಗಿವೆ. ಜನಪದ ಕಥಾನಾಯಕಿಯರನ್ನು ಬಹಳ ಸುಂದರಿಯನ್ನಾಗಿ, ಗಂಡಿನ ಬಲಿಪಶುಗಳನ್ನಾಗಿ, ಪುರುಷನಾಯಕರ ರಕ್ಷಣೆಯಿಂದ ಬದುಕುಳಿದವರಾಗಿ, ಅಂಜುಬುರುಕಿಯರಾಗಿ, ತ್ಯಾಗ, ಶೀಲದ ಹರಿಕಾರರಾಗಿ ಅಥವಾ ಇದಕ್ಕೆ ವಿರುದ್ಧವಾಗಿ ಜಗಳಗಂಟಿಯರು ಮತ್ಸರಿಯರು, ಸುಳ್ಳುಗಾರರು, ರಕ್ಕಸಿಯರು ಎಂದೇ ಪುರುಷದೃಷ್ಟಿಯ ವಿಮರ್ಶೆಗಳು ಚಿತ್ರಿಸಿವೆ."[೨೦]

"ತುಳು ಜನಪದ ಪುರಾಣವಾದ ಸಿರಿಸಂಧಿ ಅಥವಾ ಸಿರಿ ಪಾಡ್ದನ ಸಿರಿ ಮಹಿಳೆಯ ಅಂತ ಸ್ತತ್ವದ ಪ್ರತೀಕ. ಹೆಣ್ಣಿನ ಹಕ್ಕಿನ ಹೊಸ ಹುಡುಕಾಟದ ಅಭಿವ್ಯಕ್ತಿ ಸಿರಿ. ಪಿತೃಪ್ರಧಾನ ಸಂಸ್ಕೃತಿಯ ಮಳ್ಳುಗಳಾದ ಪಾತಿವೃತ್ಯ, ಮಾತೃತ್ವ, ಪುರುಷ ಪ್ರಭುತ್ವಗಳ ಪರಿಕಲ್ಪನೆಗಳನ್ನು ಒಡೆದ ಸಂಕೇತ, ಷರತ್ತನ್ನು ಒಡ್ಡಿ ಮದುವೆಯಾಗುವ, ಗಂಡನ ಸ್ವೇಚ್ಛಾಚಾರ ಹಾಗೂ ತನಗಾದ ಅವಮಾನವನ್ನು ಸಾರ್ವಜನಿಕವಾಗಿ ಪ್ರತಿಭಟಿಸುವ, ಪಂಚಾಯತಕೂಟದ ನ್ಯಾಯ ಬಾಹಿರ ತಿರ್ಮಾನವನ್ನು ನಿರಾಕರಿಸುವ, ಪುರುಷಾಧಿಕಾರ ಹಾಗೂ ಆ ಅಧಿಕಾರದ ಯಾವ ಅರಮನೆಯನ್ನು ನಾಶಗೊಳಿಸುವ ಮೂಲಕ ಹೊಸ ರಿವಾಜೊಂದನ್ನು ಹುಟ್ಟು ಹಾಕುತ್ತಾಳೆ.

ಕತ್ತಿನ ಕರಿಮಣಿ ಮೂಗಿನ ಮೂಗುತಿ ಕಿತ್ತು ಅರಮನೆಯ ಕಂಬಕ್ಕೆ ಕಟ್ಟಿ, ಕೈಬಳೆಗಳನ್ನು ಒತ್ತಿ ಒಡೆದು ಗಂಡನಿಗೆ ವಿಚ್ಛೇದನ ಹೇಳುವ ಸಿರಿ, ಪುರುಷನ ಸಂಸ್ಕೃತಿಕ ಅಹಂ ಹಾಗೂ ಭೌತಿಕ ಅಹಂ ಎರಡನ್ನು ಒಡೆಯುತ್ತಾಳೆ. ತನ್ನ ಮರು ಮದುವೆಗೆ ಮಗ ಕುಮಾರ ಒಡ್ಡುವ ಪ್ರತಿರೋಧವನ್ನು ನಿರಾಕರಿಸಿ ಕೊಡ್ಸರಾಳ್ವನೊಂದಿಗೆ ಮದುವೆಯಾಗುವಲ್ಲಿ ತಾಯ್ತನದ ರೂಢಿಗತ ರಿವಾಜುಗಳ ದ್ವಂದ್ವಗಳಿಗೆ ಸಿರಿ ಪರಿಹಾರದ ಪ್ರವರ್ತಕಳಾಗುತ್ತಾಳೆ."[೨೧]

ಸ್ತ್ರೀತ್ವವನ್ನು ಪ್ರಕಟಪಡಿಸುವ ಅನೇಕ ಆಶಯಗಳು ಜನಪದ ಕತೆಗಳಲ್ಲಿ ದೊರೆಯುತ್ತವೆ. ಇಲ್ಲಿ " ಸಾಹಸದ ಕಾರ್ಯಸಾಧನೆ ಮಾಡುವನು ಗಂಡು, ಆದರೆ ಇಡೀ ಕಥಾ ಹಂದರದೊಳಗೆ ಆತನ ಈ ಸಾಹಸದ ಕ್ರಿಯಾಚಾಲನ ಶಕ್ತಿಯಾಗಿ ಹೆಣ್ಣು ನಿರ್ವಹಿಸಲ್ಪಡುತ್ತಾಳೆ. ಈ ಕ್ರಿಯಾಚಾಲನ ಶಕ್ತಿಗಳು ಮನುಷ್ಯ ವರ್ಗದ ಅಡಗೂಲಜ್ಜಿ ಮಾಟಗಾತಿ, ನಾಗಕನ್ಯೆ, ದೇವಕನ್ಯೆಯರು ಅಥವಾ ಹೆಂಡತಿ, ಮಗಳು, ತಂಗಿಯಂತಹ ಸಾಮಾನ್ಯ ಹೆಣ್ಣಗಳು, ಮಾಂತ್ರಿಕ ಉಂಗುರು, ಮಂತ್ರದಂಡ, ಮಾಯದ ಚಾಪೆ, ಮಾಯದಕಲ್ಲು ಭಸ್ಮಗಳನ್ನು ನೀಡುವವರು, ಅತಿಮಾನುಷ ವರ್ಗದ ಹೆಣ್ಣುಗಳು, ಇಡೀ ಕತೆಯ ಚೌಕಟ್ಟಿನಿಂದ ಅಡಗೂಲಜ್ಜಿ ಅಥವಾ ಮಾಟಗಾತಿ ಅಥವಾ ಜಾಣ ಹೆಣ್ಣನ್ನು ಹೊರಗಿಟ್ಟರೆ ನಾಯಕ ನಿಸ್ಸಹಾಯಕನಾಗಿ ಶಕ್ತಿಹೀನನಾಗಿ ಕಂಡು ಬರುತ್ತಾನೆ. ಇಡಿ ಕಥೆಯೇ ಅಲ್ಲಿಗೆ ನಿಲ್ಲುತ್ತದೆ. ಉದಾಹರಣೆಗೆ ತಂಗಿಯನ್ನು ಹುಡುಕಲು ಹೊರಟ ಅಣ್ಣನಿಗೆ ರಾಕ್ಷಸನ ಸುಳಿವು ಕೊಡುವವಳು. ಈ ಅಡುಗೂಲಜ್ಜಿ ರಾಕ್ಷಸರ ಸದ್ದಡಗಿಸಲು ಸಾಧ್ಯವಾಗುವುದು ಮಾಟಗಾತಿ ಕೊಟ್ಟ ಮಾಂತ್ರಿಕ ವಸ್ತುಗಳಿಂದ ಅಥವಾ ಸೆರೆಸಿಕ್ಕ ತಂಗಿ ಜಾಣತನದಿಂದ ರಾಕ್ಷಸನ ಪ್ರಾಣ ಮೂಲವನ್ನು ತಿಳಿದು ಹೇಳುವುದರಿಂದ ಅರಸ ಒಡ್ಡಿದ ದುಸ್ಸಾಹಸದ ಕಾರ್ಯವನ್ನು ಮಾಡಲಾಗಿದೆ. ಅಸಹಾಯಕನಾಗಿ ಮುಸುಕು ಹಾಕಿ ಮಲಗಿದ ನಾಯಕನಿಗೆ ಕಾರ್ಯಸಾಧನೆಯ ಮಾರ್ಗ ತೋರುವವಳು. ಸಾಮಾನ್ಯ ಹೆಣ್ಣು ಹೀಗೆ ಈ ಕ್ರಿಯಾ ಚಾಲನ ವ್ಯಕ್ತಿಗಳಾರೂ ಗಂಡಾಗಿಲ್ಲದಿರುವುದು ಅಥವಾ ಅವರೆಲ್ಲರೂ ಹೆಣ್ಣಾಗಿರುವುದು ಹೆಣ್ಣು ಶಕ್ತಿಯನ್ನು ಅನಾವರಣಗೊಳಿಸುತ್ತದೆ. ಗಂಡು ಇಲ್ಲಿ ಕಾರ್ಯಸಾಧನೆಯ ಮಾಧ್ಯಮವಾಗಿ ಮಾತ್ರ ನಿರ್ವಹಿಸಲ್ಪಡುತ್ತಾನೆ."[೨೨]

ಹೆಣ್ಣು ತನ್ನ ಜಾಣ್ಮೆಯಿಂದ ಪಾತಿವೃತ್ಯವನ್ನು ಉಳಿಸಿಕೊಳ್ಳುವುದರ ಜೊತೆಗೆ ಧೈರ್ಯದಿಂದ ಸಾಹಸದ ಕೆಲಸಗಳನ್ನು ಮಾಡುತ್ತಾಳೆ. ಅದನ್ನು 'ಸತ್ಯ ಶೀಲಾವತಿ' ಕಥೆಯಲ್ಲಿ ಕಾಣುತೇವೆ. ಇಲ್ಲಿ ದುರ್ಜಯನಿಂದ ತಪ್ಪಿಸಿಕೊಂಡು ತನ್ನ ಪತಿವೃತಾ ಧರ್ಮವನ್ನು ಕಾಪಾಡಿಕೊಂಡು ಕಾಡಿನಲ್ಲಿ ಅಲೆಯುತ್ತಿರುವಾಗ ಕಾಡಿನ ಸಿಪಾಯಿ ಕಳ್ಳರು ಅವಳನ್ನು ಕಾಡುತ್ತಾರೆ. ಅವರಿಂದ ಪಾರಾಗಿ ಗಂಡು ವೇಷಧರಿಸಿ ಕುದುರೆಹತ್ತಿ, ಧರ್ಮಾವತಿ ಪಟ್ಟಣಕ್ಕೆ ಬಂದು ಅಲ್ಲಿ ಊರ ಪದ್ಧತಿಯಂತೆ ಯುದ್ಧ ಮಾಡಿ ಆ ರಾಜನ ತಮ್ಮನನ್ನು ಸೋಲಿಸುವುದಾಗಿತ್ತು. ಅವನನ್ನು ವೇಷಧಾರಿಯಾದ ಶೀಲಾವತಿಯು ಸೋಲಿಸಿ ಧರ್ಮಾವತಿ ಪಟ್ಟಣವನ್ನು ಗೆದ್ದುಕೊಂಡು

ಸಿಂಹಾಸನವನ್ನೇರಿ ರಾಜ್ಯಭಾರ ಮಾಡತೊಡಗಿದಳು. ಕಳೆದು ಕೊಂಡ ತನ್ನ ಪತಿ ಹಾಗೂ ಮೈದುನ ಪಟ್ಟತನದಿಂದ ಹೋರಾಡಿ ತಾನು ಹಾಗೂ ತನ್ನ ತಂಗಿಗೆ ಆ ಅರಮನೆಯಲ್ಲಿ ಆಶ್ರಯ ಪಡೆದಳು. ಕಳೆದುಕೊಂಡ ತನ್ನ ಪತಿ ಹಾಗೂ ಮೈದುನನ್ನು ಜಾಣತನದಿಂದ ಪತ್ತೆ ಹಚ್ಚುತ್ತಾಳೆ.

**೪.೮ ಕಾಮುಕನಿಂದ ತನ್ನ ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುವುದು.**

"ಒಂದೂರಲ್ಲಿ ಒಬ್ಬ ಅರಸನಿದ್ದ, ಅವನಿಗೊಬ್ಬ ಮಂತ್ರಿ, ಆ ಮಂತ್ರಿಯ ಹೆಂಡತಿ ಬಹಳ ಚೆಲುವೆ, ಅರಸನಿಗೆ ಅವಳ ಮೇಲೆ ಮನಸ್ಸಾಯಿತು. ಯಾತ್ರಿಕನ ವೇಷ ಧರಿಸಿ ಅವಳ ಮನೆಯಲ್ಲಿ ತಂಗುತ್ತಾನೆ. ರಾತ್ರಿ ಅವನು ತನ್ನ ಬಳಿ ಬಂದಾಗ ಈಕೆ ತನ್ನ ಕತ್ತಿನ ಮುತ್ತಿನ ಸರವನ್ನು ಕಡಿದು ಚೆಲ್ಲುತ್ತಾಳೆ. ನಿನ್ನ ಕೈತಾಗಿ ನನ್ನ ಮುತ್ತಿನ ಸರ ಕಡಿಯಿತು. ನೀನೆ ಅದನ್ನು ಪೋಣಿಸಿ ಕೊಡಬೇಕು. ಆ ವರೆಗೆ ನನ್ನನ್ನು ಮುಟ್ಟಬೇಡ. ಎನ್ನುತ್ತಾಳೆ. ಒಪ್ಪಿದ ಅರಸ ದಾರದ ಒಂದು ತುದಿಯನ್ನು ಆಕೆಯ ಕೈಗೆ ಕೊಟ್ಟು ಮುತ್ತು ಪೋಣಿಸಿದಾಗ, ಈಕೆ ಇನ್ನೊಂದು ಕಡೆಯಿಂದ ಒಂದು ಮುತ್ತನ್ನು ಕೆಳಕ್ಕೆ ಬಿಡುತ್ತಾಳೆ. ಹೀಗೆ ಮುತ್ತು ಪೋಣಿಸಿದಾಗ ಕೋಳಿ ಕೂಗುತ್ತದೆ. ಅರಸ ಅರಮನೆಗೆ ಹೊರಟು ಹೋಗುತ್ತಾನೆ. ಮರುದಿನ ವ್ರತ ಪೂಜೆಯ ನೆಪದಲ್ಲಿ ಅರಸ ಅವಳನ್ನು ಅರಮನೆಗೆ ಕರೆಸುತ್ತಾನೆ. ರಾತ್ರಿ ಪಲ್ಲಂಗಕ್ಕೆ ಬರುವಂತೆ ಮಾಡುತ್ತಾನೆ. ಅರಸನ ಆಸೆ ತಿಳಿದ ಮಂತ್ರಿಯ ಹೆಂಡತಿ ನನಗೆ ಉಚ್ಚೆ ಬರುತ್ತಿದೆ ಹೋಗಿ ಬರುತ್ತೇನೆ. ಎನ್ನುವಳು ನಿನಗೆ ಅಷ್ಟು ಅನುಮಾನವಿದ್ದರೆ ನನ್ನ ಸೀರೆಯ ಸೆರಗನ್ನು ಹಿಡಿದುಕೋ ಎಂದು ಹೇಳಿ ಕೆಳಗಿಳಿಯುತ್ತಾಳೆ. ಕೆಳಗಿಳಿದ ಈಕೆ ಸೀರೆಯ ಇನ್ನೊಂದು ತುದಿಯನ್ನು ಏಣಿಯ ಕಾಲಿಗೆ ಕಟ್ಟಿ ತಪ್ಪಿಸಿಕೊಂಡು ಓಡಿ ಹೋಗುತ್ತಾಳೆ."[೨೩] ಗೊಂದಲಿಗರ ಕಥೆಯಾದ 'ಸತ್ಯಶಿಲಾವತಿ' ಕಥೆಯಲ್ಲಿ ಶೀಲಾವತಿಯು ಕಾಮುಕನಾದ ದುರ್ಜಯನಿಂದ ಪಾರಾಗಲು ಬಯಲಿಗೆ ಹೋಗಿ ಬರುತ್ತೇನೆಂದು ಅವನಿಂದ ಪಾರಾಗಿ ಚಂಡಿಕಾ ಗುಡಿಯನ್ನು ಸೇರುತ್ತಾಳೆ. ಅದೇ ಶೀಲಾವತಿ ಮಂದೆ ಕಳ್ಳನ ಕೈಯಲ್ಲಿ ಸಿಕ್ಕಾಗ ಹೊಟ್ಟೆ ನೋವಿನ ನೆಪ ತೆಗೆದು ಮೊಲದ ಹೆಜ್ಜೆಯ ಮಣ್ಣು, ಬೆಕ್ಕಿನ ಉಚ್ಚೆ ತರಲು ಹೇಳಿ ಕಳ್ಳನಿಂದ ಪಾರಾಗುತ್ತಾಳೆ. ನಂತರ ಅಡವಿಯಲ್ಲಿ ಸಿಪಾಯಿಯ ಕೈಯಲ್ಲಿ ಸಿಕ್ಕು ಉಪಾಯದಿಂದ ಅವನನ್ನು ದವಸಧಾನ್ಯ ತರಲು ಸಂತೆಗೆ ಕಳುಹಿಸಿ ಅವನ ವೇಷವನ್ನು ತೊಟ್ಟು ಅಲ್ಲಿಂದ ಪಾರಾಗುತ್ತಾಳೆ. ಅನಾದಿ ಕಾಲದಿಂದ ಸ್ತ್ರೀಯರು ಕಾಮುಕರ ಕೈಯಲ್ಲಿ ಸಿಕ್ಕು ನಲುಗಿ ಬಸ್ಮವಾದವರು ಎಷ್ಟೋ ಜನ. ಇನ್ನೂ ಕೆಲವು ಸ್ತ್ರೀಯರು ಚಾಣಾಕ್ಷತನದಿಂದ ಉಪಾಯದಿಂದ ಪಾರಾಗುತ್ತಾರೆ. ಇದಕ್ಕೆಲ್ಲ ಹೆಣ್ಣಿನಲ್ಲಿಯ ತಾಳ್ಮೆ, ಜಾಣತನ, ಧೈರ್ಯವೇ ಕಾರಣವಾಗಿದೆ. ಇಂತಹ ಕಥೆಗಳು ಜನಪದೀಯ

ಗುಣವನ್ನು ಹೊಂದಿದ್ದು, ಹೆಣ್ಣಿನಲ್ಲಿ ಇನ್ನಷ್ಟು ಧೈರ್ಯವನ್ನು ತುಂಬುತ್ತವೆ ಎಂಬ ಆಶಯವನ್ನು ಗೊಂದಲಿಗರ ಕಥೆಗಳಲ್ಲಿ ಮೂಲಕ ಕಂಡುಕೊಳ್ಳಬಹುದು.

### ೪.೯ ಶಾಪಯುಕ್ತ ದೇವಲೋಕದ ದೇವಕನ್ಯೆಯರು

ಗೊಂದಲಿಗರ ಕಥನಗಳು ಪೌರಾಣಿಕ ವಿಷಯ ವಸ್ತುಗಳನ್ನು ತನ್ನ ಕಥನದೊಂದಿಗೆ ಹೆಣೆದುಕೊಂಡಿವೆ. "ಶಾಪ" ಎನ್ನುವ ಪದವನ್ನು ನೋಡಿದಾಗ ದೈವಶಕ್ತಿಯು ಒಂದು ದುಷ್ಟಶಕ್ತಿಗೆ ಶಾಪವನ್ನು ಕೊಡುವುದು. ದುರ್ಬಲ ಮನಸ್ಸು ಶಾಪಯುಕ್ತವಾಗುವುದು ಅಥವಾ ಯಾವುದೊ ಒಂದು ಸಾಧನೆ. ಪರಿವರ್ತನೆ ಹೊಸ ಹುಟ್ಟು ಮುಂತಾದ ಕಾರಣಗಳಿಂದ ಶಾಪ ಹೊಂದಿ ವಿಮೋಚನೆಯಾದ ಹಲವಾರು ಕಥೆಗಳನ್ನು ಪುರಾಣಗಳಲ್ಲಿ ಕಾಣುತ್ತೇವೆ. ಉದಾ: ಕಲ್ಲಾದ ಅಹಲ್ಯೆ, ಎಲ್ಲಮ್ಮನಾಗಿ ಪೂಜೆಗೊಳ್ಳುತ್ತಿರುವ ರೇಣುಕೆ ಮುಂತಾದವರು ಶಾಪದಿಂದ ಬಳಲಿ ಮುಂದೆ ಪಾವನರಾಗುತ್ತಾರೆ. ಅಂತಹ ಹಲವಾರು ಘಟನೆಗಳನ್ನು ನೋಡಲಾಗಿ ಗೊಂದಲಿಗರ ಕಥೆಯಲ್ಲಿ ಬರುವ ಪತಿವೃತಾ ಶಿವಲೋಚನ ಒಬ್ಬ ದೇವಕನ್ಯೆಯಾಗಿದ್ದಾಳೆ. 'ದೇವಲೋಕದಲ್ಲಿ ದೇವಾನು ದೇವತೆಯರು, ಅಷ್ಟ ದಿಕ್ಕು ಪಾಲಕರು, ಸೂರ್ಯ ಚಂದ್ರಾದಿಗಳು ಗಂಧರ್ವರು, ಕಿಂಪುರುಷರು ಕಿನ್ನರು ಎಲ್ಲರು ಇದ್ದ ಸಭಾದಲ್ಲಿ ರಂಭಾ ಎಂಬ ದೇವಕನ್ಯೆ ಸಂಗೀತ ಮಾಡ್ತಿದ್ಲು. ಆಗ ನಾರದ ಆಕೆಯ ಗಾಯನ ಕೆಡಸ್ಬೇಕು ಎಂದು ತುಳಿಸಿ ಹುಳು ಆಗಿ ಎರಡು ಕುಚಗಳ ನಡುವೆ ಕುತಗೊಂಡನು. ಆಕೆ ತುಳಸಿ ಹುಳ ನೋಡುತ್ತ ನಿಂತು ಬಿಟ್ಟಳು ಅದನ್ನು ಕಂಡ ಪರಮಾತ್ಮನು.

"ಮಗಳೇ ನೀನು ಸಭಾ ಕೆಡಿಸಿ ಬಿಟ್ಟೆಲ್ಲಮ್ಮಾ ! ನೀನು ಅವಿಚಾರ ಮಾಡ್ಬಿಟ್ಟೆ."[೨೪] ನೀನು ದೇವಲೋಕದಾಗ ಇರಾಕಿ ಅಲ್ಲ ದೇವ ಸಭಾ ಕೆಡಿಸಿ ! ಮರ್ತ್ಯಕ್ಕೆ ನಡೀ ಅಂದ ಪರಮಾತ್ಮ" ಈ ಶಾಪ ಕಾರಣದಿಂದ ರಂಭಾ ಎನ್ನುವವಳು ಮರ್ತದಲ್ಲಿ ಶಿವಲೋಚನಳಾಗಿ ಬೆಳೆಯುತ್ತಾಳೆ. "ದೇವರ ಸಭಾ ಕೆಡಿಸಿ ಮರ್ತ್ಯಕ ಬಂದಿ ಇಲ್ಲಿ ಮುಂದೆ ಋತುಮತಿಯಾಗಿ ಯೌವ್ವನ ಪ್ರಾಯಕ್ಕೆ ಬಂದಾಗ ನಿನಗೆ ಮರಣ ಬರ್ಲಿ, ನಿನ್ನ ಮರಣ ನಿನಗೆ ಗೊತ್ತಿರಬೇಕು ಇನ್ನಾರಿಗೂ ಗೊತ್ತಾಗಬಾರ್ದು ಅಂತ ಶಾಪಕೊಟ್ಟು ಮಕ್ಕಳಿಲ್ಲದ ದಂಪತಿಗಳಿಗೆ ಉಡಿಯಾಗ ಕೂಸು ಹಾಕಿ ಹೋದನು."[೨೫]

### ೪.೧೦ ಬಲಿದಾನ

"ಜನಪದ ಕಥನಗೀತೆಗಳು ಹೆಣ್ಣಿನ ಬದುಕು, ದು:ಖ, ದುಮ್ಮಾನ, ದುರಂತಗಳನ್ನು ವಾಸ್ತವ ನೆಲೆಗಟ್ಟಿನಲ್ಲಿಯ ದೌರ್ಜನ್ಯಗಳು ಕಥನಗೀತೆಗಳ ಪ್ರಧಾನ ವಸ್ತುಗಳಾಗಿವೆ. ಅತ್ತೆ. ಮನೆಗೆ ಸೊಸೆಯಾಗಿ ಬಂದು ಒಮ್ಮೆ ನಾದಿನಿಯ ಮತ್ತೊಮ್ಮೆ ಮೈದುನನ ಇನ್ನೊಮ್ಮೆ ಕೂಡಿದ ಗಂಡನ

ಇಲ್ಲವೆ ಹೊರಗಿನವರ ಸಂಶಯಕ್ಕೆ ಒಳಗಾಗಿ ನಿಷ್ಕರುಣವಾಗಿ ತೊಂದರೆಯಲ್ಲಿ ಸಿಕ್ಕಿ ಬಿದ್ದು ಕಣ್ಣೀರಿನಲ್ಲಿ ಕೈ ತೊಳೆಯುವ ಅಸಹಾಯಕ ಹೆಣ್ಣುಮಕ್ಕಳ ಚಿತ್ರ ಒಂದೆಡೆಯಾದರೆ, ಗಂಡನ ಸಂಶಯಕ್ಕೆ ಗುರಿಯಾಗಿ ಪಾತಿವ್ರತ್ಯವನ್ನು ಸಾಬೀತು ಪಡಿಸಲು ಅಗ್ನಿ ಪ್ರವೇಶಕ್ಕೆ ಗುರಿಯಾದುದು ಇನ್ನೊಂದೆಡೆ. ತುಂಬಬೇಕಾದ ಕೆರೆ ಅಥವಾ ಉಕ್ಕಬೇಕಾದ ಪ್ರವಾಹಗಳಿಗೆ ತಮ್ಮನ್ನು ಅರ್ಪಿಸಿ ಕೊಂಡವರು ಹಲವರು. ಅನೇಕ ಕ್ಲಿಷ್ಟ ಪರೀಕ್ಷೆಗಳಿಗೆ ಒಡ್ಡಿಕೊಂಡು ಸಾವನ್ನಪ್ಪಿದ ಬಸಿರಿ, ಬಾಣಂತಿಯರು, ಮದುವೆ ಹೊಸ್ತಿಲಲ್ಲಿ ಕಾಲಿಟ್ಟವರು, ಬಂಜೆತನ ಹೊಂದಿದವರು ಸಮಾಜದಿಂದ ಬಹಿಷ್ಕೃತರಾದವರು, ಎಳೆಯ ಮಕ್ಕಳನ್ನು ಪಡೆಯದವರು, ಹರೆಯದಲ್ಲಿ ಗಂಡನನ್ನು ಕಳೆದುಕೊಂಡು ಪರಿತಪಿಸುವವರು ಕೂಡಾ ಹೇರಳವಾಗಿ ಸಿಗುತ್ತಾರೆ. ಇಲ್ಲಿನ ಪಾತ್ರಗಳು ತಮ್ಮ ಕರುಣಾಜನಕ ಕಥೆಯನ್ನೇ ಹೇಳಿಕೊಳ್ಳುತ್ತವೆ. ಮೌನವಾಗಿ ಎಲ್ಲವನ್ನು ಒಪ್ಪಿಕೊಳ್ಳುವ ಪರಿಸ್ಥಿತಿ ಇದ್ದರೂ ಅಂಥ ಸ್ಥಿತಿಯನ್ನು ಕೆಲವೊಮ್ಮೆ ಪ್ರತಿಭಟಿಸುವ ಮನೋಭಾವದ ತಾಣ ನಮಗೆ ಸಿಗುತ್ತವೆ.”[೨೬]

ಜನಪದರ ಬದುಕಿನಲ್ಲಾಗಲಿ ಅಥವಾ ಒಂದು ಬುಡಕಟ್ಟು ಸಮುದಾಯಕ್ಕೆ ಸೇರಿದ ಜನಾಂಗವಾಗಿರಲಿ, ಇಲ್ಲಿ ವ್ಯಕ್ತಿಗಿಂತ ಸಮುದಾಯವೇ ಮುಖ್ಯವಾಗಿರುತ್ತದೆ. ಅದಕ್ಕಾಗಿ ಸಮುದಾಯದ ಹಿತಕ್ಕಾಗಿ ಅವರು ಹಾಕಿದ ಕಟ್ಟುಪಾಡು, ಸಂಪ್ರದಾಯಗಳಿಗೆ ಬದ್ದರಾಗಿ ಮೌನವಾಗಿ ಕೆಲವು ಸಾರಿ ಆ ನಿಯಮಗಳನ್ನು ಶರತ್ತುಗಳನ್ನು ಪಾಲಿಸುತ್ತ, ವ್ಯಕ್ತಿ ಸಮಾಜದ ಒಪ್ಪಿತ ಮೌಲ್ಯಗಳನ್ನು ಪಾಲಿಸುತ್ತಾನೆ. ಇಲ್ಲಿ ಪ್ರತಿಭಟಿಸುವ ಮನೋಭಾವ ಅಪರೂಪ ವಾಗಿರುತ್ತದೆ.

“ಜನಪದ ಕಥನ ಗೀತೆಗಳಲ್ಲಿ ವ್ಯವಸ್ಥೆಯ ಕ್ರೌರ್ಯಕ್ಕೆ ಸಿಲುಕಿ ತತ್ತರಿಸಿದ ಅವಮಾನಕರ ಶೋಷಣೆ, ಅದಕ್ಕೆ ಶೋಷಿತರು ತೋರಿದ ಪ್ರತಿಭಟನೆಯು ಜನಪದ ಕಥನ ಗೀತೆಗಳಲ್ಲಿ ಬಹಳ ಮುಖ್ಯವಾಗಿವೆ. ಸಾಮಾಜಿಕ ಕಟ್ಟುಪಾಡುಗಳಿಂದ ತಮ್ಮ ಜೀವನಕ್ಕೆ ಧಕ್ಕೆ ಉಂಟಾದಾಗ ಬದುಕಿನ ಬಗೆಗೆ ಕಟ್ಟಿಕೊಂಡ ಕನಸುಗಳು ನುಚ್ಚು ನೂರಾದಾಗ ಶಾಸ್ತ್ರ, ಸಂಪ್ರದಾಯ, ಧರ್ಮ, ಅಧಿಕಾರ ಇಂತಹ ಆತಂಕಾರಿ ವಿಚಾರಗಳು ಬದುಕನ್ನು ಹೇಗೆ ದುರಂತವಾಗಿಸಿ, ನರಕವಾಗಿಸಿವೆ ಆತಂಕಕ್ಕೆ ತಳ್ಳಿವೆ ಎಂಬುದನ್ನು ಜನಪದ ಕಥನಗೀತೆಗಳಲ್ಲಿ ಮನಗಾಣಬಹುದಾಗಿದೆ ಸಮಾಜ ಒಪ್ಪಿತ ಸವಾಲನ್ನು ಒಪ್ಪಿ ತಲೆಬಾಗಿದವರೇ ಹೆಚ್ಚು ಅಂತವರ ಮಧ್ಯದಲ್ಲಿ ಕೆಲವು ಸಾರಿ ಪ್ರತಿಭಟನಾ ಧ್ವನಿಗಳನ್ನು ನಾವು ಗುರುತಿಸಬಹುದು.

"ಕನ್ನಡದ ಜಾನಪದ ಸಾಹಿತ್ಯದಲ್ಲಿ ಕಥನ ಗೀತೆಗಳು ಕರ್ನಾಟಕದಾದ್ಯಂತ ಹೇರಳವಾಗಿವೆ. ಕೆರೆಗೆ ಹಾರ, ಹುಳಿಯಾರು ಕೆಂಚಮ್ಮ, ವಡ್ಡರ ಬೋಯಿ, ಮದಗದ ಕೆಂಚಮ್ಮ, ಧಣಿಯಮ್ಮ, ಚಿಕ್ಕೋಳು ಹಿರಿದಿಮ್ಮಿ, ತೌಡಿನಾಗಮ್ಮ, ಮಹಾಸತಿ ಕಾಟವ್ವ, ಮಹಾಸತಿ ವೀರತಿಮ್ಮವ್ವ, ಈರೋಬಿ, ಉತ್ತರದೇವಿ, ಗುಣನಾಗಲಿ, ಹರಿಗೋಲು, ರೂಪಾಣ, ಕಲಿಯುಗದ ಬಾಲೆ,

ಕಾಶಿಬಾಯಿ, ಗೋವಿನ ಹಾಡು, ಬಾಳಪಟರಾಯ ನಾಗವ್ವ, ಹೊನ್ನಮ್ಮ, ಚತುರಂಗಿ ನಾದಿನಿ, ಮೊದಲಾದವು ಕನ್ನಡ ಜನಪದ ಶ್ರೇಷ್ಠ ಕಥನಗೀತೆಗಳಾಗಿವೆ."[೨೭]

ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿನ ಶೋಷಣೆ, ಆತ್ಮಾರ್ಪಣೆ, ಸತಿಸಹಗಮನ ಕಂಡುಬರುತ್ತವೆ. ಒಂದು ಕಡೆ ಲೋಕಕಲ್ಯಾಣಕ್ಕಾಗಿ ಆತ್ಮಾರ್ಪಣೆ ಮಾಡಿಕೊಂಡರೆ ಇನ್ನೊಂದು ಕಡೆ ಪತಿಯ ಮರಣದ ನಂತರ ಸತಿ ಆತನ ಜೊತೆಗೆ ಅಗ್ನಿ ಪ್ರವೇಶ ಮಾಡುವುದು ಕಂಡು ಬರುತ್ತದೆ. ಇತಿಹಾಸದಲ್ಲಿಯೂ ಕೂಡ ರಜಪೂತ ಮನೆತನದಲ್ಲಿ ಸತಿಸಹಗಮನ ಎಂಬ ಪದ್ಧತಿಯನ್ನು ಕಾಣುತ್ತೇವೆ. ಕೆಲವು ಬುಡಕಟ್ಟು ಸಮುದಾಯದಲ್ಲಿಯೂ ಒಂದು ಕಾಲದಲ್ಲಿ ಒಂದಕ್ಕಿಂತ ಹೆಚ್ಚು ಹೆಂಡಂದಿರು ಇದ್ದ ಸಂದರ್ಭದಲ್ಲಿ ಪತಿಯ ಜೊತೆಗೆ ಅಗ್ನಿ ಸ್ಪರ್ಶ ಮಾಡಲು ಒಬ್ಬಳಿಗೆ ಮಾತ್ರ ಅವಕಾಶ ಕೊಡಲಾಗುತ್ತಿತ್ತು. ಇನ್ನೊಬ್ಬಳಿಗೆ ಕುಟುಂಬ ಪರಿಪಾಲನೆಯ ಜವಾಬ್ದಾರಿಯನ್ನು ಹೊರಿಸಲಾಗುತ್ತಿತ್ತು. ಇವರು ಸಹ ಸಮಾಜದ ಹಿತಕ್ಕಾಗಿ ಸಂಪ್ರದಾಯ ಪರಿಪಾಲನೆಗಾಗಿ ಸಂತೋಷದಿಂದ ಆತ್ಮಾರ್ಪಣೆಯನ್ನು ಮಾಡುತ್ತಿದ್ದುದನ್ನು ದಾಖಲಿಸಲಾಗಿದೆ.

"ಜನತೆಯ ಕಲ್ಯಾಣಕ್ಕಾಗಿ ತ್ಯಾಗ, ಬಲಿದಾನ, ಆತ್ಮಾರ್ಪಣೆಗಳನ್ನು ಕುರಿತ ನೂರಕ್ಕೂ ಹೆಚ್ಚು ಕಥನ ಗೀತೆಗಳ ಮಾದರಿಗಳು ಕರ್ನಾಟಕದಾದ್ಯಂತ ಸಿಗುತ್ತವೆ. ಇವು ಬಹುಮಟ್ಟಿಗೆ ಕೆರೆಗೆ ಬಲಿಯಾದವರ ಕಥನಗೀತೆಗಳಲ್ಲಿ 'ಕೆರೆಗೆ ಹಾರ' 'ಅಣಜ ಹೊನ್ನಮ್ಮ' ಬಳ್ಳಾರಿ ಜಿಲ್ಲೆಯ ಕಥನಗೀತೆಗಳು ಉತ್ತರ ಕರ್ನಾಟಕದಲ್ಲಿ 'ಬಾವಿ ನೀರಿಗಾಗಿ ಸೊಸೆ ಬಲಿ' ಕಥನ ಗೀತೆಯ ಮಾದರಿಗಳು ಸಿಗುತ್ತವೆ. ಕೆರೆಯ ಹೊನ್ನಮ್ಮ ಕೊಡಗು ಜಿಲ್ಲೆಯ ಕಥನ ಗೀತೆ. ಇದೇ ಮಾದರಿಯವ ದಕ್ಷಿಣ ಕರ್ನಾಟಕದಲ್ಲಿ ಐದು ಪಾಠಾಂತರಗಳು ದೊರಕಿವೆ. 'ಕುಣಿಗತ ಕರೆ' ಹುಳಿಯರು ಕೆಂಚಮ್ಮ, ತುಮಕೂರು ಜಿಲ್ಲೆಯ ಕಥನಗೀತೆಗಳು ಒಡ್ಡರ ಬೋಯಿ ಮಂಡ್ಯಜಿಲ್ಲೆಯ ಕಥನಗೀತೆ."[೨೮] ಹೀಗೆ ಹಲವಾರು ಕಥನ ಗೀತೆಗಳು ನಮ್ಮ ಜನಪದೀಯ ಮನದಾಳದ ಗೀತೆಗಳಾಗಿವೆ. ಲೋಕ ಕಲ್ಯಾಣಕ್ಕಾಗಿ ಹೆಣ್ಣು ತನು ಮನದಿಂದ ಸದಾ ಸಿದ್ದಳೂ ಹಾಗು ಅವಳು ಫಲವಂತಿಕೆ ಪ್ರತೀಕ. ಅವಳಿಂದ ಎಲ್ಲವು ಸಾಧ್ಯ ಎಂದು ಅವಳನ್ನು ಕಾರಣಿಕರ್ತಳನ್ನಾಗಿ ಮಾಡುತ್ತಿದ್ದರು.

"ಅನೇಕ ಬುಡಕಟ್ಟುಗಳಲ್ಲಿ, ಕೆಲಮಟ್ಟಿಗೆ ಶಿಷ್ಟ ಪರಿಸರದಲ್ಲೂ ಬಹಿಷ್ಕಾರ ಪದ್ಧತಿಗಳು ಕಂಡುಬರುತ್ತವೆ. ಮದುವೆಯಾಗದೆ ಮೈನೆರೆದ ಹೆಣ್ಣು ಮಗಳನ್ನು ಕಾಡಿಗೆ ಅಟ್ಟುವಂತ ಕೌಟುಂಬಿಕ ಘಟನೆಯೂ ಸಾಮಾಜಿಕ ಪ್ರಭಾವದ ಹಿನ್ನಲೆಯಲ್ಲಿಯೇ ಒಳಪಡುತ್ತದೆ. ಮಾನಸಿಕವಾಗಿ ಹಿಂಸೆಗೆ ಒಳಗಾಗುವಂಥ ಶಿಕ್ಷೆಯೇ ಬಹಿಷ್ಕಾರ ಅನೂಚಾನವಾಗಿ ಬೆಳೆದು ಬಂದ ಭಾವನಾತ್ಮಕ ಸಂಬಂಧಗಳನ್ನು ಕಡಿದು ಹಾಕುವ ಪದ್ಧತಿ ಆದಾದುದರಿಂದ ಮಾನಸಿಕ ಹಿಂಸೆ ಲಭ್ಯವಾಗುತ್ತದೆ. ಮಾನಸಿಕ ಆಘಾತಗಳನ್ನು ತಡೆದುಕೊಳ್ಳಲಾಗದವರು ಸಾಧ್ಯವಾದಷ್ಟು ಮಟ್ಟಿಗೆ ಅಂಥದ್ದಕ್ಕೆ

ಅವಕಾಶವಾಗದಂತೆ ನಡೆದುಕೊಳ್ಳುವುದು ಸಹಜ. ಪರ ಪುರುಷರೊಡನೆ ಏರ್ಪಡುವ ಗುಪ್ತ ಸಂಬಂಧಗಳಿಗೂ ಅಂಥ ಶಕ್ತಿ ಇರುವುದರಿಂದ ಅಂಥ ಹೆಣ್ಣು ಮಕ್ಕಳ ಬಗ್ಗೆ ಹಿರಿಯರು ತುಂಬ ಎಚ್ಚರಿಕೆ ವಹಿಸುತ್ತಾರೆ. ಕುಟುಂಬ ಸಮಾಜದಿಂದ ಬಹಿಷ್ಕೃತಗೊಂಡ ಹೆಣ್ಣನ್ನು ಕಾಡಿಗೊಯ್ದು ಕೊಲ್ಲುವುದು, ತಪ್ಪಿತಸ್ಥರನ್ನು ಶಿಕ್ಷೆಗೆ ಗುರಿಪಡಿಸುವುದೇ ಜನಪದ ಬದುಕಿನುದ್ದಕ್ಕೂ ಗೋಚರಿಸುತ್ತದೆ."[೨೯]

ವೃತ್ತಿಗಾಯಕರಾದ ಗೊಂದಲಿಗರು ಹೇಳುವಂತ ಹಲವಾರು ಕಥೆಗಳಲ್ಲಿ ಸತಿ ಸುಲೋಚನೆ, ಶಿಲಾವತಿ, ಜಯರಾಣಿ, ಕಾಂಬೋಜಿ, ಶಿರಿದೇವಿ, ಬಾಳಭಿಕ್ಷುಕ, ನೀಲಸೇನ, ಅರಣ್ಯಕುಮಾರ, ಪತಿವೃತಾ ಶಿರೋಮಣಿ ಚಂದ್ರಲೇಖ ಮುಂತಾದ ಕಥೆಗಳಲ್ಲಿ ಹೆಣ್ಣಿನ ಶೋಷಣೆ, ತ್ಯಾಗ, ಬಲಿದಾನ ಮುಂತಾದ ಅಂಶಗಳನ್ನು ಕಾಣುತ್ತೇವೆ. ಉದಾಹರಣೆ 'ಸತಿ ಸುಲೋಚನೆ' ಎಂಬ ಕಥೆಯ ಒಂದು ಪ್ರಸಂಗದಲ್ಲಿ "ನಿನ್ನ ತಂಗಿಯನ್ನು ಕೊಂದು ಬಾ ಎಂದು ತಂದೆ ಮಗನಿಗೆ ಹೇಳಿದರೆ ಆ ಕೆಲಸ ಮಾಡಲು ಒಪ್ಪದ ಮಗ ಅದಕ್ಕೊಂದು ಕಥೆ ಹೇಳಿ. ಹೀಗೆ ಅನಾವಶ್ಯಕವಾಗಿ ಸತ್ತ ಆ ಗಿಳಿಯ ಜೀವ ತಂದುಕೊಡು ತಂಗಿಯನ್ನು ಕೊಲ್ಲುತ್ತೇನೆ.' ಎಂದು ಉತ್ತರಿಸುತ್ತಾನೆ. ಹೋದ ಜೀವ ತಂದುಕೊಡುವುದು ಹೇಗೆ? ಹಾಗೆಂದು ಇಲ್ಲಿನ ತಂದೆ ತಲೆ ಕೆಡಿಸಿಕೊಳ್ಳಲು ಹೋಗುವುದಿಲ್ಲ. ಇನ್ನೊಬ್ಬ ಮಗನನ್ನು ಕರೆದು ಆಜ್ಞಾಪಿಸುತ್ತಾನೆ. ಎಲ್ಲ ಮಕ್ಕಳು ಒಂದು ಕಥೆಯನ್ನು ಹೇಳಿ ಹೋದ ಜೀವವನ್ನು ಮತ್ತೇ ತಂದುಕೊಡು ಎಂದು ಕೇಳುವವರೇ. ಹೊದ ಜೀವ ಮತ್ತೆ ಬರಲಾರದು. ಕೊಲ್ಲುವ ಮುಂಚೆ ಪೂರ್ವಾಪರ ಯೋಚನೆ ಮಾಡಬೇಕು. ಕಡೆಗೆ ಒಬ್ಬ ಮಗ ಒಲ್ಲದ ಮನಸ್ಸಿನಿಂದ ಒಪ್ಪುತ್ತಾನೆ. ಹಾಗೆ, ತಂಗಿಯನ್ನು ಅಡವಿಗೆ ಒಯ್ದು ಕೊಂದು ಬರುವ ಚಿತ್ರಣ ರಾಮಾಯಣದ ಪ್ರಕರಣವನ್ನು ಹೋಲುತ್ತದೆ. ಅಲ್ಲಿ ಸೀತೆ ಗರ್ಭಿಣಿಯಾಗಿದ್ದಂತೆ ಇಲ್ಲಿ ಸುಲೋಚನೆಯೂ ಗರ್ಭಿಣಿ. ಸೀತೆಯ ಮೇಲೆ ಬಂದ ಅಪವಾದವೇ ಸುಲೋಚನೆಯ ಮೇಲೆಯೂ ಬಂದಿರುತ್ತದೆ. 'ಪತಿವೃತಾ ಶಿರೋಮಣಿ ಚಂದ್ರಲೇಖ' ಕಥೆಯಲ್ಲಿ ಚಂದ್ರಲೇಖ ರಾಜನಿಗೆ ಹಂಸಗಳು ಮುತ್ತು ರತ್ನ ಮೇಯುತ್ತವೆ ಎಂದು ಹೇಳಿದಾಗ, ರಾಜ ಅದನ್ನು ಪರೀಕ್ಷಿಸಲು ಹೇಳಿ, ಮಂತ್ರಿಗಳಿಂದ ಅದು ಸುಳ್ಳು ಎಂದು ತಿಳಿದು ಅರಣ್ಯಕ್ಕೆ ಕರೆದುಕೊಂಡು ಹೋಗಿ ಅವಳನ್ನು ಕಡಿದು ಬರುವಂತೆ ಕಠಿಣ ಶಿಕ್ಷೆ ಕೊಡುತ್ತಾನೆ. ಗರ್ಭಿಣಿಯಾದ ಚಂದ್ರಲೇಖಳನ್ನು ಹತಾರಿಯಿಂದ ಕಡೆಯಲು ಹೋದಾಗ ಶಿವನ ಕರುಣೆಯಿಂದ ಹಾರವಾಗಿ ಮಾರ್ಪಾಡಾಗುತ್ತದೆ. ಇಲ್ಲಿ ಸತಿ-ಪತಿಯರ ನಂಬಿಕೆ ಗಮನಾರ್ಹವಾದುದು ಎಂಬುದು ತಿಳಿದು ಬರುತ್ತದೆ.

### ೪.೧೧ ಬಂಜೆ, ಬಸಿರು, ಪಾತಿವ್ರತ್ಯ

ಕೆಲವು ಕಥನಕಾವ್ಯಗಳಲ್ಲಿ ಬಂಜೆ, ಬಸಿರು, ಪಾತಿವೃತ್ಯ ಇವುಗಳಿಗೆ ಕುರಿತಾಗಿ ವಿಶೇಷವಾಗಿ ಹೆಣ್ಣಿಗೆ ಸಂಬಂಧಪಟ್ಟ ಘಟನೆಗಳು ಸಾಮಾನ್ಯವಾಗಿ ಕಂಡು ಬರುತ್ತವೆ.

"ಮುಂಜಾನೆ ಹುಟ್ಟಲಿ ಸಂಜೀಲಿ ಸಾಯಲಿ

ಬಂಜೆಂಬು ಶಬುದ ಬಿಡಿಸಯ್ಯ"

ಎಂಬ ಮಾತು ಬಂಜೆತನದ ಕ್ರೂರ ರೂಪವನ್ನು ನಮಗೆ ತೋರಿಸುತ್ತದೆ. ಬಂಜೆಯ ನೆರಳನ್ನು ಸಹ ಸೇರದಂತ ಜನರೂ ಈಗಲೂ ಕೂಡ ನಮ್ಮ ಸುತ್ತಮುತ್ತಲಿದ್ದಾರೆ. ಅದಕ್ಕಾಗಿ ಸಮಾಜದಲ್ಲಿ ಮದುವೆಯಾದ ಹೆಣ್ಣು ಮಾನ್ಯತೆ ಪಡೆಯಬೇಕಾದರೆ ಹೆಣ್ಣಿಗೆ ಬಸಿರು ಅಗತ್ಯ. ಇಲ್ಲಿ ಬಸಿರು ಆಕೆಗೆ ಗೌರವದ ಸಂಕೇತ. ಪಾತಿವೃತ್ಯದ ಮೌಲ್ಯವನ್ನು ತಲೆಎತ್ತಿ ತೋರಿಸುವಂತದ್ದು.

'ಕಲಿಯುಗದ ಬಾಲೆ' ಎಂಬ ಗೊಂದಲಿಗರ ಕಥನದಲ್ಲಿ ಹೆಣ್ಣೊಬ್ಬಳು ಗಂಡನಿಲ್ಲದಾಗ ಮಿಂಡನನ್ನು ಮನೆಗೆ ಕರೆದು ಮಕ್ಕಳನ್ನು ಪಡೆದು ಕೊಟ್ಟಿಗೆಗೆ ದಬ್ಬುವ ಸಂದರ್ಭ ಹೀಗೆ ಹೇಳುತ್ತದೆ.

"ಹುಣಸೆ ಚಚ್ಚಿ ತಕ್ಕೊಂಡು ಮುಂಡೆ

ಹಿಂಸೆ ಮಾಡುತ್ತಾಳೆ ! ಲೌಡಿ

ಶೋಕವ ಮಾಡುತ್ತಾಳೆ."[೩೦]

ಹೆಣ್ಣು ಪಾತಿವೃತ್ಯವನ್ನು ಕಳೆದುಕೊಂಡಾಗ ಸಮಾಜದಲ್ಲಿ ಅವಳು ಯಾವ ಸ್ಥಾನವನ್ನು ಪಡೆಯುತ್ತಾಳೆ ಎಂಬುದಕ್ಕೆ ಈ ಬೈಗುಳಗಳೇ ಸಾಕ್ಷಿಯಾಗಿವೆ. ಇನ್ನೊಂದು ಕಡೆ ತನ್ನ ಪಾತಿವೃತ್ಯವನ್ನು ಉಳಿಸಿಕೊಳ್ಳಲು ತನ್ನ ಮಗುವನ್ನು ತ್ಯಾಗ ಮಾಡುವ ಪ್ರಸಂಗವನ್ನು ನಾವು ಕಾಶಿಬಾಯಿ ಕಥಾನಕದಲ್ಲಿ ಕಾಣುತ್ತೇವೆ. ಸ್ಟೇಷನ್ ಮಾಸ್ತರನ ಕೈಗೆ ಸಿಕ್ಕ ಕಾಶಿಬಾಯಿ ಪ್ರಯತ್ನ ಮಾಡಿದಾಗ ಸ್ಟೇಷನ ಮಾಸ್ತರ ಅವಳನ್ನು ಕೊಲ್ಲಲು ಪ್ರಯತ್ನಿಸುತ್ತಾನೆ. ಆಗ "ನನ್ನ ಮುತ್ತೈದೆತನ ತಣ್ಣಗೆ ಇದ್ದರ ಇಂಥ ಏಸು ಪುತ್ರ ಪಡೆದೆನೋ" ಎಂದು ಹೇಳುವ ಮಾತು ಅತೀ ಮುಖ್ಯವಾಗುತ್ತವೆ. ಇನ್ನು ಕೆಲವು ಕಡೆ ಪಾತಿವೃತ್ಯದ ಬಗ್ಗೆ ಸಂಶಯ ಮೂಡಿದಾಗ ಅವರು ಪವಾಡ ಸದೃಶ್ಯಗಳನ್ನು ಸೃಷ್ಟಿಸಿ ತಮ್ಮ ಪಾವಿತ್ರ್ಯವನ್ನು ಸಾರಿ ಹೇಳುವಂತಹ ಹಲವಾರು ಕಥಾನಕಗಳನ್ನು ನಾವು ಕಾಣುತ್ತೇವೆ. ಉದಾಹರಣೆ ಒಂದು ಕಥಾನಕದಲ್ಲಿ ಮುಚ್ಚಿದ ಅಗಸಿ ಬಾಗಿಲುಗಳನ್ನು ತೆರೆಯುವುದು ಅವಳು ಹೊರಟು ನಿಂತಾಗ

"ಹೊಂಟಾಳ ನೀಲಮ್ಮ ಬಿರಿಬಿರಿ ! ಅವಳ

ನೆರಳ ಬಿದ್ದಗಸಿ ತೆಗೆದಾವ"

ಇನ್ನೊಂದು ಕಡೆ ರಾಮ ಸೀತೆಯನ್ನು ಸಂಶಯದಿಂದ ಕಂಡಾಗಿನ ದೃಶ್ಯದಲ್ಲಿ ಜನಪದ

ದೃಷ್ಟಿ ಸೀತೆಯ ಪರವಾಗಿ ಮಾತನಾಡುತ್ತದೆ.

"ಅತ್ತಿ ಅತ್ತಿಗಿ ಕೇಳ ಮಾತು ಸೀತಾದೇವಿ
ನಮ್ಮಣ್ಣ ನಿಮಗ ಸತ್ಯ ಮಾಡಂದಾನ
ಅವು ಎಂಥ ಸತ್ಯ ಹೇಳರಿ ಮೈದುನ
ಜನರೆ ಚಿಗತು ಬನ ಆಗಬೇಕಂದಾನ
ತೊಯದೊಂದು ಉಟ್ಟಾಳ ತೊಯದೊಂದು ತೊಟ್ಟಾಳ
ಒಣಕಿಗಿ ಕೈ ಮುಟ್ಟ್ಯಾಳ ! ಒಣಕಿ ಬಿಗತು
ಬನ ಆಗಿಲಿಲ್ಲ."[೩೧]

ಹೀಗೆ ಸೀತಾದೇವಿ ತನ್ನ ಪಾತಿವೃತ್ಯದಿಂದ ಮುಟ್ಟಿದ ಗುಲಗಂಜಿ ಗುಡ್ಡವಾಗುತ್ತದೆ. ಹಾಳಬಾವಿಗೆ ನೀರು ಬರುತ್ತದೆ. ಕೊನೆಗೆ ಸತ್ತವರ ಸಂಗಡ ಮಾಡನಾಡಬೇಕೆಂದಾಗ ಅವಳು ಪುನ: ಮಡಿಯಿಂದ

"ಮಾವನ ಗೋರಿಗಿ ಕೈಯ ಮುಗದಾಳ
ಸತ್ಯಳ ಸೀತಾನ ತಪ್ಪಿಲ್ಲ ತಡಿ
ಒಪ್ಪಿಕೊರೊ ಮಗ ರಾಮಸ್ವಾಮಿ"

ಎಂದು ಗೊರಿಯಿಂದ ಹೆಣವೇ ಎದ್ದು ಹೇಳುವ ಮಾತು ಹೆಣ್ಣಿನ ಜೀವನದ ಪಾತಿವೃತ್ಯದ ಮಹತ್ವವನ್ನು ತಿಳಿಸುತ್ತದೆ. ಇದೊಂದು ನಮ್ಮ ಕಥಾನಕ ದೃಷ್ಟಿಯಿಂದ ಅದ್ಭುತವೆನಿಸುತ್ತದೆ.

"ಬಂಜೆಯ ಮನಿ ಮುಂದ ಅಂಜೂರ ಗಿಡಹುಟ್ಟಿ
ಟೊಂಗಿ ಟೊಂಗಿಲಿ ಗಿಳಿ ! ಹೇಳ್ಯಾವ
ಬಂಜಿ ನಿನ ಬದುಕು ಹೆರವರಿಗೆ"[೩೨]

ಸಂತಾನಗೊಸ್ಕರ ಹೆಣ್ಣು ಅನೇಕ ಸಂಪ್ರದಾಯಗಳಿಗೆ ಕೂಡಿ, ಆಚರಣೆಗಳಿಗೆ ಕಟ್ಟುಬಿದ್ದು ಹಲವಾರು ವ್ರತಗಳನ್ನು, ಹರಕೆಗಳನ್ನು ಹೊರುತ್ತಾಳೆ. ಒಬ್ಬ ವ್ಯಕ್ತಿಯ ಆಚರಣೆಗಳು ಆದರ್ಶಪ್ರಾಯವಾಗಿದ್ದರೆ ಅವುಗಳನ್ನು ಇತರರು ಅನುಸರಿಸುತ್ತಾರೆ. ಕಾಲಕ್ರಮದಲ್ಲಿ ಅವು ರೂಢಿಗೆ ಬಂದು ಜನಜೀವನದಲ್ಲಿ ಹಾಸು ಹೊಕ್ಕಾಗಿರುತ್ತದೆ. ಇದರ ಇತಿಹಾಸ ರಾಮಾಯಣ ಮಾಹಾಭಾರತ ಕಾಲದಾಚೆಗೂ ಒಯ್ಯಬಹುದು. ದಶರಥ ಮಹಾರಾಜ ಮಕ್ಕಳಾಗದೆ ಇದ್ದಾಗ ಪುತ್ರಕಾಮೇಷ್ಟಿಯಾಗ ಆಚರಣೆಯಲ್ಲಿತ್ತು. ಕೇರಳದ ಕೊಚ್ಚಿಯಲ್ಲಿ ೧೯೯೨ ರಲ್ಲಿ ಮೇ ೧ ರಂದು ಬಿಗಿ ಭದ್ರತೆಯಲ್ಲಿ ಪುತ್ರಕಾಮೇಷ್ಟಿಯಾಗ ಮಾಡಿದ್ದನ್ನು ನಾವಿಲ್ಲಿ ಸ್ಮರಿಸಬಹುದು. ಜನಪದ ಸಂಸ್ಕೃತಿಯನ್ನು ಪರಿಶೀಲಿಸಿದಾಗ ಹೆಣ್ಣನ್ನು ಒಂದು ಉತ್ಪತ್ತಿಯ ಸಾಧನವನ್ನಾಗಿ

ಕಂಡು ಕೊಂಡಿರುವುದು ತಿಳಿದು ಬರುವುದು.

'ಗಂಡ ಇಲ್ದೆ ಗತಿಯಿಲ್ಲೆ ಹೆಂಡ್ತಿ ಇಲ್ದೆ ಮತಿಯಿಲ್ಲ' ಎಂಬ ಮಾತಿನಲ್ಲಿ 'ಗತಿ–ಮತಿ' ಎನ್ನುವ ಚಲನೆಯ ಅಸ್ತಿತ್ವದ ಆಕರಗಳು ಗಂಡು ಹೆಣ್ಣು ಒಂದಾಗುವ ಅನಿವಾರ್ಯತೆಯನ್ನು ಇದು ಸೂಚಿಸುತ್ತದೆ. ಆದರೆ ಇದು ಜೀವನದ ಸಾಮಾನ್ಯ ಜನಪದದ ಅಂಶ ಎಂದು ಹೇಳಬಹುದು. ಇನ್ನೊಂದು ಕಡೆಗೆ 'ಗಂಡನ್ಗೆ ಅಂಜದೇಯಿರೊಳು ಏಳುಮಂಡಲಕ್ಕೂ ಅಂಜುವುದಿಲ್ಲ.' ಇಲ್ಲಿ ಹೆಣ್ಣು ಸೇವಕಿಯಾಗಿ ಒಡೆಯನ ನಿಯಂತ್ರಣಕ್ಕೆ ಅವಳು ಒಳಪಡಬೇಕು. ಪತಿಯೇ ಪರದೈವ ಎಂದು ನಂಬಿದ ಪತಿವೃತಾ ಶಿರೋಮಣಿಯಾಗಿರಬೇಕು. ಆತ ಆಳುವ ಅರಸನಂತೆ ಭಾಸವಾಗುತ್ತಾನೆ. ಜನಸಾಮಾನ್ಯರಿಂದ ಉತ್ಪತ್ತಿಯಾಗುವ ಜಾನಪದವನ್ನು ಸಂಸ್ಕೃತಿ ಜಾನಪದ ಎಂದು ಕರೆಯಲಾಗುತ್ತದೆ. ಸಂಸ್ಕೃತಿ ಜಾನಪದ ಒಂದು ನೈಸರ್ಗಿಕ ಪ್ರದೇಶ, ಪರಿಸ್ಥಿತಿ, ಭಾಷೆ, ವೃತ್ತಿ ಮತ್ತು ಒಡನಾಟದಿಂದ ಹುಟ್ಟುವಂಥದು. ಜನಪದ ಸಂಸ್ಕೃತಿಯಲ್ಲಿ ಹೆಣ್ಣು ಉತ್ಪಾದಕ ಘಟಕವಾದರೆ ಸಂಸ್ಕೃತೀಕರಣ ಜಾನಪದದಲ್ಲಿ ಅವಳೊಬ್ಬ ಸೇವಕಿ."[೩೩] ಸಾಮಾನ್ಯ ಜನಪದಗಳಲ್ಲಿ ಆದಿವಾಸಿ, ಅಲೆಮಾರಿ ಹಳ್ಳಿಗಾಡು ಮತ್ತು ಕೆಳವರ್ಗಗಳಲ್ಲಿರುವ ಬಂಜೆ ಎಂಬ ಪರಿಕಲ್ಪನೆಗಳು ಸಕಾರಾತ್ಮಕವಾಗಿದ್ದು, ಶಿಷ್ಟ, ಜನಪದದಲ್ಲಿ ಅದು ನಕಾರಾತ್ಮಕವಾಗಿದೆ. ಅಂದರೆ ಉತ್ಪಾತ್ಯಾತ್ಮಕ ಘಟಕವನ್ನು ಸೃಷ್ಟಿಸಲು ಅಶಕ್ತಳಾದವಳು ಎಂದು ಅರ್ಥ. ಆದರೆ ಸಾಮಾನ್ಯ ಜನಪದದಲ್ಲಿ ಬಂಜೆತನ ಎಂಬುದು ಹೆಣ್ಣಿಗೆ ಮಾತ್ರ ಕೇಂದ್ರಿಕೃತವಾಗಿರದೆ, ಆಕೆ ತನಗೆ ಮಕ್ಕಳಾಗದಿದ್ದಾಗ ಬೇರೊಬ್ಬ ಗಂಡನನ್ನು ಕೂಡಿ ಮಕ್ಕಳನ್ನು ಪಡೆಯಬಹುದಾಗಿತ್ತು. ಮತ್ತು ಮಾತೃಪ್ರಧಾನ ಕುಟುಂಬಗಳಲ್ಲಿ ಕಟ್ಟಿಕೊಳ್ಳಬಹುದಾಗಿತ್ತು. ಆದರೆ ಶಿಷ್ಟ ಜಾನಪದದಲ್ಲಿ ಒಂದು ಗಂಡಿಗೆ ಬೇರೊಂದು ಗಂಡು ಪರ್ಯಾಯವಲ್ಲ. ಬಂಜೆತನಕ್ಕೆ ಸಂಪೂರ್ಣ ಹೆಣ್ಣು ಕಾರಣ ಎನ್ನುವ ರೀತಿಯಲ್ಲಿ ವರ್ತಿಸುತ್ತಾನೆ.

ಜನಪದ ಕಥನಗೀತೆಗಳಲ್ಲಿ ಕೂಡ ಬಂಜೆತನ ಪಾಳೇಗಾರ ಸಮಾಜದ ಗಂಡುತನದ ಪ್ರತಿಪಾದನೆಯೇ ಆಗಿದೆ. ಹೆಣ್ಣು ತನ್ನ ಬದುಕಿನುದ್ದಕ್ಕೂ ಯಾಂತ್ರಿಕ ದುಡಿಮೆಯಿಂದ ದಿನಗಳ ಸವೆಸುತ್ತಿರುವಾಗ ಬಂಜೆತನವು ಒಂದು ಸವಾಲಾಗುತ್ತದೆ, ಇಂಥ ನಿರರ್ಥಕವಾಗಿ ಬದುಕುವದಕ್ಕಿಂತ ಇಳೆಯಲ್ಲಿ ಮರವಾಗಿ ನೆರಳಾಗುವುದು ಲೇಸು ಎನ್ನುತ್ತಾಳೆ.

"ಹೆಣ್ಣು ಆಗೂದಕ್ಕಿಂತ ಮಣ್ಣು ಆಗೂದು ಲೇಸು
ಮಣ್ಣಿನ ಮ್ಯಾಲ ಮರವಾಗಿ । ಬೆಳೆದರ
ಬಂದವರಿಗೆಲ್ಲ ನೆರಳಾಗಿ॥"[೩೪]

ಬದುಕು ಸಾರ್ಥಕ ಎನಿಸುತ್ತದೆ.

"ಗರತಿ ತ್ಯಾಗದ ಪುತ್ಥಳಿ, ತನ್ನವರೆಂದರೆ ಆಕೆಗೆ ಮಮತೆಯ ಚಿನ್ನ, ಪತಿಗೆ ಅರ್ಧಾಂಗಿಯಾಗಿ ಇರುವವಳು, ಮಕ್ಕಳಿಗೆ ರಕ್ತ ಮಾಂಸಗಳನ್ನು ದಾನವಾಗಿ ಕೊಡುವವಳು, ಹುಟ್ಟಿದ ಮನೆಗೆ ಎರವಾಗಿ ಕೊಟ್ಟ ಮನೆಗೆ ಹೆಸರಾಗುವಳು, ಭಾವಯ್ಯ ಮುನಿದರೆ ಬಲಗಾಲ ಹಿಡಿಯಲಿಕ್ಕೂ ಭಾವಯ್ಯನ ಮಡದಿ ನೆಗಣ್ಣಿ ಮುನಿದರೆ ಬಾರಕ್ಕನೆಂದು ಕರೆಯಲ್ಲಿಕ್ಕೂ ಸಿದ್ಧಳಾಗುವಳು. ಮಾರಾಯ ತಮ್ಮ ಮೈದುನ ಬೈದರೆ ಮಾಡಿಲ್ಲದ ಮಳೆ ಸುರಿದಂತೆ ಅಳುವಳು, ಹಾಡುತ್ತಲೇ ದುಡಿಯುವಳು ಆಸರಿಕೆ ಅಳೆದಿಟ್ಟವಳು ಬ್ಯಾಸರಿಕೆ ಬೆಳೆದಿಟ್ಟವಳು ಆಕೆಯ ತ್ಯಾಗಕ್ಕೆ ಇದಕ್ಕಿಂತಲೂ ಹೆಚ್ಚಿನ ಉದಾಹರಣ ಏಕೆ ಬೇಕು.?"[೩೫] ಎಂಬಲ್ಲಿ ಹೆಣ್ಣಿನ ಬಾಳು ಪರರ ಹಿತದಲ್ಲಿಯೇ ಸಾಗಿದೆ ಎಂಬುದು ಸಾಕ್ಷಿಯಾಗಿ ತೋರಿದೆ. ಮಕ್ಕಳ ಜನನ ಹೆಣ್ಣಿನ ಜೀವನದಲ್ಲಿ ಹೊಸ ಅಧ್ಯಾಯವನ್ನು ಬರೆಯುತ್ತದೆ. ಮಕ್ಕಳ ಲಾಲನೆ ಪಾಲನೆ ಆಟಪಾಠಗಳಲ್ಲಿ ಅತ್ತೆಯ ಮನೆಯ ಕಷ್ಟಗಳನ್ನು ಮರೆಯುತ್ತಾಳೆ. ತಾಯ್ತನವು ಕುಟುಂಬದಲ್ಲಿ ಹೆಣ್ಣಿನ ಸ್ಥಾನಮಾನಗಳನ್ನು ಕೆಲಮಟ್ಟಿಗೆ ಗಟ್ಟಿಗೊಳಿಸುತ್ತದೆ. ಕಾರಣ ಭಾರತೀಯ ವಿವಾಹ ವಿಧಿಗಿರುವ ಪ್ರಮುಖ ಉದ್ಧೇಶ ವಂಶಾಭಿವೃದ್ಧಿಯಾಗಿರುವುದರಿಂದ ಮಕ್ಕಳನ್ನು ಪಡೆದ ಸೊಸೆ ತಾಯಿಯಾಗಿ ಕುಟುಂಬದಲ್ಲಿ ಮನ್ನಣೆ ಪಡೆಯುತ್ತಾಳೆ. 'ಹೆಣ್ಣು ಹೆತ್ತು ಸಾಫಲ್ಯವನ್ನು ಸಂತಾನೋತ್ಪತ್ತಿಯ ಸಾಮರ್ಥ್ಯದಿಂದಲೇ ಅಳೆಯುವ ಜನಪದ ಸಮಾಜ ವ್ಯವಸ್ಥೆಯಲ್ಲಿ ಬಂಜೆಯ ಸ್ಥಾನ ತೀರ ಗೌಣವಾದುದು ಆಕೆಯ ಜೀವನ ಬಾಳೆಯಿಲ್ಲದ ತೋಟದಂತೆ ಫಲವಿಲ್ಲದ ವೃಕ್ಷದಂತೆ ನಿರುಪಯುಕ್ತವೆಂದು ಭಾವಿಸಲಾಗುತ್ತದೆ. ಶುಭ ಸಮಾರಂಭಗಳಲ್ಲಿ ಆಕೆಯನ್ನು ಅಸ್ಪೃಶ್ಯಳಂತೆ ಕಾಣಲಾಗುತ್ತದೆ. ಈ ಅನಾದರ ತಿರಸ್ಕಾರಗಳಿಂದ ಪಾರಾಗಲೆಂದು ನೊಂದ ಹೆಣ್ಣು 'ಸಂಜೆಗೆ ಕೊಟ್ಟು ನೀ ಮುಂಜಾನೆ ಕೊಳ್ಳಯ್ಯ ಬಂಜೆಂಬ ಶಬುದ ಮರಸಯ್ಯ' ಎಂದು ಗೋಳಿಟ್ಟಿದ್ದಾಳೆ. ಈ ಸಮಾಜದಲ್ಲಿ ಬಂಜೆ ಅನುಭವಿಸುವ ಅಸಹನೀಯ ದು:ಖ, ಕೀಳರಿಮೆ ಅಪಮಾನದ ಚಿತ್ರವನ್ನು ನೀಡುವ ಕೆಲವು ತ್ರಿಪದಿಗಳು ಜನಪದ ಸಮಾಜದಲ್ಲಿ ಬಂಜೆಯ ಸ್ಥಾನವನ್ನು ನಿರ್ದೇಶಿಸುತ್ತವೆ.

"ಕಂದನ ಕೊಡು ಶಿವನೇ ಬಂಧನ ಬಿಡಲಾರೆ
ಹಂಗೀನ ಬಾನ ಉಣಲಾರೆ । ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ॥
ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡಿಗಿ ಎತ್ತು ದುಡಿದಾಂಗ । ಬಾಳೆಲೆಯ
ಹಾಸುಂಡು ಬೀಸಿ ಒಗೆದಾಂಗ॥"[೩೬]

ಬಂಜೆಯ ಇಂಥ, ನಿಕೃಷ್ಟ ಸ್ಥಿತಿಯನ್ನು ಆಕೆಯ ಮನೋವ್ಯಥೆಯನ್ನು ಜನಪದ ಪದ್ಯ ಸಾಹಿತ್ಯದಲ್ಲಿ ಹೃದಯ ಬೇದಕವಾಣಿಯಾಗಿ ಚಿತ್ರಿಸಲಾಗಿದೆ. ಬಂಜೆ ಹೊನ್ನಮ್ಮ ಕಥನ ಕಾವ್ಯದಲ್ಲಿ ಬಂಜೆತನವು ಪ್ರಕೃತಿಗೆ ವಿರುದ್ಧಗುಣವೆನ್ನುವ ನಿರೂಪಣೆಯೊಂದಿಗೆ ಬಂಜೆ ಹೊನ್ನಮ್ಮನನ್ನು

ಸಮಸ್ತ ಪ್ರಕೃತಿಯೇ ತಿರಸ್ಕರಿಸುವ ಸನ್ನಿವೇಶ ಧ್ವನಿಪೂರ್ಣವಾಗಿದೆ. ಬಂಜೆತನಕ್ಕೆ ಎಲ್ಲ ಸಂದರ್ಭಗಳಲ್ಲಿಯೂ ಹೆಣ್ಣೇ ಕಾರಣಗಳಲ್ಲದಿದ್ದರೂ ಕೆಲವು ಸಂದರ್ಭಗಳಲ್ಲಿ ಸಂಪೂರ್ಣ ಗಂಡನೇ ಕಾರಣವಾಗಿದ್ದರೂ ಜನಪದರು ಬಂಧನಕ್ಕಾಗಿ ಯಾವಾಗಲೂ ಹೆಣ್ಣನ್ನೇ ಅಪರಾಧಿಯಾಗಿಸಿದುದು. ಈ ಹೆಣ್ಣನ್ನು ಪರಿಭಾವಿಸುವ ಪೂರ್ವ ಗ್ರಹ ಪೀಡಿತ ಧೋರಣೆಯ ನಿದರ್ಶನವಾಗಿದೆ. ಗೊಂದಲಿಗರ ಕಥೆಗಳಲ್ಲಿಯೂ ಬಂಜೆತನದ ಅಳಲು ಕಂಡು ಬರುವುದು ಗೊಂದಲಿಗ ಕಲಾವಿದರಾದ ರಾಮು ಇಂಗಳೆಯವರು ಹೇಳಿದ 'ರಾಜಾ ಅಂಬ್ರಸೇನನ' ಕಥೆಯಲ್ಲಿ ರಾಣಿಗೆ ಮಕ್ಕಳಿಲ್ಲದಾಗ ಪ್ರಧಾನಿ ಬಂಜೆ ಕೈಲಿ ಭಿಕ್ಷೆ ಹಾಕಿಸಿಕೊಳ್ಳಬಾರದು ಎಂಬುದರ ಬಗ್ಗೆ ಹೀಗೆ ನುಡಿಯುತ್ತಾರೆ. "ಬಂಜೆ ಕೈಲಿ ಅನ್ನ ತಕ್ಕೋಬಾರದು, ದಾನಾಧರ್ಮ ತಕ್ಕೋಬಾರದು ಬಂಜೆ ನೆರಳಾಗ ಇರಬಾರದು." ಎಂಬ ಮಾತುಗಳನ್ನು ನಾವು ಕಾಣುತ್ತೇವೆ. ಈ ಬಂಜೆ ಎಂಬ ಶಬ್ಧಕ್ಕೆ ಹೆಣ್ಣೊಂದೆ ಕಾರಣಕರ್ತಳಲ್ಲ ಪುರುಷನು ಇದಕ್ಕೆ ಕಾರಣನಾಗುತ್ತಾನೆ ಎಂಬ ಸೂಕ್ಷ್ಮ ಎಳೆಯನ್ನು ಗೊಂದಲಿಗರು 'ಶಂಖಿನಿಕುಮಾರ' ಎಂಬ ಕಥೆಯಲ್ಲಿ ತೋರಿಸಿದ್ದಾರೆ. ರಾಜ ಬಲಿಶೇಖರನಿಗೆ ಮಕ್ಕಳಿಲ್ಲದಾಗ ಊರಾನ ದೈವವೆಲ್ಲ ಕೂಡಿ ರಾಜವಾಡೆಕ ಬಂದು 'ನಿಮ್ಮ ಹೊಟ್ಟಿಲಿ ಹೆಣ್ಣಾಗಲಿ, ಗಂಡಾಗಲಿ ಮಕ್ಕಳ ಸಂತಾನ ಇಲ್ಲ, ನಿಮ್ಮ ಜಳಾ ಬಡದ್ರ ಹುಟ್ಟು ಮಕ್ಕಳ ಹುಟ್ಟಾಕಿಲ್ಲ, ಬದಕು ಮಕ್ಕಳ ಬದಕಾಕಿಲ್ಲ, ಅದಕ ನಿಮ್ಮ ಚಾಕರಿ ಬಿಟ್ಟು ಬೇರೆ ರಾಜನ ಹತ್ರ ಹೋಕ್ತೇವಿ" ಎಂದು ಹೇಳುವಲ್ಲಿ, ಒಂದು ರಾಜ್ಯವು ಮುಂದುವರಿಯಬೇಕಾದರೆ, ರಾಜ್ಯದ ಜನತೆ ಸುಖದಿಂದ ಇರಬೇಕಾದ್ರೆ ರಾಜನ ಸಂತಾನವು ಪ್ರಮುಖವಾಗುತ್ತದೆ ಹಾಗೂ ರಾಜ ಮುಂದೆ ಅರಣ್ಯದಲ್ಲಿ ಸೂಜಿ ಡಬ್ಬನದ ಮೇಲೆ ನಿಂತು ಶಿವನಿಂದ ಮಕ್ಕಳ ವರವನ್ನು ಪಡೆಯಲು ಕಠಿಣ ತಪಸ್ಸನ್ನು ಆಚರಿಸುತ್ತಾನೆ. ಇದರಿಂದ ಬಂಜೆತನಕ್ಕೆ ಸಮಾಜದ ತೀಕ್ಷ್ಣ ದೃಷ್ಟಿಕೋನ ಹಾಗೂ ಸಂತಾನದ ಪ್ರಾಮುಖ್ಯತೆಯನ್ನು ತೋರಿಸಿ ಕೊಡುವಲ್ಲಿ ಅವರ ಕಥನಗಳು ಪ್ರಮುಖವಾಗಿವೆ. 'ರಾಜವೀರ ಪರಾಕ್ರಮ' ಕಥೆಯಲ್ಲಿ ಕೈಲಾಸದಲ್ಲಿ ಏಳು ಮಂದಿ ವಿಧಿಗಳ ನಡುವೆ ಚಿಕ್ಕವಳಾದ ಸೂರ್ಯ ಕಾಂತಿಗೆ ಮಕ್ಕಳ ಫಲವಿರಲಿಲ್ಲ ಆಗ ಅಕ್ಕಂದಿರು ನಿನಗೆ ಮಕ್ಕಳಿಲ್ಲ. ನೀನು ಬಂಜೆ ಎಂದು ಮರ್ತ್ಯಕ್ಕೆ ತಳ್ಳುತ್ತಾರೆ. ಅಲ್ಲಿ ದೇವಲೊಕದ ದೇವತಾ ರೂಪವನ್ನು ತಾಳಿ ಮಾಹಾರಾಜ ಚಂದ್ರಸೇಕನಿಂದ, ಆತ ಶಿವನಿಂದ ಪಡೆದ ಮಕ್ಕಳ ಫಲವನ್ನು ಪಡೆಯುತ್ತಾಳೆ. ಸಮಾಜದಲ್ಲಿ ಒಂದು ಹೆಣ್ಣು ಮದುವೆಯಾಗಿ ಆಕೆಗೆ ಮಕ್ಕಳಾಗದಿದ್ದರೆ ಎಂತಹ ಕುಹುಕ ನೋಟ ಬೀರುವುದು ಹಾಗೂ ಅವಳಿಗೆ ಸಮಾಜದಲ್ಲಿ ಯಾವ ಸ್ಥಾನವನ್ನು ನೀಡುತ್ತಾರೆ. ಎಂಬುದಕ್ಕೆ ಈ ಕಥೆಯೇ ನಿದರ್ಶನವಾಗಿದೆ. ಲಕ್ಷಾಪತಿ ರಾಜನ ಕಥೆ ಯಲ್ಲಿ ಧರ್ಮಶೇಖರ ರಾಜನ ಮಡದಿ ಕುಲವತಿಗೆ ಮಕ್ಕಳಾಗಲಿಲ್ಲ ಎಂಬ ಕಾರಣದಿಂದ ಅವಳು ಬಂಜೆ ಎಂದು ಅಪವಾದ ಹೊರಸಿ ಅವಳನ್ನು ಊರ ಹೊರಗೆ ಒಂದು ಗುಡಿಸಲಿನಲ್ಲಿ ತಂದಿಡಲಾಯಿತು. ಹೀಗೆ ಕಥೆಗಳು ಅಂದಿನ ಸಾಮಾಜಿಕ ವಾಸ್ತವ ನೆಲೆಗಟ್ಟನ್ನು, ಜನಸಾಮಾನ್ಯರ

ಬದುಕಿನ ಸ್ಥಿತಿಯನ್ನು ತಿಳಿಸುವ ಚಿತ್ರಣಗಳಾಗಿವೆ.

### ೪.೧೨ ಮಲತಾಯಿ ಧೋರಣೆ

ಗೊಂದಲಿಗರ ಕಥೆಗಳಲ್ಲಿ ಮಲಮಕ್ಕಳನ್ನು ನೋಡುವ ರೀತಿ ಮಲತಾಯಿ ಧೋರಣೆ ತುಂಬಾ ಸೂಕ್ಷ್ಮವಾಗಿ ಕಂಡು ಬರುತ್ತದೆ. 'ಮಲತಾಯಿಯ ಅಸೂಯೆಯ ದ್ವೇಷದ ದವಡೆಯಿಂದ ತಪ್ಪಿಸಿಕೊಳ್ಳಲು ಹಸುಗೂಸೊಂದು ಕೈಯಿಂದ ಕೈಗೆ ಬದಲಾಗುತ್ತ ಹೋಗುವ ವ್ಯಾಪಕ ಆಶಯವೊಂದು ಗೊಂದಲಿಗರ ಸಾಹಿತ್ಯದಲ್ಲಿ ದೊರೆಯುತ್ತದೆ. ನೂರೊಂದು ಮಕ್ಕಳು, ಪುಣ್ಯದ ಲಕ್ಷ್ಮಿ, ಎನಳಿಗೆ ಮುಳ್ಳು, ಸೊಟಗಕ್ಕ, ತಬ್ಬಲಿರಾಯ, ಮುಂತಾದ ಕಥೆಗಳನ್ನು ಇಲ್ಲಿ ಹೆಸರಿಸಬಹುದು. ಇಲ್ಲೆಲ್ಲ ಸಾಮಾನ್ಯವಾಗಿ ಮಗುವನ್ನು ಸಾಕುತ್ತಿದ್ದ ಪ್ರಾಣಿಯೊಂದು, ತನಗೊ ಮಗುವಿಗೊ ಅಪಾಯ ಎದುರಾಗಲಿದೆ ಎಂಬ ಸೂಚನೆ ಕಂಡೊಡನೆಯೆ ನೇರವಾಗಿ ಇನ್ನೊಂದು ಪ್ರಾಣಿಯನ್ನು ಭೇಟಿ ಮಾಡಿ ಮಗುವನ್ನು ಅದರ ಕೈಗೆ ಒಪ್ಪಿಸುವುದು ಕಂಡುಬರುತ್ತದೆ. ಗೊಂದಲಿಗರ ಸಾಹಿತ್ಯದಲ್ಲಿ ಕೂಡ ಇಂಥದೇ ಕ್ರಮ ಕಂಡುಬಂದರೂ ಕೆಲವೊಮ್ಮೆ ಹಾಗೆ ಒಯ್ದು ಒಪ್ಪಿಸುವ ಕಾರ್ಯವನ್ನು ಮಧ್ಯವರ್ತಿ ಮಾಡುವುದುಂಟು, ಮಗುವಿನ ರಕ್ಷಣೆ ಹೊಣೆ ಹೊತ್ತ ಸ್ವತಃ ಮಾನವರಂತೆ ಸಾಕಲಾಗದ ಬನ್ನಿಮಹಂಕಾಳಿ ದೇವತೆ ಇಲ್ಲಿ ಮಧ್ಯವರ್ತಿಯಾಗುತ್ತಾಳೆ. ಹೊಣೆ ಹೊತ್ತವರ ಕರ್ತವ್ಯವನ್ನು ಗೊಂದಲಿಗರು ಪಾಲಿಸುವ ಸಹಜ ಬದುಕನ್ನು ಈ ಘಟನೆ ಹೋಲುತ್ತದೆ. ಅವರು ತಮ್ಮ ನಿತ್ಯ ಬದುಕಿನ ಸಾಮಾಜಿಕ ವಾತಾವರಣದಲ್ಲಿ ಹಾಗೆ ಅನುಸರಿಸುತ್ತ, ತಮ್ಮ ಹೊಣೆಯನ್ನು ಪೂರ್ಣಗೊಳಿಸುವಂತೆ ಒಂದು ಸಾಮಾನ್ಯ ಗುಣವಾಗಿದೆ.'[೩೭]

ಗೊಂದಲಿಗರು ಹೇಳುವ ಹಲವಾರು ಕಥೆಗಳಾದ ಲೀಲಾವತಿ, ಪದ್ಮಾವತಿ, ಬಸವಕುಮಾರ, ಲೋಹಿತಕುಮಾರ, ವಿಘ್ನಾವತಿ, ರಾಜಾ ವೀರಪರಾಕ್ರಮ, ಅಡವಿಕುಮಾರ ಮುಂತಾದ ಕಥೆಗಳಲ್ಲಿ ಮಲತಾಯಿಯ ಧೋರಣೆಯನ್ನು ಕಾಣಬಹುದು. ಜನಪದ ಸಾಹಿತ್ಯದ ಹಿನ್ನೆಲೆಯಲ್ಲಿ ನೋಡಿದಾಗ ಸಾಮಾನ್ಯವಾಗಿ ಮಲತಾಯಿಯ ಧೋರಣೆಯು ಬಹಳಷ್ಟು ಕ್ರೂರವಾಗಿ ಮೂಡಿ ಬಂದಿವೆ. 'ದೃವನ' ಕಥೆಯಲ್ಲಿ ತನ್ನ ಮಲತಾಯಿಯ ಮಗನು ತಂದೆಯ ತೊಡೆಯನ್ನೇರಿ ಕುಳಿತುಕೊಂಡಿದ್ದನ್ನು ನೋಡಿ ತಾನು ತಂದೆಯ ತೊಡೆಯನ್ನೇರಬೇಕೆಂಬ ಆಸೆಯಿಂದ ಕುಳಿತುಕೊಳ್ಳಲು ಹೋದಾಗ ಮಲತಾಯಿ ಅವನನ್ನು ದೂರತಳ್ಳಿ ಮಾಹಾರಾಜರ ತೊಡೆಯ ಮೇಲೆ ಕುಳಿತುಕೊಳ್ಳಬೇಕೆಂದರೆ ತಪಸ್ಸು ಮಾಡಿ ವರ ಕೇಳಿ ಪಡೆದುಕೊಂಡು ಬರಬೇಕು ಎಂದು ಹೇಳಿ ಅವನನ್ನು ತುಚ್ಛ್ಯವಾಗಿ ಕಾಣುತ್ತಾಳೆ. ಜನಪದ ಕಥೆಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಕಥೆಗಿರುವ ಉದ್ದೇಶ ಮತ್ತು ಆಶಯವನ್ನು ತಿಳಿಯಬೇಕಾಗುತ್ತದೆ. ಇಲ್ಲಿ ಕಥೆಗಾರ ಹಾಗೂ ಪ್ರೇಕ್ಷಕರು ಈ ಎರಡು ನೆಲೆಯಿಂದ ಅರ್ಥವನ್ನು ಹೊರಡಿಸಬೇಕಾಗುತ್ತದೆ. ಪ್ರೇಕ್ಷಕರ ದೃಷ್ಟಿಯಲ್ಲಿ

ಮನರಂಜನೆ ಸಾಮಾಜಿಕ ಮೌಲ್ಯಗಳ ಅರಿವು ದುಡಿಮೆಗೆ ಚೈತನ್ಯ ತುಂಬುವ ಕ್ರಿಯೆಯಾಗಿ ಕಥೆಯ ಉದ್ದೇಶ ವಾಸ್ತವ ಬದುಕಿನ ಒತ್ತಡದಿಂದ ಬಿಡುಗಡೆ ಕಾಣುವುದು. ಈ ಮಾತುಗಳು ಇನ್ನಷ್ಟು ವಿವರಗಳನ್ನು ಆಪೇಕ್ಷಿಸುತ್ತವೆ. ಅಂದರೆ ಕಥೆಯ ಆಯ್ಕೆ ಹಾಗೂ ಕಥೆಯ ರಚನೆ ಆಯಾ ದಿನದ ಕಥೆಗಾರರ ಬದುಕಿನ ಘಟನೆಗಳೊಂದಿಗೆ ಸಂಬಂಧವನ್ನು ಸ್ಥಾಪಿಸುತ್ತದೆ. ಕಥೆಗಾರರು ಕಥೆಯ ಆಯ್ಕೆಯನ್ನು ಪ್ರೇಕ್ಷಕರಿಗೆ ಇತ್ತರು. ಇದರಂತೆ ಗೊಂದಲಿಗರ ಕಥನ ಸಾಹಿತ್ಯದಲ್ಲಿಯೂ ಸಹ ನಾವು ಹಲವಾರು ಸಾಮಾಜಿಕ ಕಳಕಳಿಯನ್ನು, ಬದುಕಿನ ನಿಕಟವಾದ ಸಂಬಂಧಗಳನ್ನು, ನೈತಿಕ ಮೌಲ್ಯಗಳನ್ನು ಕಾಣುತ್ತೇವೆ.

### ೪.೧೩ ಮುತ್ತೈದಿತನ

ಹೆಣ್ಣಿನ ಬದುಕಿಗೆ ಮುತ್ತೈದೆತನ ಎಂಬುದು ಬಹು ಮುಖ್ಯವಾದ ಅಂಶವಾಗಿದೆ. ಮುತ್ತೈದೆಯೆಂದರೆ ಐದು ಮುತ್ತುಗಳನ್ನು ಹೊಂದಿದವಳೇ ಮುತ್ತೈದೆ. ಅಂದರೆ ಮೂಗುತಿ, ಬಳೆ, ಕುಂಕುಮ, ಅರಿಶಿಣ, ಕಾಲುಂಗರ ಈ ಐದು ಮುತ್ತುಗಳನ್ನು ಧರಿಸಿದವಳು ಮುತ್ತೈದೆಯಾಗುತ್ತಾಳೆ. ಹಿಂದೂ ಸಂಪ್ರದಾಯದಲ್ಲಿ ಇವಳಿಗೆ ತುಂಬಾ ಗೌರವವಿದೆ. ಸಮಾಜದಲ್ಲಿ ಒಂದು ಸ್ಥಾನವನ್ನು ಹಾಗೂ ಭದ್ರತೆಯನ್ನು ಹೊಂದಲು ಈ ಮುತ್ತೈದೆ ತನದಿಂದ ಸಾಧ್ಯ. ಅದು ಗಂಡನಿಂದ ಅಂದರೆ ಮದುವೆಯೆಂಬ ಬಂಧನದಿಂದ ಸಿಗುವುದು. ಈ ಮುತ್ತೈದೆತನ ಹೋದಮೇಲೆ ಅವಳ ಪರಿಸ್ಥಿತಿ ಅಲ್ಲೋಲಕಲ್ಲೋಲವಾಗುವುದು. ಅವಳ ರೋಧನ ಮುಗಿಲೇರುತ್ತದೆ. 'ರಾಜಾ ಅಂಬ್ರಸೇನ' ನ ಕಥೆಯಲ್ಲಿ ಬಾಳಾವತಿ ತನ್ನ ಪತಿಯನ್ನು ಕಳೆದುಕೊಂಡಾಗ ಎದೆಬಡಿದುಕೊಂಡು ಅಳುತ್ತಿದ್ದಾಳೆ.

"ದೇವ ಪಾಲಿಸು ಮುತ್ತೈತನ
ಮುತ್ತು ಹ್ವಾದ ಮ್ಯಾಲ ಬಹುಹೀನ
ಮೊದಲು ಬರುವುದು ಚಾಜಕ ದಂಡಿ
ದಂಡಿ ಹ್ವಾದ ಮ್ಯಾಲ ರಂಡಿ ಮುಂಡಿ
ಮತ್ತಿದ್ದರ ಪುಣ್ಯದ ಕಾಶಿ
ನೆರೆಮನ್ಯಾವು ಮಾಡ್ತಾರ ಹಾಸಿ
ಮುತ್ತು ಹ್ವಾದ ಮ್ಯಾಲ ಪರದೇಸಿ
ದೇವ ಪಾಲಿಸು ಮುತ್ತೈತನ."[೩೮]

ಎಂದು ಗೋಳಾಡುವುದನ್ನು ಕಾಣುತ್ತೇವೆ. ಈ ಹಾಡಿನಲ್ಲಿ ಮುತ್ತೈತನದ ಪ್ರಾಮುಖ್ಯತೆಯನ್ನು ಕಾಣುತ್ತೇವೆ. ನಮ್ಮ ಜಾನಪದದ ಹಲವಾರು ಹಾಡುಗಳು ಸಹ ಇಂತಹ ನಿಲುವುಗಳನ್ನು ತಿಳಿಸುತ್ತೇವೆ.

### ೪.೧೪ ವಿಧವೆ

ಹೆಣ್ಣಿಗೆ ಮುತ್ತೈದೆತನ ಎಷ್ಟು ಶ್ರೇಷ್ಠ ಅದು ಪವಿತ್ರವಾದ ನಂಟು ಎಂಬುದನ್ನು 'ರಾಜಾ ಅಂಬ್ರಸೇನನ' ಕಥೆಯಲ್ಲಿ ಬಾಳಾವತಿಯ ಮಾತಿನಿಂದ ತಿಳಿಯುತ್ತದೆ.

ಸಹಜವಾಗಿ ಹೆಣ್ಣು ಬಯಸುವುದು ಮುತ್ತೈದಿತನವನ್ನು. ಮುತ್ತೈದೆ ಸಾವನ್ನು ಆದರೆ ಗಂಡ ಸತ್ತಾಗ ತಾನು ವಿಧವೆ ಎನ್ನುವ ಅಳುಕನ್ನು ಅವಳು ಎಂದು ಸಹಿಸುವುದಿಲ್ಲ. ಸಮಾಜ ಅವಳನ್ನು ನೋಡುವ ದೃಷ್ಟಿಕೋನ ಅವಳೊಬ್ಬ ಅಮಂಗಲೆ ಎನ್ನುವ ರೀತಿಯಲ್ಲಿರುತ್ತದೆ. ಯಾವ ಶುಭಕಾರ್ಯದಲ್ಲಿಯೂ ಅವಳಿಗೆ ಭಾಗವಹಿಸಲು ಅವಕಾಶ ಕೊಡುವುದಿಲ್ಲ. ಅದೇ ರೀತಿ ಅಂಬ್ರಸೇನ ಕಥೆಯಲ್ಲಿ ನೆರಮನ್ಯಾವ್ರು ಮಾಡ್ತಾರ ಹಾಸಿ, ಮುತ್ತು ಹ್ವಾದಮ್ಯಾಲನಾ ಪರದೇಶಿ, ಎಂಬುದನ್ನು ಕೇಳಿ ಬಾಳಾವತಿ ದು:ಖಿಸುತ್ತಾಳೆ. ನೆರಮನೆಯವರು ಮಾತುನಾಡುವ ಮಾತುಗಳಿಗೆ ಅವಳು ತುಂಬಾ ನೊಂದುಕೊಳ್ಳುತ್ತಾಳೆ.

ಜಾನಪದ ಸಾಹಿತ್ಯದಲ್ಲಿಯೂ ಸಹ ಇಂಥಹ ಹಲವಾರು ಸಂದರ್ಭಗಳನ್ನು ಕಾಣುತ್ತೇವೆ. ಜನಪದರಲ್ಲಿ ವೈದವ್ಯ ಹೆಣ್ಣಿಗೆ ಒಂದು ಘೋರ ಶಾಪವಿದ್ದಂತೆ. ಹೆಣ್ಣಿನ ಸ್ವತಂತ್ರ ಅಸ್ತಿತ್ವವನ್ನೊಪ್ಪದ ಈ ಸಮಾಜದಲ್ಲಿ ವಿಧವೆಗೆ ಬದುಕುವ ಅವಕಾಶವೂ ಪ್ರಶ್ನಾರ್ಹವಾಗಿದೆ. ಅಂತೆಯೇ ಸಹಗಮನ ಪದ್ಧತಿಯನ್ನು ಪುರಸ್ಕರಿಸುವ ಈ ಸಮಾಜದಲ್ಲಿ ವಿಧವೆಯರು ಸ್ವಇಚ್ಛೆಯಿಂದಲೋ, ಒತ್ತಾಯಕ್ಕೊಳಗಾಗಿಯೋ ಬೆಂಕಿಯಲ್ಲಿ ಬೆಂದಿದ್ದಾರೆ. ಈರೊಬಿ, ಗೊಲ್ಲರ ನಾಗವ್ವ, ಬರಗೂರು ವೀರಮ್ಮ, ಬದ್ದಿಗೆಲೆ ನಾಗಮ್ಮ, ವೀರ ಓಬ್ಬವ್ವ, ಚೆನ್ನಮ್ಮನ ದಂಡಿ ಮುಂತಾದ ಕಥನಗಳಲ್ಲಿ ಸತ್ತ ಗಂಡನೊಂದಿಗೆ ಸಹಗಮನ ಮಾಡಿದ ಮಹಿಳೆಯರನ್ನು ಹಾಡಿ ಹೊಗಳಲಾಗಿದೆ. ಅವರನ್ನು ದೇವತೆಯ ಪದವಿಗೇರಿಸಿ ಸಹಗಮನವನ್ನು ಮೌಲ್ಯವಾಗಿ ಸ್ಥಿರೀಕರಿಸುವ ಪ್ರಯತ್ನವು ನಡೆದಿದೆ. ಅಮಾನವೀಯವಾಗಿರುವ ಈ ಸಹಗಮನವನ್ನು ಮಹಿಳೆಯರಿಗಷ್ಟೇ ವಿಧಿಸಿರುವುದು ವ್ಯವಸ್ಥೆಯ ಕೌರ್ಯಕ್ಕೆ ಕನ್ನಡಿಯಾಗಿದೆ. ಜನಪದ ಸಮಾಜದಲ್ಲಿ ವಿಧವೆಯರು ಅನುಭವಿಸಬೇಕಾದ ತಿರಸ್ಕಾರ, ಅಪಮಾನಗಳು ವಿಧವೆಯರ ಸಹಗಮನದ ಆಯ್ಕೆಗೆ ಪೂರಕವಾಗಿವೆ. ವಿಧವೆಯರಾಗಿ ನೋವಿನ ನಂಜನುಣ್ಣುತ್ತ ನಿತ್ಯ ಸಾಯುವ ಬದಲು ಸಹಗಮನವನ್ನೇ ಆಯ್ಕೆ ಮಾಡಿಕೊಂಡ ಈರೋಬಿಯ ನಿರ್ಣಯವು ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

"ಗಂಡ ಸಾಯೋಕಿಂತ ಮುಂಡ್ಯಾಗೋಕಿಂತ
ಕಂಡೋರ ಮನೆಯ ಕಸನಾಕೆ ! ಸಾಯೋಕ್ಕಿಂತ
ಕೊಂಡವನ್ನೋದೆ ಕಡುಲೇಸು."[೩೯]

ಗಂಡನಿದ್ದಾಗ ಗಂಗೆಯೆನಿಸಿದ ನಾರಿ ವಿಧವೆಯಾದಾಗ ಕೊಳಿತು ನಾರುವ ನೀರಾಗಿದ್ದಾಳೆ. ಗಂಡನಿಲ್ಲದ ರಂಡೆ ರಾಜ್ಯವಾಳಿದರೇನು? ಮುಂಡಿಯ ಹೂವು ಹೊಲತುಂಬ ಅರಳಿದರೆ

ಚೆಂಡು ಹೂವನ್ನು ಹೋಲಾವೇ.? ಹುಟ್ಟು ಸಾವುಗಳೆರಡನ್ನು ದೈವ ನಿಯಾಮವೆಂದೇ ಭಾವಿಸುವ ಜನಪದರು ಗಂಡನ ಸಾವಿಗೆ ಯಾವ ರೀತಿಯಿಂದಲೂ ಕಾರಣಗಳಿಲ್ಲದ ಹೆಂಡತಿಗೆ ವಿಧವೆಯ ಪಟ್ಟವಿಧಿಸಿ ನಾನಾ ರೀತಿಯ ಬಂಧನಗಳಿಗೆ ಗುರಿಪಡಿಸಿದ್ದಾರೆ. ಇದಕ್ಕೆ ವ್ಯತಿರಿಕ್ತವಾಗಿ ವಿಧುರನಿಗೆ ಮರುಮದುವೆಯ ಅವಕಾಶವನ್ನು ನೀಡಿ ಆತನನ್ನು ಸಹಾನುಭೂತಿಯಿಂದ ಕಾಣಲಾಗಿರುವುದು ಈ ಸಮಾಜದ ದ್ವಂದ್ವ ನೀತಿಗೆ ಸಾಕ್ಷಿಯಾಗಿದೆ. ಈ ರೀತಿಯಲ್ಲಿ ವಿಧವೆಯರೆಡೆಗೆ ಪ್ರತಿಗಾಮಿ ಧೋರಣೆಯಿಂದ ವರ್ತಿಸುವ ಈ ಜನಪದ ಪ್ರಜ್ಞೆಯೇ ಕೆಲವೊಮ್ಮೆ ವಿಧವೆಯರಿಗೆ ವಿಚ್ಛೇದಿತ ಮಹಿಳೆಯರಿಗೆ ಮರುವಿವಾಹದ ಅವಕಾಶವಿತ್ತು. ತನ್ನ ಜೀವಪರ ನಿಲುವಿನಿಂದ ಹೆಚ್ಚು ಪ್ರಸ್ತುತವೆನಿಸುತ್ತದೆ. ನೈತಿಕ ಸ್ವಾಸ್ಥ್ಯವನ್ನು ಅನುಲಕ್ಷಿಸಿ ಬಾಲವಿಧವೆಯರಿಗೆ ಮರುಮದುವೆಯ ಸೌಲಭ್ಯ ಕಲ್ಪಿಸಿದರೂ ಇಂಥ ವಿಧವೆಯರನ್ನು ಕೈಹಿಡಿಯುವ ಗಂಡು ಬಹುತೇಕವಾಗಿ ವಿಧುರನಾಗಿರುವುದು ಗಮನಿಸಬೇಕಾದ ಸಂಗತಿ. ವಿಧವಾ ಪುನರ್ವಿವಾಹವನ್ನು ಉಡಿಕೆ, ಕೂಡಿಕೆ, ಕೂಡಾವಳಿ ಇತ್ಯಾದಿ ಹೆಸರುಗಳಿಂದ ಗುರುತಿಸಲಾಗುತ್ತದೆ. 'ಕೂಡಿಕೆ ಯಾದವಳು ಶಾಸ್ತ್ರಕ್ಕೆ ಹೊರಗು' ಎಂಬ ಗಾದೆಯ ಮಾತಿನಂತೆ ಇಂಥ ಉಡಿಕೆಯ ಹೆಂಡತಿಯರನ್ನು ಮಂಗಲ ಕಾರ್ಯಗಳಲ್ಲಿ ದೂರ ವಿರಿಸಲಾಗುತ್ತದೆ.

ಹೆಣ್ಣಿನ ಬದುಕಿನ ಎಲ್ಲ ಮಹತ್ವದ ನಿರ್ಣಯಗಳನ್ನು ತೆಗೆದುಕೊಳ್ಳುವವನು ಗಂಡಸು. ವಿವಾಹದಂತ ನಿರ್ಣಾಯಕ ಪ್ರಸಂಗದಲ್ಲಿಯೂ ಹೆಣ್ಣಿನ ಅಭಿಪ್ರಾಯ ಅನಪೇಕ್ಷಿತವಾಗಿರುತ್ತದೆ. ಆಕೆ ಕೇವಲ ಆಜ್ಞಾಧಾರಕ ಜೀವಿ ಮಾತ್ರ. ಕೆರೆಗೆ ಹಾರ, ಅಣಜಿಯ ಹೊನ್ನಮ್ಮ ಒಡ್ಡರಬೋಯಿ, ಮಲ್ಲಿಗೆ ಮಹಾದೇವಿ, ಕುಣಿಗಲ್ಲಕೆರೆ ಇತ್ಯಾದಿ ಕಥನಗಳಲ್ಲಿ ಹೆಣ್ಣಿನ ಬಲಿದಾನದ ನಿರ್ಣಯ ಸಾರಿದುದು ಪುರುಷ ಪ್ರಭುತ್ವ. ಹೆಣ್ಣಿಗೆ ಪಾತಿವ್ರತ್ಯವನ್ನು ಕಡ್ಡಾಯ ಮೌಲ್ಯವಾಗಿಸಿದ ಜನಪದರು ಪತಿವೃತೆಯರನ್ನು ಹಾಡಿ ಹೊಗಳಿದ್ದಾರೆ. ಚೆನ್ನಮ್ಮನದಂಡಿ ಗುಣಸಾಗರಿ, ನಾಗರಗನ್ನೆ ಇತ್ಯಾದಿ ಕಥನಗಳಲ್ಲಿ ಹೆಣ್ಣಿನ ಶೀಲಕ್ಕೆ ದೈವತ್ವವನ್ನು ಆರೋಪಿಸಿ ಪಾತಿವ್ರತ್ಯದ ಬಲದಿಂದ ಸತ್ತ ಗಂಡನು ಬದುಕಿ ಬರುವುದು, ದುಷ್ಟಶಕ್ತಿಗಳು ವಿನಾಶಹೊಂದುವ ಪವಾಡಗಳನ್ನು ಸೃಷ್ಟಿಸಿ ಪಾತಿವ್ರತ್ಯವನ್ನು ವೈಭವೀಕರಿಸುವ ಜನಪದರು ಗಂಡಿನ, ಸತಿವೃತದ ಬಗೆಗೆ ಮೌನತಾಳಿರುವುದು ಅಚ್ಚರಿಯ ಸಂಗತಿ. ಆದರ್ಶ ಮೌಲ್ಯಗಳ ಈ ಚಕ್ರವ್ಯೂಹದಲ್ಲಿ ಸಿಲುಕಿದ ಸ್ತ್ರೀಯರು ಘನತೆ ಸಮಾಜದ ಕಲ್ಯಾಣಕ್ಕಾಗಿ ಆತ್ಮಾಹುತಿಗೈಯ್ದ ಹೇರಳ ಉದಾಹರಣೆಗಳು ಲಭ್ಯವಿದೆ. ಕರ್ನಾಟಕದುದ್ದಕ್ಕೂ ಸಿಗುವ ಮಾಸ್ತಿಕಲ್ಲುಗಳು ಇದಕ್ಕೆ ನಿದರ್ಶನವಾಗಿವೆ.ಕೆರೆ ಕೋಟೆಗಳಿಗಾಗಿ, ಅತ್ತೆಯ ದುರಾಗ್ರಹಕ್ಕೊಳಗಾಗಿ, ವ್ಯವಸ್ಥೆ ವಿಧಿಸಿದ ಮೌಲ್ಯ ರಕ್ಷಣೆಗಾಗಿ ಸ್ವಇಚ್ಛೆಯಿಂದಲೋ, ಒತ್ತಾಯದಿಂದಲೋ ಪ್ರಾಣಕಳೆದು ಕೊಂಡ ಹೆಂಗಳೆಯರನ್ನು ದೇವತೆಗಳನ್ನಾಗಿಸಿ ಮಹಿಳೆಯರ ಪ್ರತಿಭಟನೆಯ ಸತ್ವವನ್ನು ಚಿವುಟಿ ಹಾಕುವ ಪ್ರಯತ್ನ ಗಮನಾರ್ಹವಾಗಿದೆ. ಹೆಣ್ಣಿರುವುದೇ ಹೆರವರ ಸುಖಕ್ಕಾಗಿ ಎನ್ನುವ ಜನಧೋರಣೆ, ಹೆಣ್ಣಿನ ಅಸಹಾಯಕತೆಗಳು ಇಂಥ ಬಲಿದಾನಕ್ಕೆ

ಹಿನ್ನೆಲೆಯಾಗಿವೆ. ಹುಳಿಯಾರು ಕೆಂಚಮ್ಮ, ಕೆರೆಗೆಹಾರ, ಅಣಜಿಯ ಹೊನ್ನಮ್ಮ ಕಥನಗಳಲ್ಲಿ ಕಿರಿಯ ಸೊಸೆಯೇ ಮನಸಿಲ್ಲ ದಿದ್ದರೂ ಮಾವನ ನಿರ್ಧಾರಕ್ಕೆ ಬದ್ದಳಾಗಿ ಬಲಿಯಾಗುತ್ತಾಳೆ.

### ೪.೧೫ ಸವತಿ ಮತ್ಸರ

ಜಾನಪದ ಸೊಗಡನ್ನು ಹೊಂದಿದ ಗೊಂದಲಿಗರ ಕಥೆಗಳಲ್ಲಿ ಹಲವಾರು ಕೌಟುಂಬಿಕ ಅಂಶಗಳನ್ನು ಕಾಣುತ್ತೇವೆ. ಅದರಲ್ಲಿ ಸವತಿ ಮತ್ಸರವು ಒಂದಾಗಿದೆ. ಸವತಿ ಮತ್ಸರವು ಅನಾದಿಕಾಲದಿಂದ ಬಂದ ಭಾವನಾತ್ಮಕ ಬಿರುಕಾಗಿದೆ. ಗೊಂದಲಿಗರ ಕಥೆಗಳು ಸಹ ಇದಕ್ಕೆ ಹೊರತಾಗಿಲ್ಲ. 'ವಿಘ್ನಾವತಿ' ಕಥೆಯಲ್ಲಿ ಚಿತ್ರಸೇನ ರಾಜ ತನಗೆ ಮದುವೆಯಾಗಿಲ್ಲ ಎಂದು ಸುಳ್ಳು ಹೇಳಿ ವಿಘ್ನಾವತಿಯನ್ನು ಮದುವೆಯಾಗಿ ಬರುತ್ತಾನೆ. ಆಗ ವಿಘ್ನಾವತಿಗೆ ಆತನಿಗೆ ಏಳು ಜನ ರಾಣಿಯರಿರುವುದು ತಿಳಿಯುತ್ತದೆ. ಆಗ ಸವತಿ ಮತ್ಸರದಿಂದ ವಿಘ್ನಾವತಿ "ಮೋಸಗಾರ, ಮನಘಾತಕ ಚಿತ್ರಸೇನ । ನನಗೆ ಲಗ್ನ ಆಗಿಲ್ಲ. ನನಗೆ ಮಡದೇರು ಇಲ್ಲ ಅಂತ ಅಡಿವ್ಯಾಗ ಹೇಳಿ ಕರ್‍ಕೊಂಡು ಬಂದು ನನಗೆ ಈ ಅರಮನಿಯಾಗ ಇಟ್ನಲ್ಲ ಈಗೇನೋ ನನ್ನ ಮ್ಯಾಲೆ ಮನಸು ಐತಿ ಪ್ರೇಮ ಮಾಡ್ತಾನೆ. ನನ್ನ ಮೇಲೆ ಪ್ರೇಮ ಮುರಿದ ಬಳಿಕ ಮಡದಿಯರ ಕಡಿಗೆ ಹೋಗ್ತಾನೆ ರಾಜಾ. ನಿನ್ನ ಏಳು ಮಂದಿ ಮಡದಿಯರು ಹ್ಯಾಂಗ ಆದಾರಲ್ಲ ಇವರಿಗೆ ಮೋಸದಿಂದ ಕೊಲ್ಲಿಸಬೇಕು. ಇವರು ಸವತೇರು ಆದಾರ ಅಂದ ಬಳಿಕ ಇವರಿಗೆ ಬಿಡಬಾರದು"[೮೦] ಅಂದ್ಲು ವಿಘ್ನಾವತಿ. ಆ ಸವತೆಯರನ್ನು ಕೊಲ್ಲಲಿಕ್ಕೆ, ಹೊಟ್ಟೆ ನೋವೆಂದು ನೆಪತೆಗೆದು ಮಲಗಿಬಿಟ್ಟಳು. ಸಮಾದಾನ ಮಾಡಲು ಬಂದ ರಾಜನಿಗೆ ಅವರ ಕಣ್ಣದೃಷ್ಟಿ ತಗಲಿದ್ದಕ್ಕೆ ಈ ಹೊಟ್ಟೆಶೂಲಿ ಬಂದೈತ್ರಿ ಎಂದು ಹೇಳಿದಳು. ಅದಕ್ಕೆ ಪರಿಹಾರವಾಗಿ ಆ ಏಳು ಮಂದಿ ಸವತೇರನ್ನು ಎಳೆದುಕೊಂಡು ಸರೋವರದಲ್ಲಿ ಒಯ್ದು ಕಡಿಬೇಕ್ರಿ, ಕಡಿದು ಅವರ ಹದಿನಾಲ್ಕು ಕಣ್ಣು ತೊಗೊಂಡು ಬರ್‍ಬೇಕ್ರಿ, ಆ ಕಣ್ಣಿನ ಮ್ಯಾಲೆ ಕುತ್ಕೋಂಡು ಒಂದು ಹಂಡೆ ನೀರು ಎರ್‍ಕೊಂಡು ಬಿಟ್ರೆ ಈ ಹೊಟ್ಟೆ ಶೂಲಿ ಹೋಗ್ತೈತಿ ಎಂದು ಹೇಳಿದಳು. ಇಲ್ಲಿ ಸವತೇರನ್ನು ಹೇಗಾದರೂ ಮಾಡಿ ಕೊಲ್ಲಿಸಬೇಕು ಎಂಬ ಕಟು ನಿರ್ಧಾರಕ್ಕೆ ವಿಘ್ನಾವತಿ ಬರುತ್ತಾಳೆ.

ವಿಘ್ನಾವತಿ "ಅವರ ಕಣ್ಣುಗಳನ್ನು ಕೀಳಿಸಿದರೆ ಮಾತ್ರ ನನ್ನ ಹೊಟ್ಟೆ ನೋವು ಹೋಗುವುದು" ಎಂಬ ಮಾತಿನಲ್ಲಿ ಸಾಮಾನ್ಯವಾಗಿ ಮನೆಯಲ್ಲಿ ಯಾರಿಗೆಯಾಗಲಿ ಹೊಟ್ಟೆನೋವು ಬಂದಾಗ ಮೊದಲಿಗೆ ತಾಯಿ ಅಥವಾ ಮನೆಯ ಹೆಂಗಸು ಮಾಡುವ ಕೆಲಸ ಕೆಟ್ಟ ದೃಷ್ಟಿ ಬಿದ್ದಿರಬಹುದು ಎಂದು ತಿಳಿದು ಕಸಬರಗಿ ಕಡ್ಡಿಯೋ ಅಥವಾ ಒಣ ಮೆಣಸಿನಕಾಯಿ, ಉಪ್ಪು ಕೆಲವೊಂದು ವಸ್ತುಗಳನ್ನು ತೆಗೆದುಕೊಂಡು

ಹಾದಿ ಕಣ್ಣು ಬಿದಿಕಣ್ಣು

ಅವರಕಣ್ಣು ಇವರ ಕಣ್ಣು

ಹಾಳಾಗಿ ಹೋಗ್ಲಿ ಎಂದು ನಿವಾಳಿಸಿ ಸುಡುತ್ತಾಳೆ. ಈ ಮೂಲ ಆಚರಣೆಗೆ ಗೊಂದಲಿಗರು ಹೊರತಾಗಿಲ್ಲ. ತಮ್ಮ ಆಚರಣೆಗಳ ಸುತ್ತ ಈ ಕಥೆಗಳನ್ನು ಕಟ್ಟಿದ್ದಾರೆ.

ಆ ಹದಿನಾಲ್ಕು ಕಣ್ಣುಗಳ ಮೇಲೆ ಕುಳಿತು ಹಂಡೆ ನೀರು ಏರಕೊಳ್ಳತ್ತೀನಿ ಎನ್ನುವಾಗ ಆಕೆಯೊಬ್ಬ ಮನುಷ್ಯನಿಗಿಂತ ಭಿನ್ನವಾದ ಸ್ವಭಾವವನ್ನು ಹೊಂದಿದವಳು ಹಾಗೂ ಅವಳು ರಾಕ್ಷಸಿ ಸ್ವಭಾವದವರು ಎಂಬುದು ನಮಗೆ ತಿಳಿಯುತ್ತದೆ. ಆದರೆ ಅದರ ಪರಿವೇ ಇಲ್ಲದ ರಾಜ ಅವಳ ಸೌಂದರ್ಯಕ್ಕೆ ಹಾಗೂ ಅವಳ ಮಾತಿಗೆ ಮಾರು ಹೋಗಿ ತನ್ನ ಮಾಹಾರಾಣಿಯರನ್ನು ಕೊಲ್ಲಿಸಲು ಆಜ್ಞೆ ಮಾಡುತ್ತಾನೆ. ಮಂತ್ರಿಗಳು ಗರ್ಭಿಣಿಯರಾದ ಇವರನ್ನು ಕೊಲ್ಲಲು ಮನಸ್ಸು ಬರದೆ ಅವರ ಕಣ್ಣುಗಳನ್ನು ಮಾತ್ರ ಕಿತ್ತು ತಂದುಕೊಡುತ್ತಾನೆ. ಆಗ ಅವಳ ಹೊಟ್ಟೆಯ ಶೂಲೆ ಕಡಿಮೆಯಾಗುತ್ತದೆ. ಇಲ್ಲಿ ಅಸೂಯೆ ಎಂಬುದು ಮನುಷ್ಯನನ್ನು ಯಾವ ಮಟ್ಟಕ್ಕೆ ಇಳಿಸುತ್ತದೆ ಎಂಬುದನ್ನು ಅರಿಯಬಹುದು. ಗೊಂದಲಿಗರ ಇನ್ನೊಂದು ಕಥೆ 'ಮಹಾಸತಿ ಶಿವಲೋಚನ' ಯಲ್ಲಿ ಲೇಶಿಯಾದ ರಂಭೆ ರಾಜನು ತನ್ನನ್ನು ಬಿಟ್ಟು ಹೋಗಬಾರದು, ತನಗೊಬ್ಬಳು ಸವತಿ ಬರುತ್ತಾಳೆ. ಅವನನ್ನು ಲಗ್ನಕ್ಕೆ ಕಳುಹಿಸಿಕೊಡಬಾರದು ಎಂಬ ಸವತಿ ಮತ್ಸರದಿಂದ ಮಂತ್ರಿ ತಂದ ಶಿವಲೋಚನೆಯ ಫೋಟೊದಲ್ಲಿ ಒಂದು ಕಣ್ಣನ್ನು ಕುಡ್ಡ ಮಾಡುತ್ತಾಳೆ. ವಿರೂಪ ಮಾಡಿ ಅವನನ್ನು ಮದುವೆಗೆ ಹೋಗದಂತೆ ತಡೆಯುತ್ತಾಳೆ. ಜನಪದರ ಹಿನ್ನಲೆಯಲ್ಲಿ ಹೆಂಡತಿ ಯಾದವಳು ಸವತಿಯನ್ನು ಖಂಡಿಸುವುದನ್ನು ಎಷ್ಟು ಸೂಕ್ಷ್ಮವಾಗಿ ತನ್ನ ಗಂಡನಿಗೆ ತಿಳಿಸುತ್ತಾಳೆಂದರೆ.

ಅಂಗಿ ಮ್ಯಾಲ ಅಂಗಿ

ರಂಭಿ ಮ್ಯಾಲ ರಂಭಿ

ತಂದರೆ ಚಂದೇನು ನನರಾಯ ಎನ್ನುತ್ತಾಳೆ. ಹಾಗೆ, ಯಾರಾದರೂ ಊರಲ್ಲಿ ಆಕೆಯ ಗಂಡನ ಬಗ್ಗೆ ಕಟುವಾಗಿ ಮಾತನಾಡಿದಾಗ ಅಷ್ಟೇ ಚುಟುಕಾಗಿ ಉತ್ತರ ಕೊಡುವಳು ನಮ್ಮ ನಾಡಿನ ಗರತಿ.

ನಾ ಮುಡಿದ ಮಲ್ಲಿಗೆ

ಅವಳೊಮ್ಮೆ ಮುಡಿಯಲಿ

ಹೆಣ್ಣು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಮತ್ತು ಒಂದು ಕುಟುಂಬದಲ್ಲಿ ತನ್ನ ಸ್ಥಾನ ಭದ್ರತೆಗಾಗಿ ಹಲಬುತ್ತಾಳೆ. ಹಾಗೆಯೇ ಆ ಸ್ಥಾನಕ್ಕೆ ದಕ್ಕೆ ಬರುವುದು ಎಂದು ಕಂಡು ಬಂದಾಗ ಅವಳು ಏನೆಲ್ಲಾ ಮಾಡಲು ಸಿದ್ದಳಾಗುವಳು. ಅದನ್ನು ವಿಘ್ನಾವತಿ ಹಾಗೂ ರಂಭಾಳಲ್ಲಿ ಕಾಣುತ್ತೇವೆ.

'ಬಸವಕುಮಾರ ಲೋಹಿತಕುಮಾರ' ಕಥೆಯಲ್ಲಿ ಪಟ್ಟದರಸಿ ನರಸಾವತಿ ಹಾಗೂ ಕಿರಿಯ ಮಡದಿ ಜೂನಾವತಿಯರಲ್ಲಿ ನಿತ್ಯ ಕಲಹಗಳು. ಈ ಜಗಳಗಳನ್ನು ಬಗೆಹರಿಸುವುದೇ ರಾಜನಿಗೆ ಒಂದು ದೊಡ್ಡ ತೊಡಕಾಗಿ ಕಾಣುತ್ತದೆ. ಅದಕ್ಕಾಗಿ ಅವರಿಬ್ಬರನ್ನು ಬೇರೆ ಬೇರೆ ಅರಮನೆಯಲ್ಲಿ ಇಡುತ್ತಾನೆ. ನರಸಾವತಿ ಗರ್ಭದರಿಸಿ ಅವಳಿ-ಜವಳಿ ಮಕ್ಕಳಿಗೆ ಜನ್ಮ ನೀಡಿದ್ದು, ಜೂನಾವತಿಗೆ ಒಬ್ಬ ಕುಟಲೆ ಮುದಕಿಯಿಂದ ತಿಳಿದು ಮತ್ಸರದ ಹೊಗೆಯಾಡುತ್ತದೆ. ಬೆಂಕಿ ಕಿಡಿಯಾಗಿ ಹರಡುತ್ತದೆ. ಯಾರಿಲ್ಲದ ಸಮಯದಲ್ಲಿ ಮಕ್ಕಳನ್ನು ನೋಡಲು ಬಂದ ಜೂನಾವತಿ ಲೋಹಿತನ ಸೌಂದರ್ಯಕ್ಕೆ ಮನಸೋತು ಎದೆಗಪ್ಪಿಕೊಂಡು, ನಿಟ್ಟುಸಿರುಬಿಟ್ಟಳು.' ಹದಿನಾರನೆಯ ವಯಸ್ಸಿಗೆ ಈ ಹುಡುಗ ತನ್ನ ಪತಿಯಾಗಲಿ' ಎಂದು ಅವಳಿಗೆ ಅರಿವಿಲ್ಲದಂತೆ ನುಡಿಯೊಂದು ಹೃದಯದಲ್ಲಿ ಮಿಂಚುತ್ತದೆ. ಮಗು ಬೆಳೆದಂತೆ ಗುರುತಿಸಲು ಅಸಾಧ್ಯವೆಂದು ಲೋಹಿತನ ಹಣೆಯನ್ನು ಸೆಳ್ಳುಗುರಿನಿಂದ ಗೀರುತ್ತಾಳೆ. ಆಗ ಚಳ್ಳನೆ ರಕ್ತ ಹೊರಹೊಮ್ಮುತ್ತದೆ. ಇಂಥ ಕಪಟ ಮತ್ಸರದ ಹೆಣ್ಣನ್ನು ಜೂನಾವತಿ ಕಥೆಯಲ್ಲಿ ಕಾಣುತ್ತೇವೆ.

**೪.೧೬ ಸತಿ-ಪತಿ**

ಗೊಂದಲಿಗರ ಕಥೆಗಳನ್ನು ಕೌಟುಂಬಿಕ ಹಿನ್ನೆಲೆಯಲ್ಲಿ ನೋಡಿದಾಗ ಸಂಬಂಧಗಳು ಗಟ್ಟಿತನವನ್ನು ಹೊಂದಿರುತ್ತವೆ. ಆ ಸಂಬಂಧಗಳಲ್ಲಿ ಪ್ರೀತಿ, ಕರುಣೆ, ಮಮತೆ, ಅಧಿಕಾರ, ಧರ್ಪ, ನೋವು, ಸಂಕಟ, ವಿರಹ, ತ್ಯಾಗ, ಆಸೆ, ನೆನಪು ಮುಂತಾದ ಮನೋವ್ಯಕ್ತಿತ್ವ ಅಭಿಲಾಷೆಗಳನ್ನು ಹೊರಹಾಕಲಾಗುತ್ತದೆ. ಇಂತಹ ಸಂಬಂಧಗಳಲ್ಲಿ ಸತಿ ಪತಿ ಸಂಬಂಧವು ಪ್ರಮುಖವಾಗಿದೆ. ವಿವಾಹದ ನಂತರ ತವರನ್ನು ಬಿಟ್ಟು ಬರುವ ಹೆಣ್ಣಿಗೆ ತವರಿನ ನೆನಪು ಕಾಡದಂತೆ ಪತಿಯು ಸಮಾಧಾನ ಮಾಡುವ ರೀತಿಯು ನಮ್ಮ ಜನಪದರಲ್ಲಿ ಚೆನ್ನಾಗಿ ಮೂಡಿಬಂದಿದೆ.

"ಹಾಸಿಗೆ ಹಾಸೆಂದ ಮಲ್ಲಿಗೆ ಮುಡಿಯಂದ
ಬ್ಯಾಸತ್ರ ಮಡದಿ ಮಲಗೆಂದ । ಕೇದಿಗೆ
ತನ್ನೊಡಿ ತವರ ಮರೆಯೆಂದ॥

ಆಕೆ ತವರಿಗೆ ಹೊದಳೆಂದರೆ ವಿರಹವೇದನೆ ಆಗ ಪತಿಯು ಹಾಡಿನ ಮೂಲಕ ಹೇಳುತ್ತಾನೆ.

ಕಮಲದ ಹೂ ನಿನ್ನ ಕಾಣದೆ ಇರಲಾರೆ
ಮಲ್ಲಿಗಿ ಮಾಯ ಬಿಡಲಾರೆ । ಕೇದಿಗಿ
ಗರಿ ನಿನ್ನ ಅಗಲಿ ಇರಲಾರೆ ॥"[೪೧]

ಗೊಂದಲಿಗರ 'ಬಾಳಭಿಕ್ಷುಕ' ಕಥೆಯಲ್ಲಿ ಪದ್ಮಾವತಿ ಮೋಸದಿಂದ ಮದುವೆಯಾದ ಹನ್ನೆರಡು ದಿನದ ಕೂಸು ಬಾಳಬಿಕ್ಷುಕನನ್ನೇ ತನ್ನ ಪತಿಯೆಂದು ಸ್ವೀಕರಿಸಿ ಅವನು ಬೆಳೆದು ದೊಡ್ಡವನಾಗುವವರೆಗೂ ಸತಿಯಾಗಿ ಕಾಯುತ್ತಾಳೆ. ಕೊನೆಗೆ ಒಂದಾಗಿ ಬಾಳುತ್ತಾಳೆ.

### ೪.೧೭ ಅತ್ತೆ –ಸೊಸೆ

ಜನಪದರಲ್ಲಿ ಅತ್ತೆ ಎಂಬುದೊಂದು ವಿಶಿಷ್ಟವಾದ ಪಾತ್ರವನ್ನು ಹೊಂದಿದೆ. ಅಧಿಕಾರ ಅಥವಾ ಅತ್ತೆ ಎಂಬ ಸ್ಥಾನದ ದರ್ಪದಿಂದ ಬೀಗುತ್ತಾರೆ. ಸೊಸೆಯನ್ನು ನೋಡುವ ರೀತಿಯೇ ಬೇರೆಯಾಗಿದೆ. ಇಂತಹ ಹಲವಾರು ಉದಾಹರಣೆಗಳನ್ನು ನಾವು ಕಾಣಬಹುದು. ಮಗ ವ್ಯಾಪಾರಕ್ಕಾಗಿ ಏಳು ಸಮುದ್ರದಾಚೆಗೆ ಹೋದ ಎಷ್ಟೊ ಕಾಲದ ಮೇಲೆ ಸೊಸೆ ಗರ್ಭಿಣಿಯಂತೆ ಕಾಣುವ ಹೆಂಗಸೊಬ್ಬಳ ಚಿತ್ರಣವಿದೆ. ಮಗನ ಬಯಕೆಯಂತೆ ಸೊಸೆಯನ್ನು ಮಾತಾಡಿಸಿ ಸ್ನಾನ ಮಾಡಿಸಿ ಬರಲೆಂದು ಹೋಗುತ್ತಾಳೆ. ಸ್ನಾನ ಮಾಡಿಸುವಾಗ ಅತ್ತೆ ಎಂಬ ಈ ಹೆಂಗಸು ಸೊಸೆಯನ್ನು ಬಚ್ಚಲಿಗೆ ಒಯ್ದು ನಿಲ್ಲಿಸುತ್ತಾಳೆ. ತಲೆಯ ಮೇಲಿನ ದೃಷ್ಟಿ ಹೆಗಲ ಮೇಲೆ ಬಂತು ಕೆಳಗೆ ದಿಟ್ಟಿಸಿ ನೋಡುತ್ತಾಳೆ. ಹೊಟ್ಟೆ ಐದು ತಿಂಗಳ ಗರ್ಭಿಣಿಯಂತೆ ಕಾಣಿಸುತ್ತದೆ. ನೋಡಿದ ಕೂಡಲೇ ಸೊಸೆಯನ್ನು ಝಾಡಿಸಿ ಬಿದ್ದು ಬಿಟ್ಟಳು. ನನ್ನ ಮಗ ಹೋದಾಗಿನಿಂದ ಹೀಗೆ ಕೆಟ್ಟ ಕಾರುಬಾರು ಮಾಡಿ ಐದು ತಿಂಗಳು ಹೊಟ್ಟಿಲೇ ಆಗಿದ್ದಾಳೆ. ನಾಳೆ ನನ್ನ ಮನೆಗೆ ಹೆಂಡಿ ಒಗೆಯುತ್ತಾರೆ. ಊರಿನ ಮಂದಿ, ನಮ್ಮನ್ನು ಕುಲದ ಹೊರಗಿಡುತ್ತಾರೆ. ಎಂದು ಕೊಂಡು ಬಾರುಕೋಲಿನಿಂದ ಹೊಡೆದಳು ಆಕೆಯ ಬೆನ್ನಿನ ತೊಗಟೆ ಉಚ್ಚಿ ರಕ್ತ ಹಾರಲಿಕ್ಕೆ ಹತ್ತಿತ್ತು. ಇಲ್ಲಿ ಸಂಶಯದ ಅತ್ತೆಯ ಕಾರ್ಯವೈಖರಿಯಲ್ಲಿ ಅಧಿಕಾರದ ಧರ್ಪ ಕಂಡುಬರುವುದು. ಜನಪದ ಕೋಪದ ವ್ಯಕ್ತ ರೂಪಗಳನ್ನು ನಾವು ಇಲ್ಲಿ ಕಾಣಬಹುದು. ಉದಾಹರಣೆ ಝಾಡಿಸಿ ಒದೆಯುವುದು, ಬಾರುಕೋಲಿನಿಂದ ಹೊಡೆಯುವುದು. ರಕ್ತಹಾರುವಂತೆ ಬೆನ್ನಿನ ತೊಗಟೆ ಉಚ್ಚುವಂತೆ ಹೊಡೆಯುವುದು.

ಸೊಸೆಯನ್ನು ತರಾಟೆಗೆ ತೆಗೆದುಕೊಂಡ ಅತ್ತೆಗೆ ಸಮಾಧಾನವಾಗದೆ ತನ್ನ ಗಂಡನ ಬಳಿಗೆ ಹೋಗುತ್ತಾಳೆ. ಸೊಸೆಯನ್ನು ಕರೆಯಿಸಿ ವಿಚಾರಣೆ ಮಾಡಬೇಕೆಂದು ಅಗ್ರಹಿಸುತ್ತಾಳೆ. ಆದರೆ ತಾನು ಹೊಡೆದ ಸಂಗತಿಯನ್ನು ಮಾತ್ರ ಮುಚ್ಚಿಡುತ್ತಾಳೆ. ತಪ್ಪನ್ನು ಒಪ್ಪದ ಒಂದು ಬಗೆಯ ಸಾರ್ವತ್ರಿಕ ಅದೈರ್ಯ ಅವಳನ್ನು ಕಾಡಿದ್ದೀತು. ಆದರೂ ಅವಳ ಸೊಸೆಯನ್ನು ಚಿತ್ರಹಿಂಸೆ ಕೊಡುವಲ್ಲಿ ಮತ್ತು ಗಂಡನ ಕೈಯಿಂದ ಅವಳನ್ನು ಬೈಯಿಸುವಲ್ಲಿ ಯಶಸ್ವಿಯಾಗುತ್ತಾಳೆ.

ಹೆಂಡತಿಯನ್ನು ಕಳೆದುಕೊಂಡ ತನ್ನ ಅರಸನಿಗಾಗಿ ಪ್ರಧಾನಿ ಹೆಣ್ಣೊಂದನ್ನು ಗೊತ್ತು ಮಾಡಿಕೊಂಡು ಬರುವ ಸಂದರ್ಭ ಬರುತ್ತದೆ. ಪ್ರಧಾನಿ ಹೇಳುತ್ತಾನೆ. 'ಈಕೆಯ ಪಣ ಬಹಳ ಕೆಟ್ಟದಿದೆ' 'ಎಂಥಾ ಪಣ' ? ಎಂದು ಕೇಳುತ್ತಾನೆ ಅರಸ, ಅರಸನಿಗೆ ಯಾರ್ಯಾರೂ ಇರಬಾರದು.

ತಂದೆ ಮಕ್ಕಳು ಆಗಾದಿ ಭಾಗಾದಿ ಯಾರು ಇರಬಾರದು, ಬಾವಾನ ಹಾಗೆ ಒಬ್ಬನೇ ಇರಬೇಕು, ಇದೇ ಅವಳ ಪಣ ಈ ಮಾತಿಗೆ ನೀನು ಏನು ಹೇಳಿದೆ ? ಸನ್ಯಾಸಿ ಹಾಗೇ ಇದ್ದಾನೆ ಎಂದು ಹೇಳಿದೆ. 'ಠೀಕು ಹೇಳಿದೆ' ಲಗ್ನ ಎಂದು ಠರಾಯಿಸಿದ್ದಿ ? ಇವತ್ತಿಗೆ ಏಳು ದಿವಸಕ್ಕೆ ಎನ್ನುತ್ತಾನೆ. ಆಗ ರಾಜ ನನ್ನ ಹೊಟ್ಟೆಯಲ್ಲಿ ಇಬ್ಬರು ಮಕ್ಕಳಿದ್ದಾರೆ. ಅವರದು ಹೇಗೆ ಮಾಡಬೇಕು ಸ್ವಾಮಿ ಅರಸನ ಹೊಟ್ಟೆಯಲ್ಲಿ ಮಕ್ಕಳು ಇವೆಯೆಂದು ಯಾರಾದರೂ ಹೇಳಿದರೆ ಆರು ತಿಂಗಳು ಶಿಕ್ಷೆ ನೂರು ರೂಪಾಯಿ ದಂಡ ಕಟ್ಟಬೇಕು ಎಂದು ಡಂಗೂರ ಹೊಡೆಸುತ್ತೇನೆ. ಎಂದು ಹೇಳಿ

ಪ್ರಧಾನಿ ಡಂಗುರ ಹೊಡೆಸಿ ಬಿಟ್ಟ. ಕಾಶಿಬಾಯಿಯನ್ನು ಕರೆಸಿ, ಇವತ್ತಿನಿಂದ ಮಕ್ಕಳನ್ನು ನನ್ನ ವಾಡೆಗೆ ಕಳಿಸಬೇಡ ಎಂದು ಅರಸ ಹೇಳಿಬಿಟ್ಟ. ಸ್ವಾರ್ಥ ಎಂಬುದು ಯಾರನ್ನು ಬಿಟ್ಟಿಲ್ಲ ಎಂಬ ಅಂಶವು ಈ ಕಥಾಭಾಗದಲ್ಲಿ ಕಂಡು ಬರುತ್ತದೆ. ಒಂದು ಹೆಣ್ಣು ತಾನು ಮದುವೆಯಾಗುವ ಗಂಡು ಸರ್ವತಂತ್ರ ಸ್ವತಂತ್ರನಾಗಿರಬೇಕು. ಆತನಿಗೆ ಇತರ ಬಂಧು ಬಳಗ, ಸಂಬಂಧಿಗಳು ಇರಬಾರದು. ತಾನು ಬಯಸಿದಂತೆ ತನ್ನ ಬದುಕು ಇರಬೇಕು ಎಂಬುದು ಸ್ವಾರ್ಥ ಎನಿಸಿದರೂ, ಇಲ್ಲಿ ಹೆಣ್ಣಿನ ವಿಚಿತ್ರ ಕಲ್ಪನೆ ಆಕೆಯ ಆಸೆ ಆಕಾಂಕ್ಷೆಗಳು ಅಸಹಜವಾಗಿ ಕಂಡುಬರುತ್ತವೆ. ಅದಕ್ಕಾಗಿ ಅವಳು ಮದುವೆಯಾಗುವವ ಒಬ್ಬನೇ ಇರಬೇಕು ಎಂದು ಬಯಸುತ್ತಾಳೆ. ಇಂತಹ ಹಲವಾರು ಉದಾಹರಣೆಗಳು ಜನಪದ ಕಥೆಗಳಲ್ಲಿವೆ.

ಕೆಲ ಬುಡಕಟ್ಟು ಮತ್ತು ಶಿಷ್ಟ ಪರಿಸರದಲ್ಲಿಯೂ ಬಹಿಷ್ಕಾರ ಪದ್ಧತಿಗಳು ಕಂಡು ಬರುತ್ತವೆ. ಮದುವೆಯಾಗದೆ ಮೈನೆರೆದ ಹೆಣ್ಣುಮಗಳನ್ನು ಕಾಡಿಗೆ ಅಟ್ಟುವಂಥ ಕೌಟುಂಬಿಕ ಘಟನೆಯೂ ಸಾಮಾಜಿಕ ಪ್ರಭಾವದ ಹಿನ್ನಲೆಯಲ್ಲಿಯೇ ಅಳವಡುತ್ತದೆ. ಮಾನಸಿಕವಾಗಿ ಹಿಂಸೆಗೆ ಒಳಗಾಗುವಂಥ ಶಿಕ್ಷೆಯೇ ಬಹಿಷ್ಕಾರ. ಇಂಥಹ ಒಂದು ಪ್ರಸಂಗ ಗೊಂದಲಿಗರ ವಿಘ್ನಾವತಿ ಎಂಬ ಕಥೆಯಲ್ಲಿ ಬರುತ್ತದೆ.

"ಕ: ತೌರು ಮನೆಯಲ್ಲಿ ಋತುಮತಿಯಾದೆ; ನಮ್ಮ ಕುಲಪದ್ದತಿಯೊಳಗೆ ತೌರು ಮನೆಯಲ್ಲಿ ಋತುಮತಿಯಾದ ಬಳಿಕ ಲಗ್ನ ಆಗಾಂಗಿಲ್ಲ.

ಹಿ: ಹೌದು!

ಕ: ಎರಡೂ ಕಣ್ಣು ಕಟ್ಟಿ ಅಡಿವ್ಯಾಗ ಬಿಟ್ಹೋಗ ಪದ್ದತಿ ಐತಿ – ನಮ್ಮ ಧರ್ಮ! ನಮ್ಮ ತಾಯಿ– ತಂದೆ ನನಗೆ ಲಗ್ನ ಮಾಡಿಕೊಡ್ಲಿಲ್ಲ!'೪೨ ಎಂಬ ಮಾತನ್ನು ವಿಘ್ನಾವತಿ ರಾಜನಿಗೆ ಹೇಳುವ ಮಾತಿನಿಂದ ಬುಡಕಟ್ಟು ಸಮುದಾಯಗಳ ಸಾಮಾಜಿಕ ಪದ್ದತಿಗಳು ನಮಗೆ ಕಂಡು ಬರುತ್ತವೆ. ಕೆಲವು ಸಾರಿ ಮಾನಸಿಕ ಆಘಾತಗಳನ್ನು ತಡೆದುಕೊಳ್ಳಲಾಗದವರು, ಸಾಧ್ಯವಾದಷ್ಟು ಅಂಥದಕ್ಕೆ ಅವಕಾಶವಾಗದಂತೆ ನಡೆದುಕೊಳ್ಳುವುದು ಸಹಜ. ಪರ ಪುರುಷರೊಡನೆ ಇರುವ ಗುಪ್ತ ಸಂಬಂಧಗಳಿಗೂ ಅಂಥ ಶಕ್ತಿ ಇರುವುದರಿಂದ ಆ ಕುಟುಂಬದ ಹಿರಿಯರು ತುಂಬ

ಎಚ್ಚರ ವಹಿಸಬೇಕಾಗುತ್ತದೆ.ಅಲ್ಲಿ ಅವರಿಗೆ ಸಮಾಜ ಹಾಕುವ ಬಹಿಷ್ಕಾರದಲ್ಲಿ ಎರಡು ಅವಕಾಶಗಳಿವೆ.

"೧) ಇಡಿ ಕುಟುಂಬವೇ ಸಮಾಜದಿಂದ ಬಹಿಷ್ಕೃತಗೊಳ್ಳುವುದು ೨) ತಪ್ಪಿತಸ್ಥರನ್ನು ಕಾಡಿಗೆ ಒಯ್ದು ಕೊಲ್ಲುವುದು. ಆದರೆ ಇಲ್ಲಿ ಒಬ್ಬರ ಒಂದು ತಪ್ಪಿಗಾಗಿ ಇಡೀ ಕುಟುಂಬವೇ ಹೊಣೆ ಯಾಗಲು ಬಯಸುವುದಿಲ್ಲ. ಅದಕ್ಕಾಗಿ ಸಮಾಜದ ಸಾಮಾಜಿಕ ಭಾವನಾತ್ಮಕ ಸಂಬಂಧವನ್ನು ಕಡಿದುಕೊಳ್ಳಲು ಸಾಧ್ಯವಿಲ್ಲ."[೪೩] ಆದರೆ ತಪ್ಪಿತಸ್ಥರನ್ನು ಶಿಕ್ಷೆಗೆ ಗುರಿಪಡಿಸುವುದು ಜನಪದ ಬದುಕಿನುದ್ದಕ್ಕೂ ಕಂಡು ಬರುತ್ತವೆ.

### ೪.೧೮ ವಿವಾಹ

ವಿವಾಹ ಎಂಬುದು ಧಾರ್ಮಿಕ ಬಂಧವಾಗಿದೆ. ಕುಟುಂಬ ಎಂಬ ಸಾಮಾಜಿಕ ಘಟಕದ ಮೊದಲ ಹೆಜ್ಜೆಯೇ ವಿವಾಹ. ಸಮಾಜಶಾಸ್ತ್ರಜ್ಞರಾದ ಗಿಲಿನ ಮತ್ತು ಗಿಲಿನ ಇವರು ಹೇಳುವಂತೆ ಸಂತತಿಯನ್ನು ಹೊಂದತಕ್ಕ ಕುಟುಂಬಗಳ ಸ್ಥಾಪನೆಗೆ ಸಮಾಜವು ಮನ್ನಣೆಯನ್ನು ಕೊಟ್ಟಂತಹ ಮಾರ್ಗವೆಂದರೆ ವಿವಾಹ ಒಂದೇ.' "ವಿವಾಹ ಎಂಬುದು ಇಂದು ನಿನ್ನೆಯದಲ್ಲ ಮಾನವ ಸಂಸ್ಕೃತಿಯ ಜೊತೆ ಜೊತೆಗೆ ಬೆಳೆದು ಬಂದಿದೆ. ಅದು ಪ್ರಾಚೀನತೆಯ ಇತಿಹಾಸವನ್ನು ಹೊಂದಿದೆ. ಉತ್ತರ ಆಸ್ಟ್ರೇಲಿಯಾದ ತಿವಿ ಎಂಬ ಅತ್ಯಂತ ಸರಳವಾದ ಆದರೆ ಅಷ್ಟೇ ಸಧೃಡವಾದ ಬುಡಕಟ್ಟು ಸಮುದಾಯದಲ್ಲಿ ವಿಶಿಷ್ಟ ಮಾದರಿಯ ವೈವಾಹಿಕ ಪದ್ಧತಿಗಳು ಸುಮಾರು ೨೦ ಸಾವಿರ ವರ್ಷಗಳಿಂದಲೂ ಆಚರಣೆಯಲ್ಲಿವೆಯೆಂದು ಸಮಾಜ ವಿಜ್ಞಾನಿಗಳು ಅಭಿಪ್ರಾಯ ಪಟ್ಟಿದ್ದಾರೆ. ಅನೇಕ ನಾಗರಿಕತೆಗಳು ಉದಯಿಸಿ ಎತ್ತರಕ್ಕೆ ಏರಿ ಪ್ರಪಾತಕ್ಕೆ ಬಿದ್ದು ನಂತರ ಗತಿಸಿಹೋಗಿದ್ದರು, ತಿವಿ ಜನಾಂಗ ಹಾಗೂ ವೈವಾಹಿಕ ಪದ್ಧತಿಗಳು ನಶಿಸದೆ ಉಳಿದಿವೆ." ಎಂದು ಸಮಾಜ ವಿಜ್ಞಾನಿಗಳಾದ ವಾಲ್ಲೇಸ್ ಮತ್ತು ವಾಲ್ಲೇಸವರು ತಿಳಿಸಿದ್ದಾರೆ.

ಗೊಂದಲಿಗರ ಸಮುದಾಯದಲ್ಲಿಯೂ ವೈವಾಹಿಕ ಪದ್ಧತಿಯು ಹಾಗೂ ವಧುವನ್ನು ಹುಡುಕುವ ವಿಶಿಷ್ಟವಾದ ಪದ್ಧತಿಗಳನ್ನು ಕಾಣುತ್ತೇವೆ. ಈ ಸಮುದಾಯದಲ್ಲಿ ವಧುವನ್ನು ಅರಸಿಕೊಂಡು ವರನ ಕಡೆಯವರೇ ಹೋಗುತ್ತಾರೆ. ನೋಡಲು ಹೋಗುತ್ತಿರುವ ವಧುವಿನ ಜಾತಕ ಹೆಸರು ಬಲ 'ನಾಡಿ' ಇತ್ಯಾದಿಗಳನ್ನು ಜೋಯಿಸರಲ್ಲಿ ಕೇಳಿ ಹೊಲಿಕೆ ಬಂದರೆ ಮಾತ್ರ ಹೋಗುತ್ತಾರೆ. ಈ ಹೆಣ್ಣಿಗೆ ಈ ಗಂಡು ನಿರ್ಧಾರವಾದ ಮೇಲೆ ಎರಡೂ ಮನೆಯ ಹಿರಿಯರು ಮತ್ತು ಪಂಚರು ಕೂಡಿ ಬಳುವಳಿ ವಸ್ತ್ರಾಭರಣಗಳ ಬಗ್ಗೆ ಹಾಗೂ ವಿಳ್ಯದ ಮತ್ತು ಮದುವೆಯ ದಿನವನ್ನು ಕುರಿತು ಜೋಯಿಸರಲ್ಲಿ ಕೇಳಿ ನಿರ್ಧರಿಸುತ್ತಾರೆ. ಗೊಂದಲಿಗರು ತಮ್ಮ ಬದುಕಿನ ಜೊತೆ ಜೊತೆಗೆ ತಮ್ಮ ಕಥೆಗಳನ್ನು ಹೆಣೆಯುತ್ತಾರೆ. ತಮ್ಮಂತೆಯೇ ಆ ಕಥೆಗಳು ಎನ್ನುವಂತೆ ಅವರ ಕಥೆಗಳು ಪ್ರತಿಬಿಂಬಿಸುತ್ತವೆ. ಗೊಂದಲಿಗರ ಸಂಸ್ಕೃತಿಯಲ್ಲಿ ವಧುವನ್ನು ಅರಸಿಕೊಂಡು ವರನ ಕಡೆಯವರು ಹೋಗುವಂತೆ ಅವರ ಕಥೆಗಳಾದ 'ಸತಿ ಶಿವಲೋಚನದಲ್ಲಿ

ರಾಜಕುಮಾರ ನೀಲಕುಮಾರನಿಗೆ ವಧುವನ್ನು ಹುಡುಕಲು ಮಂತ್ರಿಯು ದೇಶದ ಮೇಲೆ ಹೋಗುತ್ತಾನೆ. ವಧುವನ್ನು ಹುಡುಕಿ ಒಳ್ಳೆಯ ದಿನ ಗೊತ್ತುಮಾಡಿ ಮದುವೆ ಮಾಡುತ್ತಾರೆ. ಒಳ್ಳೆದು ಮಹಾರಾಜರೇ ನಿಮ್ಮ ಅಪ್ಪಣೆಯಾದ್ರೆ ನಾನು ದೇಶದ ಮ್ಯಾಲೆ ಹೋಗಿ ಕನ್ಯಾ ನೋಡಿ ಬರ್ತಿನಿ.'ಎನ್ನುವ ಮಂತ್ರಿಯ ಮಾತು ಅಂದಿನ ಸಮಾಜದ ವಿವಾಹ ಕಾರ್ಯಾಚರಣೆಯನ್ನು ತಿಳಿಸುವುದು. ಅದರಂತೆ ಗೊಂದಲಿಗರಲ್ಲಿ ಮೊದಲು ತೊಟ್ಟಿಲು ವಿವಾಹ ಬಾಲ್ಯವಿವಾಹ ಪದ್ಧತಿಗಳು ಜಾರಿಯಲ್ಲಿದ್ದವು ಅದರಂತೆ ಅವರ ಬಾಳಭಿಕ್ಷುಕ ಕಥೆಯ ತೊಟ್ಟಿಲ ವಿವಾಹವನ್ನು ಕಾಣುತ್ತೇವೆ.

ಕ : ಬಾಳಭಿಕ್ಷುಕನ ಮುತ್ತಿನ ತೊಟ್ಟಿ ತರಿಸಿ ತೂಗು ಹಾಕಿಸಿದ ಹಂದರದಾಗೆ ಮಂತ್ರಿ.

ಹಿ : ಏನ್ರೀ ಮಹಾರಾಜ್ ?

ಕ : ಮದುಮಕ್ಕಳೇ ಬಂದಿಲ್ಲ, ತೊಟ್ಲು ತಂದು ಹಾಕಿದೆಲ್ಲ, ಹಂದ್ರದಾಗ ?

ಹಿ : ನಮ್ಮ ದೇಶದ ಪದ್ಧತೀನೇ ಹಿಂಗ್ರೀ ಮಹಾರಾಜ್ರೇ,

ಕ: ಅಂದ ಬುದ್ಧಿವಂತ ಮಂತ್ರಿ.

ಹಿ: ಹೌದೇ? ಇದೆಂಥಾ ಪದ್ದತಿ ಇದು?

ಕ: ಯಾಕಂದ್ರ , ವರ್ಷಂಬೋದಾಗ ಮಹಾರಾಣಿ ತೊಟ್ಲುಕಟ್ಲೀ ಅಂತ ನಮ್ಮದೊಂದು ಹರಕಿ ಇರತೈತಿ; ಅದಕ ಹಿಂಗ ತೊಟ್ಲ ತೂಗ ಹಾಕತೇವಿ.....ಹಂದರದಾಗ."[೪೪] ಎಂದು ತೊಟ್ಲಕ ಮದುವೆ ಮಾಡುವ ಪ್ರಸಂಗ ಗೊಂದಲಿಗರ ಬಾಳಭಿಕ್ಷುಕ ಕಥೆಯೊಂದರಲ್ಲಿ ಬರುತ್ತದೆ. ಗೊಂದಲಿಗರು ಆ ಕಥೆಗಳೇ ತಮ್ಮ ಬದುಕಿನ ಕಥೆಗಳು ಎನ್ನುವಂತೆ ಗಂಭೀರವಾಗಿ ಕಥೆಗಳನ್ನು ಹೇಳಲು ಪ್ರಾರಂಭಿಸುತ್ತಾರೆ.

'ಮಹಾಸತಿ ಶಿವಲೋಚನ' ಕಥೆಯಲ್ಲಿ ಮದುವೆಯ ವರ್ಣನೆಯನ್ನು ಈ ರೀತಿ ಕಾಣಬಹುದು. "ತೆಂಗಿನ ವನಂತರ, ತೇಗದ ವನಂತರ ಮಾವಿನ ವನಂತರ ಉಗೇದ ಮರಕಟ್ಟಿ ಹಾದಿಗೆ ಹಂದ್ರಹಾಕಿ ಬೀದಿಗೆ ಚಳ್ಳೆಕೊಟ್ಟು, ಹಳದಿ ತೋರಣ ಕಟ್ಟಿ, ಸಾಸ್ವಿಕಟ್ಟಿ ಕಟ್ಟಿ ಸೇರು ತುಂಬಿದ್ರು, ಹಂದ್ರದಾಗ ಬಂದು ಕಂಜೂರದ ಬಾಕು ದುಸ್ತುರ ಮಾಲು ನಿಂಬಿಹಣ್ಣು, ಸಿಕೇದ ಉಂಗುರ ತಂದು ಸಾಸ್ವಿ ಕಟ್ಟಿ ಮ್ಯಾಲಿಟ್ಟ ಮಂತ್ರಿ ಮದುಮಗನ ಮಾಡಿ 'ಮದುಮಗಳನ್ನು ಮದುವೆ ಮಾಡಿಕೊಂಡು ಬರುತ್ತಾರೆ."[೪೫]

"ಹಣೆಗೆ ಬಂಗಾರದ ಬಾಸಿಂಗ ಬೇಕು. – ಹರಯನ್ನ ಮಾದೇವಾ.
ಹಣೆಗೆ ಬಂಗಾರದ ಬಾಸಿಂಗ – ಓನಮ: ಶಿವಾಯ
ಕೈಗೆ ಮುತ್ತಿನ ಕಂಕಣ. – ಓನಮ: ಶಿವಾಯ
ಮುತ್ತಿನ ಹಾರಾ ಹಾಕ್ಯಾರಯ್ಯಾ. – ಓನಮ: ಶಿವಾಯ

ಗುರುಲಗ್ನ ನಡಿಸ್ಯಾರ. – ಓನಮ: ಶಿವಾಯ ನಮ: ಮಾದೇವ

ಒಂದೇ ದಿವಸ ಎರಡೇ ದಿವಸ – ಓನಮ: ಶಿವಾಯ"[೪೬]

ಎನ್ನುತ್ತ ಮಧುಮಕ್ಕಳ ಸಿಂಗಾರವನ್ನು ವರ್ಣಿಸಲಾಗಿದೆ.

'ಚಂದ್ರಹಾರ, ಕಂಠಿಸರ, ಗೋಧಿಸರ, ಬಹುಮಾಲೆ, ಕೈಗೆಮುತ್ತಿನ ಕಂಕಣ, ತಲೆಮೇಲೆ ಮುತ್ತಿನ ದಂಡಿ, ಮುತ್ತಿನ ದಂಡಿಗೆ ಎರಡು ತೊಂಡಲಗಳು, ಕಟ್ಯಾರ. ಹೆಣ್ಣಿಗೆ ಕಟ್ಟುವ ಬಾಸಿಂಗದ ಬಗ್ಗೆ ಹೇಳಲಾಗಿದೆ. ತಾಳಮೇಳ ಭಜಂತ್ರಿ ಮಾಡ್ಕೊಂತ್ತಾ ಹೆಣ್ಣಿನವರು, ಗೌಡೆವರು, ಬಾಣಗಿತ್ತಿಯರು, ಜಗಜಟ್ಟಿ ನಾಲ್ಕು ಜನರು ದಂಡು ಮಜಲು ಕಳಸ ಕನ್ನಡಿ ಸಹಿತ ಎದುರುಗೊಳ್ಳಾಕ ಬೀಗರಿಗೆ ಹೊರಟರು."[೪೭] ಬೀಗರನ್ನು ಎದುರುಗೊಳ್ಳುವ ಸಾಂಪ್ರದಾಯಕ ಪದ್ಧತಿಯನ್ನು ನಾವು ಇಲ್ಲಿ ಕಾಣುತ್ತೇವೆ.

## ೪.೧೯ ನಾಮಕರಣ

ಗೊಂದಲಿಗರು ಹುಟ್ಟಿದ ಮಗುವಿಗೆ ಹೆಸರಿಡುವುದು ಅಥವಾ ತೊಟ್ಲಕ್ಕ ಹಾಕಿ ಜೋಗುಳ ಹಾಡುವುದು. ಅವರ ಸಂಪ್ರದಾಯಗಳಲ್ಲಿ ಪ್ರಮುಖವಾಗಿದೆ. ಹಾಗೆಯೇ ಅವರ ಕಥೆಗಳಲ್ಲಿಯೂ ಈ ಅಂಶಗಳನ್ನು ಕಾಣುತ್ತೇವೆ.

"ಜೋ ಜೋ ಜೋಯನ್ನ ಬಾಲ,

ಸುಮ್ಮನೆ ಮಲಗು ದೇವಕಿ ಬಾಲ

ಜೋ ಜೋ ಜೋಯನ್ನ ಬಾಲ

ನಂದಗೋವಿಂದ ಮಲಗೋ ಬಾಳಾ ಜೋ ಜೋ.."

"ತೂಗಿರೆ ರಂಗನ ತೂಗಿರೆ ಕೃಷ್ಣನ

ತೂಗಿರೆ ನಂದಗೋಕುಲನ"[೪೮]

## ೪.೨೦ ವಿಧಿ/ಮಾಯೆ

ವಿಧಿ ಎನ್ನುವುದು ಆಯಾ ಪಾತ್ರಗಳು ಹೋಗಿ ತಲುಪಬೇಕಾದ ಪೂರ್ವನಿಶ್ಚಿತವಾದ ಗುರಿ ಅದು 'Destiny' ದೇವರಲ್ಲಿ ನಂಬಿಗೆ ಇಟ್ಟಿರುವಂತೆ ಜನಪದರು ವಿಧಿ ಯಲ್ಲಿಯೂ ವಿಶ್ವಾಸವಿಟ್ಟಿದ್ದಾರೆ."[೪೯] ದೇವರಲ್ಲಿ ಪ್ರಾರ್ಥನೆ ಶ್ರದ್ಧೆ ಭಕ್ತಿ, ಫಲವನ್ನು ಕಂಡುಕೊಂಡರೆ ಅದರ ತದ್ವಿರುದ್ಧವಾದ ಭಾವನಾ ಫಲಗಳನ್ನು ಜನಸಾಮಾನ್ಯರು ವಿಧಿಯಲ್ಲಿ ಕಾಣುತ್ತಾರೆ. ಭಯ, ನಿರಾಶೆ, ಪರಿತಪಿಸುವಿಕೆ, ನಿಷ್ಫಲ ಇವೆಲ್ಲಕ್ಕೂ ವಿಧಿಯನ್ನು ಹೊಣೆ ಮಾಡುತ್ತಾರೆ. ಗೊಂದಲಿಗರ ಹಲವಾರು ಕಥೆಗಳಲ್ಲಿ ಸತ್ಯತೆಯನ್ನು ಕಂಡುಕೊಳ್ಳುವಲ್ಲಿ ವಿಧಿಯು ತನ್ನ ಆಟವನ್ನು ಆಡುತ್ತದೆ. ಕಥೆಗಳಲ್ಲಿಯ ಹಲವಾರು ಪಾತ್ರಗಳು ವಿಧಿಯನ್ನು ಮೀರಿ ಸತ್ಯದ ಕಡೆಗೆ ಹೋರಾಡುವಂತೆ

ಮಾಡುತ್ತವೆ. ಬಸವಕುಮಾರ ಲೋಹಿತಕುಮಾರ ಕಥೆಯಲ್ಲಿ ಜೂನಾವತಿಯ ಕಪಟತನದಿಂದ ಅಡವಿ ಪಾಲಾದಾಗ ಅರಣ್ಯದಲ್ಲಿ ಬಸವಕುಮಾರನು ಲೋಹಿತನಿಗೆ ಕುಡಿಯಲು ನೀರನ್ನು ಕೇಳುತ್ತಾನೆ. ಆಗ ನೀರನ್ನು ತರಲು ಹೋಗಿ ವಿಧಿಯ ಆಟದಿಂದ ಅಲ್ಲಿ ಅವರಿಬ್ಬರು ಬೇರೆ ಬೇರೆಯಾಗುತ್ತಾರೆ. ಮಂತ್ರಿಯ ಮೋಸತನದಿಂದ ಪದ್ಮಾವತಿಗೆ ಚಿಕ್ಕ ಮಗುವನ್ನು ತಂದು ಮದುವೆ ಮಾಡಿ ಅವರಿಬ್ಬರನ್ನು ಅರಣ್ಯದಲ್ಲಿ ಬಿಟ್ಟಾಗ ಆಗ ಅವಳು ವಿಧಿಗಾಗಿ ಪರಿತಪಿಸುವುದನ್ನು ಬಾಳಭಿಕ್ಷುಕ ಕಥೆಯಲ್ಲಿ ಕಾಣುತ್ತೇವೆ. ಈ ಮಾಯೆ ಅಥವಾ ವಿಧಿ ಹರಿಹರ ಬ್ರಹ್ಮಾದಿಗಳನ್ನು ಬಿಟ್ಟಿಲ್ಲ. ಅಂಥದರಲ್ಲಿ ಸಾಮಾನ್ಯ ಮನುಷ್ಯನ ಪಾಡೇನು? ಇಂಥ ವಿಧಿಯು 'ವಿಘ್ನಾವತಿ' ಕಥೆಯಲ್ಲಿ ರಾಜಾಚಿತ್ರೋಸೇನನು ಮಾಯೆಯಾದ ವಿಘ್ನಾವತಿ ರೂಪಕ್ಕೆ ಮರುಳಾಗಿ ತುಂಬಾ ಕಷ್ಟವನ್ನು ಅನುಭವಿಸುತ್ತಾನೆ. ತನ್ನ ಹೆಂಡತಿಯನ್ನೇ ಬಿಡುತ್ತಾನೆ. ನಮ್ಮ ಜನಪದರು ಮಾಯೆಯ ಬಗ್ಗೆ ತುಂಬಾ ಸುಂದರವಾಗಿ ಹೇಳುತ್ತಾರೆ. ಅಂಥಹ ಪದಗಳನ್ನು ತನ್ನ ಗೊಂದಲದಲ್ಲಿ ಬಳಸುತ್ತಾರೆ.

"ಮಾಯೆ ಮೆಚ್ಚಲು ಬೇಡ ಮರುಳೇ....

ಉಪಾಯದಿಂದ ಕೊಲಸಿತ್ತ ಬ್ರಹ್ಮನ ಕೊರಳೇ

ಹತ್ತು ತಲೆರಾವಣನ ಕುತ್ತಿಗೆ ಕೊರೆಸಿತ್ತು

ಹರಿ ಎಂಬ ವಿಷ್ಣುವಿನ ಬಂಧನ ಮೂಡಿಸಿತ್ತು.

ಪಾಲ್ಗುಣನ ಎರಡು ಹಸ್ತಗಳನ್ನೇ ಕೊರಸಿತ್ತು....ಎಂದು ಮಾಯೆಯ

ಮಹಿಮೆಯನ್ನು ಗೊಂದಲಿಗರು ಪದ್ಯಗಳನ್ನು ತಮ್ಮ ಕಥನಗಳಲ್ಲಿ ಹಾಡುತ್ತಾರೆ.

.ಹಿ : ಆಹಾ।

ಕ : ಹರಿಗೆ-ಲಕ್ಷ್ಮಿ, ಬ್ರಹ್ಮನಿಗೆ-ಸರಸ್ವತಿ, ಸಂಕರನಿಗೆ-ಪಾರ್ವತಿ ಆಗಿ ಗಂಟಬಿದ್ದ ಮಾಯದ ಹೆಣ್ಣಿದು. ಈ ಹೆಣ್ಣಿನ ಮಹಿಮಾ ತಿಳಿದಿಲ್ಲ ನಿಮಗೆ"೫೦ ಎಂದು ಮಂತ್ರಿ ತನ್ನ ರಾಜ ಚಿತ್ರೋಸೇನನಿಗೆ ಹೇಳುತ್ತಾನೆ.

### ೪.೨೧ ಮರಣ

ಸಾವು ಕೆಲವೊಂದು ಅತಿಮಾನುಷ ವ್ಯಕ್ತಿಗಳಲ್ಲಿ ವಿಚಿತ್ರವಾಗಿರುತ್ತದೆ. ಒಂದು ವಿಶಿಷ್ಟ ಶಕ್ತಿಯಿಂದ ಅವು ಕೆಲಸಗಳನ್ನು ಮಾಡುತ್ತಿರುತ್ತವೆ. ಗೊಂದಲಿಗರ ಕಥೆಗಳಲ್ಲಿ ಅತಿಮಾನುಷ ಪಾತ್ರಗಳು ಕಥೆಗಳಿಗೆ ಜೀವ ತುಂಬಿವೆ. ಆದರೆ ಅವುಗಳ ಜೀವ ಬೇರೊಂದು ವಸ್ತುವಿನಲ್ಲಿದ್ದು ಅವುಗಳನ್ನು ಎಷ್ಟೇ ಬೇಧಿಸಿದರೂ ಅವುಗಳಿಗೆ ಯಾವ ಭಾದೆ ಆಗದೇ ಇದ್ದಾಗ ಮರಣದ ಗುಟ್ಟನ್ನು ಅರಿತುಕೊಂಡು ಕಥೆಯ ನಾಯಕ ಹೋರಾಟ ಮಾಡಿ ಅಲ್ಲಿ ಅವುಗಳನ್ನು ಭೇದಿಸಿ ಸಾವನ್ನು ಬಯಲು ಮಾಡುತ್ತಿರುತ್ತಾನೆ.

"ಮಾಹಾಸತಿ ಶಿವಲೋಚನಳ ಕಥೆಯಲ್ಲಿ ಶಿವಲೋಚನಗಳ ಸಾವು ಸಮುದ್ರದ ಸಜ್ಜಕಾಗ ಮೀನಿನ ಮೂಗಿನಾಗ ಗಾಡಿನತ್ತು ಇರೋದೇ ಅವಳ ಮರಣದ ಮೀನು, ಮೀನಿನ ಹೊಟ್ಟೆಯಲ್ಲಿರುವ ಶಿವದಾರದಲ್ಲಿ ಅವಳ ಮರಣವಿದೆ." ಅದನ್ನು ಯಾರಾದರೂ ಧರಿಸಿದರೆ ಅಲ್ಲಿ ಅವಳಿಗೆ ಸಾವು ಬರುತ್ತಿತ್ತು ಮತ್ತೇ ಅದನ್ನು ತೆಗೆದು ಹಾಕಿದಾಗ ಅವಳಿಗೆ ಜೀವ ಮರಳಿ ಬರುತ್ತಿತ್ತು.

ಒಬ್ಬ ರಾಜನ ಮರಣವು ಬಾಳೆಯ ಗಿಡದಲ್ಲಿರುವುದು, ಅದನ್ನು ನಾಶಪಡಿಸಿದಾಗ ಆ ರಾಜನಿಗೆ ಮರಣ ಬರುತ್ತಿತ್ತು. 'ಅಣ್ಣ-ತಂಗಿ' ಕಥೆಯಲ್ಲಿ ತಂಗಿಯ ಸಹಾಯದಿಂದ ರಾಕ್ಷಸನ ಮರಣದ ಗುಟ್ಟನ್ನು ತಿಳಿದು ಏಳು ಸಮುದ್ರದ ಆಚೆ ಇರುವ ಗಿಳಿಯ ಪಕ್ಷಿಯಲ್ಲಿರುವುದನ್ನು ಅಣ್ಣನು ಕೊಂದುಬರುವ ಸಾಹಸ ಮಾಡುತ್ತಾನೆ. ಹೀಗೆ ಮರಣವು ಗೊಂದಲಿಗರ ಕಥನಗಳಲ್ಲಿ ವಿವಿಧ ರೀತಿಯಲ್ಲಿ ವಿಶೇಷತೆಯನ್ನು ಹೊಂದಿದೆ. 'ವಿಘ್ನಾವತಿ' ಎಂಬ ಕಥೆಯಲ್ಲಿ ರಾಜಕುಮಾರನಾದ ಚಂದ್ರೋಜಿಕುಮಾರನು ವಿಘ್ನಾವತಿಯ ಮಾರು ವೇಷವನ್ನು, ಆಕೆ ರಾಕ್ಷಸಿ ಎಂಬುದನ್ನು ತೋರಿಸುವುದಕ್ಕಾಗಿ ಅವಳ ಮರಣವಿರುವ ಗೀಳಿಯನ್ನು ಹಿಡಿದು ತರುತ್ತಾನೆ. ತನ್ನ ರೂಪ ಬಯಲು ಮಾಡುತ್ತಾನೆಂದು ತಿಳಿದು ಅವನನ್ನು ನುಂಗಲು ಹೋಗುತ್ತದೆ. ಆಗ ಚಂದ್ರೋಜಿಕುಮಾರನು

"ಗಿಳಿ ಗೋಣ ಮುರಿದಾನ್ಯೆ ....
ರಾಕ್ಷಸಿ ಪ್ರಾಣಾ ಬಿಟ್ಟಿತಯ್ಯಾ...... ಹರಹರಮಾದೇವಾ
ರಾಕ್ಷಸಿ ಪ್ರಾಣಾ ಬಿಟ್ಟೈತ್ತೈ....ಗುರುವಿನ ಪಾದಾವಾ"[೫೧]

ಎಂದು ಆ ರಾಕ್ಷಸಿಯ ಪ್ರಾಣವನ್ನು ತೆಗೆಯುತ್ತಾನೆ.

### ೪.೨೨ ಶವಸಂಸ್ಕಾರ

ಗೊಂದಲಿಗರು ತಾವು ನೆಲೆಸಿರುವ ಪರಿಸರದ ನಂಬಿಕೆ ಆಚರಣೆಗಳನ್ನು ತಮ್ಮ ಕಥಾವಸ್ತುಗಳಿಗೆ ಅಳವಡಿಸಿಕೊಳ್ಳುತ್ತಾರೆ. ಸತಿ ಶಿವಲೋಚನಳ ಶವವನ್ನು ಕೈವಲ್ಯದಲ್ಲಿರಿಸಿ ಕೊಂಡು ಬಾಜಾ ಭಜಂತ್ರಿಯಿಂದ ಯಾತ್ರೆ ಹೊರಟಾಗ ಬೀದಿಗುಂಟ ಚುರುಮರಿಯನ್ನು ಸುರಿಸುತ್ತಾ ಹೋಗುತ್ತಾರೆ. ಇದು ಉತ್ತರ ಕರ್ನಾಟಕ ಹಾಗೂ ಮರಾಠಿಗರಲ್ಲಿ ಕಂಡು ಬರುವ ಶವ ಸಂಸ್ಕಾರಗಳಲ್ಲಿ ನಡೆಯುವ ವಿಧಿ ವಿಧಾನ ಕ್ರಿಯೆಯಲ್ಲಿ ಒಂದಾಗಿದೆ.

### ೪.೨೩ ಮಂತ್ರಿ

ಗೊಂದಲಿಗರ ಕಥನಗಳಲ್ಲಿ ರಾಜರ ಕಥೆಗಳು ಹಾಗೂ ಸ್ತ್ರೀತ್ವವುಳ್ಳ ಕಥೆಗಳು ಬಹಳ ಪ್ರಾಧಾನ್ಯತೆ ಪಡೆದುಕೊಂಡಿವೆ. ರಾಜರು ಎಂದ ಮೇಲೆ ಅವನಿಗೊಂದು ರಾಜ್ಯ ರಾಜ್ಯಬಾರ, ಆಡಳಿತ, ಮಂತ್ರಿ, ಸೈನಿಕರು, ಕುಟುಂಬ, ಪ್ರಜರು ಇರಲೇಬೇಕು. ಈ ಮಂತ್ರಿಯ ಸಲಹಾ

ಸೂಚನೆಯ ಪ್ರಕಾರ ರಾಜರು ತಮ್ಮ ಸಮಸ್ಯೆಗಳನ್ನು ಪರಿಹಾರ ಮಾಡಿಕೊಳ್ಳುವವರಾಗಿದ್ದಾರೆ. ಸಮಸ್ಯೆ ಸಂದರ್ಭಗಳನ್ನು ಬಹಳಷ್ಟು ಚಾಣಾಕ್ಷತನದಿಂದ ನಿರ್ವಹಿಸುವ ಚಾಣಾಕ್ಷ ಮಂತ್ರಿಗಳು ಇದ್ದರು. ಅರಸನ ಮೇಧಾ ಶಕ್ತಿಯೇ ತಾನಾಗಿ ವರ್ತಿಸುವ ಇವರ ಧೀಮಂತಿಕೆ ಕರ್ತವ್ಯ ನಿಷ್ಠೆ, ವಿಧೇಯತೆಗಳು ಅದ್ಭುತವಾದವು. ವಿಶ್ವಾಸ, ನಿಸ್ವಾರ್ಥತೆ, ಸಮಯ ಪ್ರಜ್ಞೆಗಳ ಒಕ್ಕೂಟವೇ ಈ ಮಂತ್ರಿಯಾಗಿದ್ದಾನೆ. ರಾಜನಿಗೋಸ್ಕರ, ರಾಜ್ಯಕ್ಕೊಸ್ಕರ ಹಾಗೂ ಪ್ರಜೆಗಳಿಗೊಸ್ಕರ ಏನು ಮಾಡಲಿಕ್ಕೂ ಹಿಂದೇಟು ಹಾಕದ ವ್ಯಕ್ತಿಯಾಗಿದ್ದಾನೆ. ಗೊಂದಲಿಗರ ಹಲವಾರು ಕಥೆಗಳಲ್ಲಿ ಮಂತ್ರಿಯಲ್ಲಿ ಕಂಡು ಬರುವ ಅಂಶಗಳು ಹೀಗಿವೆ.

೧ ರಾಜ ಹಾಗೂ ರಾಣಿಗೆ ಅವರ ಮಗ ಮೂಲಾ ನಕ್ಷತ್ರದಲ್ಲಿ ಹುಟ್ಟಿದ ಕಾರಣದಿಂದ ಸಾವು ಬರುವುದನ್ನು ತನ್ನ ಚಾಣಾಕ್ಷತನದಿಂದ ಹನ್ನೊಂದು ದಿವಸದ ಮಗುವಿಗೆ ಹನ್ನೆರಡು ವರ್ಷದ ಹೆಣ್ಣುಮಗಳನ್ನು ತಂದು ಮದುವೆ ಮಾಡಿ ಸಾವಿನ ಸಂದರ್ಭದಿಂದ ಪಾರು ಮಾಡುತ್ತಾನೆ.

೨ ತನ್ನ ಗೆಳೆಯ ಅಥವಾ ರಾಜಕುಮಾರನನ್ನು ಲೇಶಿಯ ಮನೆಯಿಂದ ಬಿಡುಗಡೆ ಮಾಡುವ ಸಲುವಾಗಿ ವರನಿಲ್ಲದೆ ಕೇವಲ ಅವನ ಗುರುತುಗಳಾದ ಕಠಾರಿ, ಕತ್ತೆ, ಬಂಗಾರ ನಿಂಬಿಹಣ್ಣು, ಉಂಗುರ, ಕಂಜೂರ, ಬಾಕು ಇವುಗಳ ಗುರುತಿನ ಮೇಲೆ ಶಿವಲೋಚನಗಳನ್ನು ಮದುವೆ ಮಾಡಿಸಿ ಕರೆದುಕೊಂಡು ಬರುತ್ತಾನೆ.

೩ ಕೇವಲ ವರನ ಫೋಟೋ ಗುರುತಿನ ವಸ್ತುಗಳ ' ಮೂಲಕ ಚಾಣಾಕ್ಷತನದಿಂದ ಮದುವೆ ಮಾಡಿಸುವ ಕಾರ್ಯ ಈ ಮಂತ್ರಿಯದ್ದಾಗಿದೆ.

೪ ರಾಜನಿಗೆ ಸಂತಾನವಿಲ್ಲದಾಗ 'ಪ್ರಜೆಗಳೆಲ್ಲರು ಬಂಜಿಮುಖಾ ನೋಡಬಾರ್ದು, ಬಂಜಿ ರಾಜನ ಚಾಕರಿ ಮಾಡ್ಬಾರ್ದು ಅಂತ್ಹೇಳಿ' ಪ್ರಜೆಗಳೆಲ್ಲರೂ ಊರುಬಿಟ್ಟು ಹೊರಡಲು ತಯಾರಾದಾಗ ಮಂತ್ರಿ ರಾಜನಿಗೆ ಸಲಹೆ ಕೊಡುತ್ತಾನೆ. ಅಡವಿಗೆ ಹೋಗಿ ತಪಸ್ಸು ಮಾಡಿ ದೇವರಿಂದ ಮಕ್ಕಳ ಫಲ ಪಡೆಯಲು ಹೇಳುತ್ತಾನೆ.

೫ ರಾಜನು ಬೇರೊಂದು ಮದುವೆಯಾಗಲು ನಿಂತಾಗ ಆತನ ಮೊದಲ ರಾಣಿಯನ್ನು ತಂಗಿಯಂತೆ ಸಾಕಿ ಅವಳ ಮಗುವಿಗೆ ವಿದ್ಯಾಬುದ್ಧಿ ಕಲಿಸಿ ಪ್ರರಾಕ್ರಮಶಾಲಿಯನ್ನಾಗಿ ಮಾಡಿ ಮತ್ತೇ ರಾಜನಿಗೆ ಒಪ್ಪಿಸುವ ಕಾರ್ಯವನ್ನು ಮಾಡುತ್ತಾನೆ.

೬ ರಾಜನನ್ನು ಮೋಸತನದಿಂದ ರಾಕ್ಷಸಿ ಮೋಹದ ರೂಪತಾಳಿ ಮದುವೆಯಾದಾಗ ಅರಮನೆ ರಾಜ್ಯದಲ್ಲಿಯ ಪ್ರಾಣಿಗಳನ್ನೆಲ್ಲ ರಾಜನಿಗೆ ಅರಿವಿಲ್ಲದೆ ತಿನ್ನುತ್ತ ಬಂದಾಗ ಮಂತ್ರಿಯು ಅವಳು ಮನುಷ್ಯಳಲ್ಲ ರಾಕ್ಷಸಿ ಎಂಬ ಸಂಗತಿಯನ್ನು ಮಹಾರಾಜನಿಗೆ ಸ್ಪಷ್ಟ ಪಡಿಸುತ್ತಾನೆ. ಅವರನ್ನು ಅದರಿಂದ ಪಾರು ಮಾಡುತ್ತಾರೆ.

**ಐರಾಮ**

ರಾಜಕುಮಾರ ಐರಾಮ ಬಾಳಭಿಕ್ಷುಕನ ಮೆಚ್ಚಿನ ಗೆಳೆಯ. ಒಮ್ಮೆ ಊಟಕ್ಕೆ ಭಿಕ್ಷುಕನ ಮನೆಗೆ ಬಂದಾಗ ಐರಾಮನು ಸಂಗವ್ವನ ಮನೆ ಎದುರಿಗೆ ಇರುವ ಮನೆಯಲ್ಲಿ ಪದ್ಮಾವತಿಯನ್ನು ಕಾಣುತ್ತಾನೆ. ಅವಳ ಸೌಂದರ್ಯಕ್ಕೆ ಮಾರು ಹೋಗಿ ತಾನು ಅವಳನ್ನು ಮದುವೆಯಾಗಬೇಕೆಂದು ಬಯಸುತ್ತಾನೆ. ನಂತರ ಅವಳು ತನ್ನ ಪ್ರೀತಿಯ ಗೆಳೆಯನ ಹೆಂಡತಿ ಎಂದು ತಿಳಿದರೂ ಅವನು ಗೆಳೆಯನನ್ನೆ ಕೊಲ್ಲಿಸಲು ಹೊಂಚು ಹಾಕುತ್ತಾರೆ.

" 'ಆಕೀ ಕಾಲಾಗ ನನ್ನ ಪ್ರಾಣ ಹೋದ್ರು ಬಿಡೋದಿಲ್ಲ ಹರಿಯನ್ನ ಮಾದೇವ.

ಮೊದಲು ಗೆಳೆಯನ್ನ ಕೊಲ್ಲಬೇಕು ನಾನು  ಶಿವಯನ್ನ ಮಾದೇವ.'

ಎಂದು ವಿಚಾರಿಸಿ ಗರಡಿಮನಿ ವಸ್ತಾದಿಯಿಂದ ಬಾಳಭಿಕ್ಷುಕನನ್ನು ಕೊಲ್ಲಿಸಲು ಪ್ರಯತ್ನಿಸುತ್ತಾರೆ. ಆದರೆ ಪರಮಾತ್ಮನ ದಯೆಯಿಂದ ಆತನು ಬದುಕುಳಿಯುತ್ತಾನೆ. ಆದರೆ ಐರಾಮನಿಗೆ ಸಮಾಧಾನವಾಗದೇ ಕಪ್ಪತ್ತು ಗುಡ್ಡದಲ್ಲಿರೋ ಏಳುಮೆಟ್ಟಿನ ಹುಲಿಯನ್ನು ಕೊಲ್ಲುವ ನೆಪ ಮಾಡಿ ಕರೆದುಕೊಂಡು ಹೋಗುತ್ತಾರೆ.

ಕ : ಏಲ್ಯೆ ನೀನೇ ಹುಲಿ ನಮ್ಮ ಕೈಯೊಳಗ ಬಿಡ್ಸಿಕೊಂಡು ಉಳಿದ್ರೆ, ಬಿಚ್ಚುಗತ್ತಿ ತೊಗೊಂಡು ನಿನ್ನ ಕಡಿಯಾಕ ಬಂದೀವೆ.

ಹಿ : ಎಂಥಾ ಮಾತು ಹೇಳ್ತೀರಿ ಜೀವದ ಗೆಳೆಯರಾ ! ನಿಮ್ಮಿಂದ ನಾನು ಓದು ಬರಹ ಕತ್ತಿ.

ಕ : ಗರಡೀ ವಿದ್ಯೆ ಕತ್ತಿ !

ಕ : ಇಡೀ ನಿಮ್ಮ ಪಟ್ಟಣದಲ್ಲಿ ಯಾವ ಸ್ತ್ರೀಯನ್ನು ನಾನು ಈ ತಂಕ ಕಣ್ಣೆತ್ತಿ ನೋಡಿಲ್ಲ. ಈ ಮಾತು ನಿಜ.

ಹಿ : ಸತ್ಯ. !

ಕ : ಹಂಗಾದ್ರೆ ಇಲ್ಲಿ ಕೇಳು ನೀನು ತಲಿಬಾಗಿ ನಿಂತ್ಕೊ : ಈ ಬಿಚ್ಚುಗತ್ತೀಲೆ ನಿನ್ನ ಶಿರಕ್ಕೆ ಹೊಡೀತೇವಿ. ನೀನು ಪಾರಾಗಿ ಉಳಿದ್ರ- ನೀನ ಸತ್ಯವಂತ."[೫೨]

ಎಂದು ಗೆಳೆಯ ಐರಾಮನು ಬಾಳಭಿಕ್ಷುಕನಿಗೆ ಹೇಳಿ ಬಿಚ್ಚುಗತ್ತಿಯಿಂದ ಅವನ ತಲೆಗೆ ಹೊಡೆಯುತ್ತಾರೆ. ಆದರೆ ಸತ್ಯದಿಂದ ಹಾಗೂ ಪರಮಾತ್ಮನ ಕರುಣೆಯಿಂದ ಬಾಳಭಿಕ್ಷುಕ ಬದುಕುತ್ತಾನೆ. ಆದರೆ ಅದೇ ಬಿಚ್ಚುಗತ್ತಿಗೆ ಐರಾಮ ಹಾಗೂ ಅವನ ಗೆಳೆಯ ಶಿವಗಣ್ಯ ಬಲಿಯಾಗಿ ಮೂರ್ಖತನದಿಂದ, ಅಸತ್ಯದಿಂದ ತಮ್ಮ ಸಾವನ್ನು ತಾವೇ ತಂದುಕೊಳ್ಳುತ್ತಾರೆ.

ಇಲ್ಲಿ ಸಾಮಾಜಿಕ ಮೌಲ್ಯವಾದ ಸ್ನೇಹವು ಪರಸ್ಪರ ಬಿಡದಂತ ಬಂಧನವಾಗಿದ್ದರೂ ಒಂದು ಹೆಣ್ಣಿಗೊಸ್ಕರ ತನ್ನ ಸ್ನೇಹಿತನನ್ನೇ ಕೊಲೆಮಾಡಲು ಮುಂದಾಗುತ್ತಾರೆ. ಬಾಳಭಿಕ್ಷುಕ

ತನ್ನ ಸ್ನೇಹತ್ವಕ್ಕೆ ಬೆಲೆಕೊಟ್ಟು ಸಾಯಲು ಸಿದ್ಧನಾಗುತ್ತಾನೆ. ಆದರೆ ಸತ್ಯ ಎಂಬ ಮೌಲ್ಯವು ಯಾವಾಗಲು ಜಯಕ್ಕೆ ಮೂಲ ಎಂಬುದು ಮರೆಯುವಂತಿಲ್ಲ. ಅದಕ್ಕಾಗಿ ಈ ಸತ್ಯದಿಂದ ಬಾಳಭಿಕ್ಷುಕ ಪ್ರಾಣಾಪಾಯದಿಂದ ಪಾರಾಗುತ್ತಾನೆ. ಅದೇ ಕಪಟ ಮೋಸತನದಿಂದ ನಡೆದುಕೊಂಡ ರಾಜನ ಹಾಗೂ ಮಂತ್ರಿಯ ಮಗ ಬಲಿಯಾಗುತ್ತಾರೆ. ಸ್ನೇಹಿತರ ಸಾವನ್ನು ಕಂಡು ಮರಗುವಲ್ಲಿ ಬಾಳಭಿಕ್ಷುಕನ ಭಾವನಾತ್ಮಕ ಸಂಬಂಧ ಎದ್ದು ಕಾಣುವುದು. ಹಾಗೂ ಅವರನ್ನು ಕಳೆದುಕೊಂಡ ನಂತರ ಬಾಳಭಿಕ್ಷುಕ ವನವಾಸದ ಹಾದಿಯನ್ನು ಹಿಡಿಯುವಲ್ಲಿ ಸಮಾಜದಲ್ಲಿ ಸ್ನೇಹ ಇರದಿದ್ದರೆ ಎಲ್ಲವೂ ಶೂನ್ಯ ಎಂಬ ಮಾತು ಇಲ್ಲಿ ಸ್ಪಷ್ಟವಾಗಿ ತೋರುವದು. ಅದಕ್ಕಾಗಿಯೇ ಬಾಳಭಿಕ್ಷುಕನಿಗೆ ಊರು, ರಾಜ್ಯ, ಸಂಬಂಧ ಯಾವುದು ಬೇಡವಾಗಿ ವನವಾಸದ ಹಾದಿ ಹಿಡಿಯುತ್ತಾನೆ.

ಐರಾಮ, ಶಿವಗಣ್ಯ ಸತ್ತದ್ದನ್ನು ಕಂಡು ಬಾಳಭಿಕ್ಷುಕ ಹಣೆಗೆ ಬಡೆದುಕೊಳ್ಳುತ್ತಾನೆ. "ಅಯ್ಯೋ ಗೆಳೆಯರಾ ! ನಿಮ್ಮ ಅನ್ನ ಉಂಡು ನಿಮ್ಮ ನೀರು ಕುಡಿದು ಬೆಳೆದ ನಾನು ನಿಮ್ಮನ್ನು ತುಂಡರಿಸಿ ಕಡಿದ್ನೆಲ್ಲೋ–ಮಾತಾಡ್ರೀ ಗೆಳೇರಾ–ಬಿಟ್ಟು ಹೊದ್ರ್ಯಾ ಗೆಳೇರಾ!"[೫೩] ಅಂತ ಹಂಬಲಿಸುತ್ತಾ ಬಾಳಬಿಕ್ಷುಕ ವನವಾಸದ ಹಾದಿ ಹಿಡಿಯುತ್ತಾನೆ.

### ೪.೨೪ ಪಾತಾಳಲೋಕ

ಗೊಂದಲಿಗರ ಕಥೆಗಳಲ್ಲಿ ದೇವಲೋಕ, ಪಾತಾಳಲೋಕ ಎಂಬ ಕಲ್ಪನೆಗಳನ್ನು ಸೂಕ್ಷ್ಮವಾಗಿ ನೀಡಿದ್ದಾರೆ. ಹಲವಾರು ಕಥೆಗಳಲ್ಲಿ ದೇವಲೋಕ, ಪಾತಾಳಲೋಕ ಹಾಗೂ ದೇವಲೋಕದ ಕನ್ಯೆಯರು ಆ ಕಥೆಯ ಕಥಾನಾಯಕನಿಗೆ ಸಹಾಯ ಮಾಡುವ ವ್ಯಕ್ತಿಗಳಾಗಿದ್ದಾರೆ. ನಾಯಕ ಸಮಸ್ಯೆಯಲ್ಲಿದ್ದಾಗ ಪರಿಹಾರ ಸೂಚಿಸುವ ಹಾಗೂ ಅವರಿಗೆ ದಾರಿತೋರಿಸುವ ಕಾರ್ಯವನ್ನು ಮಾಡುತ್ತಾರೆ. ಕೆಲವು ಕಡೆ ನಾಯಕನ ಸಂಗಾತಿಯಾಗುವ ಸಂದರ್ಭವೂ ಬರುವುದು. ಮುಂದೆ ರಾಣಿ ಪಟ್ಟವನ್ನು ಪಡೆಯುತ್ತಾರೆ. 'ಬಾಳಭಿಕ್ಷುಕ' ಕಥೆಯಲ್ಲಿ ಬರುವ ದೇವಕನ್ನಿಯಾಗಿರಬಹುದು. 'ರಾಜಾ ವೀರಪರಾಕ್ರಮ' ಕಥೆಯಲ್ಲಿ ಬರುವ ಋಷಿಗಳು,

ಈ ಎಲ್ಲ ಪಾತ್ರಗಳು ನಾಯಕನ್ನು ಅಪಾಯದಿಂದ ಪಾರು ಮಾಡುವ ಕಾರ್ಯವನ್ನೇ ಮಾಡುತ್ತವೆ ಹಾಗೂ ಅವರಿಗೆ ಒಳ್ಳೆಯದನ್ನೇ ಬಯಸಿ ದಾರಿ ತೋರುತ್ತವೆ.

ಕಥೆಯ ನಾಯಕ (ಬಾಳಭಿಕ್ಷುಕ) ತನ್ನ ಹೆಂಡತಿಗೆ ನೀರು ತರಲು ಬಾವಿಯಲ್ಲಿ ಗಿಂಡಿಯಿಂದ ನೀರು ಸೇದುತ್ತಿರುವಾಗ, ಕಳ್ಳನು ಅವನನ್ನು ಎತ್ತಿ ಒಗೆಯುತ್ತಾನೆ. ಒಳಗೆ ಪಾತಾಳ ಲೋಕದಲ್ಲಿ ದೇವಕನ್ಯೆ ಅವನನ್ನು ರಕ್ಷಿಸಿ ಕೈಹಿಡಿದು ಕರೆದುಕೊಂಡು ಹೋಗಿ ಉಪಚಾರ ಮಾಡುತ್ತಾರೆ. ಅವನ ವಿಷಯವನ್ನೆಲ್ಲ ತಿಳಿದು ಅವರಿಬ್ಬರು ಸತಿ–ಪತಿಗಳಾಗುತ್ತಾರೆ. ನೀರನ್ನು ಕೊಟ್ಟುಬರುತ್ತೇನೆಂದು ಬಾಳಬಿಕ್ಷುಕ ಹೇಳಿದಾಗ ದೇವಕನ್ನೆ ನಿಚ್ಚಣಿಕಿ ಸಹಾಯದಿಂದ ನಾಯಕನಿಗೆ ಮೇಲೆ ಹೋಗಲು ಸಹಾಯ ಮಾಡುತ್ತಾಳೆ. ಮುಂದೆ ಪದ್ಮಾವತಿಯು ತನ್ನ

ಹೆಂಡತಿಯೆಂದು ಗರುಡ ಪಕ್ಷಿಗಳ ಮೂಲಕ ತಿಳಿದು ಮೂವರು ಕೂಡಿ ರಾಜ್ಯಕ್ಕೆ ಮರಳುತ್ತಾರೆ.

'ರಾಜಾ ವೀರ ಪರಾಕ್ರಮ' ಕಥೆಯಲ್ಲಿ ಪಾತಾಳ ಲೋಕದ ಕಲ್ಪನೆ ಹೀಗಿದೆ. ಚಕ್ರ ಸೇಕ ಮಾಹಾರಾಜ ಕಣ್ಣು ಕಳೆದುಕೊಂಡಿದ್ದರಿಂದ ಅವನ ಮಗ ಪರಾಕ್ರಮನಿಗೆ ಪರಮಾತ್ಮನ ಶಾಪದಿಂದ ಕಳೆದುಹೊದ ಕಣ್ಣು ಮತ್ತೆ ಬರಲು ಯಂಕಂಭಟ್ರು ಬಂದು ದಾರಿ ತೋರಿಸುತ್ತಾರೆ.

"ಈ ಊರು ಚಂದ್ರಾವತಿ ಪಟ್ಣಬಿಟ್ಟು ಒಂದು ಮೈಲು ದೂರದಲ್ಲಿ ಶಿವಚಿತ್ರ ವನಾಂತರ ಇದೆ. ಪಾತಾಳ ಬಾವಿಯಲ್ಲಿ ಹೋದರೆ ಮಾತಾಡೋ ಅಡಕಿ, ನಗೋ ಎಲಿ, ಕಮಲದ ಹೂವು, ಕಲ್ಲು ಸುಣ್ಣ, ಕರೆ ಉಂಚಿ ತೊಪ್ಲ ಸಿಗ್ತಾವಪ್ಪಾ. ಅವು ಐದು ವಸ್ತು ತಂದು ಮಾತಾಡೋ ಅಡಕಿ, ನಗೊಎಲಿ ಕಲ್ಲು, ಸುಣ್ಣ ಮೂರು ಸಣ್ಣಾಗಿ ಅರದು ಕಣ್ಣಾಗ ಒಂದೊಂದೇ ಹನಿ ಬಿಡಬೇಕು. ಕಮಲದ ಹೂವಿನ ಬೆಳಕು ಕಣ್ಣಿಗೆ ತೋರಿಸ್ಬೇಕು, ಕರೇ ಉಂಚಿ ತೊಪ್ಲಾ ಬೆಂಕ್ಯಾಗ ಹಾಕಿ ಅದರ ಹೊಗಿ ನಿಮ್ಮ ತಂದಿ ಕಣ್ಣಿಗೆ ಕೊಟ್ರೆ ಅವರ ಕಣ್ಣು ಬರ್ತಾವೆ."[೫೪]

ಕೆಲವು ವಿಶೇಷ ವಸ್ತುಗಳು, ಶಕ್ತಿಗಳು ಈ ಪಾತಾಳಲೋಕದಲ್ಲಿ ಇರುತ್ತವೆ. ಎಂಬುದು ತಿಳಿಯುತ್ತದೆ. ಅದೊಂದು ಕೌತುಕವಾದ ಲೋಕ. ಅಲ್ಲಿ ಯಾರು ಸುಲಭವಾಗಿ ಹೋಗಲಾರರು ಹಾಗೂ ಮಾಹಾನ್ ಪರಾಕ್ರಮಶಾಲಿಗಳು ಧೈರ್ಯವಂತರು ಮಾತ್ರ ಅಲ್ಲಿ ಹೋಗುವರು. ಸಾಧನೆಯ ಮಹತ್ವದ ಮೆಟ್ಟಿಲು ಅದು. ಹಾಗಾಗಿ ಪರಾಕ್ರಮಿಯು ಮುತ್ತಿನ ತೊಟ್ಟಿಲ ಮೂಲಕ ಬಾವಿಯೊಳಗೆ ಇಳಿದಾನೆ ಜೊತೆಗೆ 'ವಕ್ಕಳಘಂಟಿ'ಯನ್ನು ಒಯ್ತಾನೆ.

"ಬಾವ್ಯಾಗ ನಡುದಾನೆ – ಹರಯನ್ನ ಮಾದೇವ
ಬಾವ್ಯಾಗ ನಡುದಾನೆ – ಓ ನಮ: ಶಿವಾಯ
ಒಂದೇ ಹಗಲು ಒಂದೇ ರಾತ್ರಿ – ಓ ನಮ: ಶಿವಾಯ
ಎರಡೇ ಹಗಲು ಎರಡೇ ರಾತ್ರಿ – ಓ ನಮ: ಶಿವಾಯ
ಮೂರೇ ಹಗಲು ಮೂರೇ ರಾತ್ರಿ – ಓ ನಮ: ಶಿವಾಯ
ಏಳೇ ಹಗಲು ಏಳೇ ರಾತ್ರಿ – ಓ ನಮ: ಶಿವಾಯ
ಬಾವ್ಯಾಗ ಇಳುದಾನ ಬಾಳಾ – ಹರಯನ್ನ ಮಾದೇವ
ಆತ್ಹೋಗಿ ತಳ ಮುಟ್ಯಾನಯ್ಯಾ – ಓ ನಮ: ಶಿವಾಯ"[೫೫]

ಪಾತಾಳವನ್ನು ಮುಟ್ಟಿದ ವೀರ ಪರಾಕ್ರಮಿಯು ಅಲ್ಲೊಂದು ಋಷಿಮಠ ನೋಡುತ್ತಾನೆ. ಏಳು ವರ್ಷದಿಂದ ಅಲ್ಲಿಯೇ ಪರಮಾತ್ಮನನ್ನು ಒಲಿಸಿಕೊಳ್ಳಲು ತಪಸ್ಸು ಮಾಡುತ್ತಿರುತ್ತಾನೆ. ತಪಸ್ಸಿನ ಫಲ ಪಡೆಯಲು ಅನೇಕ ತಪಸ್ವಿಗಳು ನಾನಾ ರೀತಿಯಲ್ಲಿ ವರ್ಷಗಟ್ಟಲೇ ತಪಸ್ಸು ಮಾಡುತ್ತಿದ್ದರು. ನೀರು, ಬೆಟ್ಟ, ಅರಣ್ಯ, ಹಾಗೂ ಸಮುದ್ರ, ಪಾತಾಳಲೋಕ, ಬೆಂಕಿ, ಹಾಗೂ

ಮುಳ್ಳಿನ ಮೇಲೆ ಅನೇಕರು ವಿವಿಧ ರೀತಿಯಲ್ಲಿ ಕಠೋರ ತಪಸ್ಸನ್ನು ನಡೆಸುತ್ತಿದ್ದರು. ಅಂತಹ ಒಂದು ತಪಸ್ಸನ್ನು ಈ ಋಷಿಯು ಪರಮಾತ್ಮನ ವರ ಪಡೆಯಲು ಮಾಡುತ್ತಿದ್ದನು. ವೀರ ಪರಾಕ್ರಮಿಯು ಬಂದದ್ದನ್ನು ಕಂಡು ಈ ಪಾತಾಳ ಲೋಕದಲ್ಲಿ ದೇವತೆಗಳು ಕೂಡಾ ಬರುವುದಕ್ಕೆ ಸಾಧ್ಯವಿಲ್ಲ ನೀನು ಹ್ಯಾಂಗ ಬಂದಿ ಇಲ್ಲಿ ? ಎಂದು ಕೇಳುವಲ್ಲಿ ಪಾತಾಳ ಲೋಕದಲ್ಲಿ ಕೇವಲ ರಾಕ್ಷಸರು ದುಷ್ಟಶಕ್ತಿಗಳು ಮಾತ್ರ ಇರುತ್ತವೆ. ಅದೊಂದು ಭಯಂಕರವಾದ ಲೋಕ ಎಂಬುದು ಗೊಂದಲಿಗರ ಅಭಿಪ್ರಾಯ. ಅಂದರೆ ದೇವಲೋಕದಲ್ಲಿ ದೇವತೆಗಳು ಮಾತ್ರ ಇರುತ್ತಾರೆ. ಮರ್ತ್ಯಲೋಕ, ಭೂಲೋಕದಲ್ಲಿ ಮನುಷ್ಯರು ವಾಸಿಸುತ್ತಾರೆ ಎಂಬ ಒಂದು ಪೌರಾಣಿಕ ಐತಿಹ್ಯವನ್ನು ಗೊಂದಲಿಗರು ತಮ್ಮ ಕಥೆಗಳಲ್ಲಿ ಪ್ರಸ್ತಾಪಿಸುತ್ತಾರೆ.

ಋಷಿಯು ಪರಾಕ್ರಮಿಗೆ ಅಲ್ಲಿ ಇರುವ ರಾಕ್ಷಸರನ್ನು ಸೋಲಿಸುವ ತಂತ್ರವನ್ನು ತಿಳಿಸುತ್ತಾನೆ ಹಾಗೂ ಅವನಿಗೆ ಮಾತಾಡೊ ಅಡಿಕಿ, ನಗೋ ಎಲಿ, ಕಲ್ಲುಸುಣ್ಣ, ಕಮಲದ ಹೂವು, ಕರೆ ಉಂಚಿ ತೊಪ್ಲ ತರಲು ಮಾರ್ಗವನ್ನು ಸೂಚಿಸುತ್ತಾನೆ.

ಈ ದಕ್ಷಿಣ ಮಾರ್ಗಕ್ಕೆ ಹೋಗ್ಬೇಕು ಹನ್ನೆರಡುಗಾವುದು. ಈ ಹನ್ನೆರೆಡು ಗಾವುದದಲ್ಲಿ ಏಳು ಕಂದಕ ದಾಟಬೇಕು. ಒಂಟಿ ಹೊಡೇವು ದಾಟಬೇಕು. ಒಂಟಿ ಹೊಡೇವು ದಾಟಿದ ಬಳಿಕ, ಕಂಚಿನ ಕೋಟೆ, ಅದಕ್ಕೆ ಏಳು ಉಕ್ಕಿನ ಕದಗಳು ; ಅವನ್ನ ಮುಚ್ಚಿ ಕಂಚಿ ಮುಖದ ರಾಕ್ಷಸ ಪಾರಾ ಕುಂತೈತಿ ಅದನ ದಾಟಿ ಒಳಗ ಹೋದ್ರ ಏಳು ಅಂತಿಸ್ತಿನ ಅರಮನಿ ಆ ಅರಮನಿಯೊಳಗ ದೇವಲೋಕದ ಕಮಲಗಂಧಿ ಅದಾಳೆ. ಅವಳ ಹತ್ತಿರ ಈ ಐದು ವಸ್ತುಗಳು ಸಿಗುತ್ತದೆ. ಎಂದು ಹೇಳುತ್ತಾರೆ. ಋಷಿಯು ರಾಕ್ಷಸರ ವಿರುದ್ದ ಹೋರಾಡಲು ಹಾಗೂ ಅಪಾಯದಿಂದ ಪಾರಾಗಲು 'ಅಂಬುಬಾಣ ಕಲ್ಲೊರೆಬಾಣ, ಆಕಾಶಬಾಣ' ಎಂಬ ಮೂರು ಬಾಣಗಳನ್ನು ಹಾಗೂ ಘನಮಂತ್ರ, ನಿಜಮಂತ್ರ, ವೇಗಮಂತ್ರ, ಎಂಬ ಮೂರು ಮಂತ್ರದ ಹರಳುಗಳನ್ನು ಮಂತ್ರಿಸಿಕೊಡುತ್ತಾನೆ. ಋಷಿಯ ಸಲಹೆಯಂತೆ ಇವೆಲ್ಲವುಗಳ ಸಹಾಯದಿಂದ ರಾಕ್ಷಸರನ್ನೆಲ್ಲ ಕೊಂದು ಕಮಲಗಂಧಿಯನ್ನು ಮೃತ್ಯಲೋಕಕ್ಕೆ ಕಳುಹಿಸುತ್ತಾನೆ. ತನ್ನ ತಂದೆ ತಾಯಿಯರ ಮುಂದೆ ಅವಳನ್ನು ಮದುವೆಯಾಗುತ್ತಾನೆ.

ಇಚ್ಛಾಶಕ್ತಿಯಿಂದ ತಮ್ಮ ಅನಿಸಿಕೆಯನ್ನು ಅನ್ಯರ ಮೇಲೆ ಹೇರಬಹುದು. ಆಗು ಹೋಗುಗಳನ್ನು ಬದಲಿಸಬಹುದು. ಎನ್ನುವ ವ್ಯಕ್ತಿ ನಿಷ್ಠೆ ಭ್ರಮೆ ಮನುಷ್ಯನಲ್ಲಿ ಅವನ ಅನಾಗರಿಕ ಅವಸ್ಥೆಯಿಂದಲೂ ಉಳಿದು ಬಂದಿರುವುದನ್ನು ಋಷಿ ಅಥವಾ ತೋರಂಗಿ, ಬಾವಾಗಳಲ್ಲಿ ಕಾಣುತ್ತೇವೆ. ಇಂದಿಗೂ ಇಂತಹ ಸ್ವಾಮಿಗಳ, ಕೈಚಳಕ ಸನ್ಯಾಸಿಗಳನ್ನು ಸೃಷ್ಟಿಸುತ್ತಲೇ ಇದ್ದಾರೆ. ಹಿಡಂಬಗಳಂಥ ಅತಿಮಾನುಷರ ಎಲ್ಲ ವಿದಥ ಮಂತ್ರ, ಮಾಟ, ಮೋಸಗಳನ್ನು ನಿವಾರಿಸಿ ಸಜ್ಜನರಿಗೆ ನೆರವಾಗುವ ಬಾವಾಗಳಲ್ಲಿ ತೋರಂಗಿ ಬಾವಾ ಒಬ್ಬ ಅಸಾಮಾನ್ಯ ವ್ಯಕ್ತಿಯಾಗಿ ತೋರಿದ್ದಾನೆ. ಯಾವುದೇ

ಜನ ಸಂಪರ್ಕವಿಲ್ಲದ ಏಕಾಂತವಾದ ನಿರ್ಜನ ಪ್ರದೇಶವು ಈತನ ವಾಸಸ್ಥಾನ. ಆಪತ್ತಿನಲ್ಲಿರುವವರಿಗೆ ಇವನು ಸಲಹೆಗಳನ್ನು ಸೂಚಿಸುವ ಕೆಲಸ ಮಾಡುತ್ತಾನೆ. ಆಪತ್ತಿನಲ್ಲಿರುವ ಕಥಾ ನಾಯಕನಿಗೆ ಈತ ಮಂತ್ರಿಸಿದ ಹರಳುಗಳನ್ನು ಕೊಡುತ್ತಾನೆ. ತಮ್ಮ ಮಂತ್ರ ಶಕ್ತಿಯಿಂದ ಎಲ್ಲವನ್ನು ಪಾರು ಮಾಡುವ ಕೆಲಸ ಮಾಡುತ್ತಾರೆ. ಮಂತ್ರದಿಂದ ಮಾವಿನಕಾಯಿ ಉದುರುವುದಿಲ್ಲವೆಂಬುದು ನೋಡುಗರಿಗೆ ಗೊತ್ತಿದ್ದರೂ, ಕಥೆಗಳ ವಸ್ತು ಸ್ಥಿತಿ ಹುಟ್ಟಿಸುವ ಭ್ರಮೆ ಅದ್ಭುತ. ಅದನ್ನು ಮಾಂತ್ರಿಕ ಶಕ್ತಿಯಂದೇ ಭಾವಿಸಲಾಗುತ್ತದೆ. ಹಲವಾರು ಪೌರಾಣಿಕ ಕಥೆಗಳಲ್ಲಿ ಮಂತ್ರಗಳಿಂದ ಬಯಸಿದ್ದನೆಲ್ಲ ಪಡೆದುವುದನ್ನು ಕಾಣುತ್ತೇವೆ. ಸಾಮಾನ್ಯ ಮನುಷ್ಯನ ಎಷ್ಟೋ ಕೊರತೆಗಳನ್ನು ಈ ಮಂತ್ರಶಕ್ತಿಯು ಪೂರೈಸುತ್ತದೆ ಎಂಬುದನ್ನು ಗೊಂದಲಿಗರು ಹೇಳಲು ಪ್ರಯತ್ನಿಸಿದ್ದಾರೆ. ಆ ಕಾರಣದಿಂದಲೇ ಏನೋ ಇಂತಹ ಋಷಿ ಮುನಿಗಳು ಹಾಗೂ ತೊರಂಗಿ ಬಾವಾಗಳನ್ನು ಕಂಡರೆ ಒಂದು ರೀತಿಯ ಪೂಜ್ಯಭಾವನೆ ಹಾಗೂ ಅವರ ಸ್ಥಾನ ಸಾಮಾನ್ಯರಿಗಿಂತ ಮೇಲ್ಮಟ್ಟದ್ದು. ಈ ಕಾಲ್ಪನಿಕ ವ್ಯಕ್ತಿಯ ಬಗ್ಗೆ ಗಾಢವಾದ ಜಾನಪದ ಭಕ್ತಿ ಗೀತೆಗಳಲ್ಲಿ ಉಲ್ಲೇಖವಿರುವುದೊಂದು ವಿಶೇಷ. ಉತ್ತರ ಭಾರತದ ಜಾನಪದ ಸಾಹಿತ್ಯ ಪ್ರಭಾವದಿಂದ ಗೊಂದಲಿಗರ ಆಟಗಳಲ್ಲಿ ಈ ವಿಷಯಗಳು ನುಗ್ಗಿರಬೇಕು.

### ೪.೨೫ ಯಮಲೋಕ

ಯಮ ಹಾಗೂ ಯಮಧರ್ಮದ ಬಗ್ಗೆ ಯಮಲೋಕದ ಚಿತ್ರ ವಿಚಿತ್ರ ಶಿಕ್ಷೆಗಳ ಬಗ್ಗೆ ನಮ್ಮ ಜನಪದರ ಕಲ್ಪನೆಗಳು ವೈವಿದ್ಯಪೂರ್ಣವಾಗಿ ಬೆಳೆದಿರುವುದು ಕಂಡು ಬರುತ್ತವೆ. ಯಮನೆಂದರೆ ಭಯಂಕರ ಸ್ವರೂಪಿ, ಅತ್ಯಂತ ಕಟು ಹೃದಯದ ಕ್ರೂರಿಯೆಂಬುದು ಸಾಮಾನ್ಯ ಕಲ್ಪನೆ. ಯಮನ ಚಿತ್ರಣವನ್ನು ಗೊಂದಲಿಗರು ತಮ್ಮ ಕಥನಗಳಲ್ಲಿ ಭಯಂಕರವಾಗಿ ಚಿತ್ರಿಸಿದ್ದಾರೆ.

"ಯಾವಾಗ ಬೆನ್ನಿನ ಮೇಲೆ ಚಂದ್ರಹಂಸ ಕುತುಕೊಂಡನೋ ಕುದುರೆ ಹಾಗೇ ಹಾರಿಬಿಟ್ಟಿತು, ಸ್ವರ್ಗಕ್ಕೆ ಚಂದ್ರಹಾಸ ಎಷ್ಟು ಲಗಾಮು ಎಳೆದರೂ ಕುದುರೆ ಭೂಮಿಗೆ ಇಳಿಯಲಿಲ್ಲ. ಕುದುರೆ ಸ್ವರ್ಗದ ಬಾಗಿಲಿಗೆ ಬಂತು. ಯಮಧೂತರು ನೋಡಿದರು, ಮಗುವನ್ನು ಹೆಡಮುರಿಗೆ ಬಿಗಿದು ಮೈಚರ್ಮ, ಸುಲಿಯೋವರೆಗೆ ಹೊಡೆದರು. ಸಾಕ್ಷಾತ್ ಶಿವನ ಬಳಿಗೆ ಕರೆದುಕೊಂಡು ಬಂದರು. ಬನ್ನಿ ಮಾಹಾಂಕಾಳಿ ಸಾಕ್ಷಾತ್ ಶಿವ ಕುಳಿತಿದ್ದಾರೆ. ಸ್ವಾಮಿ ಸ್ವಾಮಿ ದೇವಲೋಕದ ಕುದುರೆ ಮೇಲೆ ಕುಳಿತುಕೊಂಡು ಈ ಮಗ ಬಂದಿದ್ದ. ನಾವು ಹೆಡೆಮುರಿಗೆ ಬಿಗಿದು ಮೈಚರ್ಮ ಸುಲಿದು ಹೊಡೆಯುತ್ತ ಬಡಿಯುತ್ತ ಬಂದಿದ್ದೇನೆ. ಎಂದು ಯಮಧರ್ಮ ಹೇಳುತ್ತಾನೆ. ಇದೇ ಸಂದರ್ಭದಲ್ಲಿ ವ್ಯಕ್ತವಾಗುವ ಶಿವನ ಅಭಿಪ್ರಾಯ ಹೀಗಿದೆ.

ಮತ್ತೆ ಅವರಿಗೇನು ಗೊತ್ತು ಯಮದೂತರಿಗೆ, ನರಮನುಷ್ಯ ಸಾಯಬೇಕು, ರುಂಡ ಭೂಮಿ ಪಾಲಾಗಬೇಕು. ಜಲ್ಮ ಸ್ವರ್ಗಲೋಕಕ್ಕೆ ಬರಬೇಕು ಅಂಥಾದ್ದು ರುಂಡಬೆರಕೇಲಿ ಜೀವಾತ್ಮ ತಕೊಂಡು ಬಂದಿದ್ದಾನೆ. ಮತ್ತೇ ಅವರಿಗೆ ಸಿಟ್ಟು ಬರುವುದಿಲ್ಲವೆ.?"[೫೫] ಉಮಾಪತಿ,

ಯಮದೂತರಾಗಲಿ ಕೇವಲ ಆತ್ಮವನ್ನು ಮಾತ್ರ ಬಂಧಿಸಿ ಒಯ್ಯುವರೆಂಬ ನಂಬಿಕೆ ಇಲ್ಲಿರುವಂತೆ ಬಾಸವಾಗುತ್ತದೆ. ಜನಪದರ ನಂಬಿಕೆಯಲ್ಲಿ 'ಶರೀರ ನಶ್ವರ ಆತ್ಮ ಮಾತ್ರ ಶಾಶ್ವತ' ಎನ್ನುವ ಮಾತನ್ನು ನಾವು ಇಲ್ಲಿ ಕಾಣಬಹುದು.

**೪.೨೬ ಜೀವಾತ್ಮಾ-ಪರಮಾತ್ಮ**

'ಯಾಕೆ ಬಂದೆನವ್ವ ಇಂಥ ಊರಿಗೆ
ತಂಗಿ ಧಾತರಿಲ್ಲದ ಹಾಳ ಕೆರಿಗೆ ॥ ಪ ॥
ಬರಬರದಾಗಿತ್ತು ಇಂಥ ಊರಿಗೆ
ತಂಗಿ ಧಾತರಿಲ್ಲದ ಹಾಳ ಕೇರಿಗೆ ॥೧ ॥
ಕಳ್ಳಸುಳ್ಳಾರು ಕೂಡಿ ಕಳ್ಳತನವ ಮಾಡಿ
ಒಳ್ಳೆಯ ರಾತ್ರಿ ನೋಡಿ ಕೊಳ್ಳೆ ಹೊಡೆದಾರು ॥ ೨ ॥
ಪಂಜೆಗಳ್ಳರು ಮೂರು ನೆರನೋಡಿ
ವಂಚಿಸಿ ಹೊಯ್ದರಲ್ಲೊ ಬುಂಗಿ ಬಂಗಾರವ ಬಿಡದೆ ॥ ೩ ॥
ಜಲತಾರೆ ತಂಗಿ ನೋಡು ತಿರುದಂಬಿ ಉಣ್ಣಲಿಲ್ಲ.
ಮೂರಿದು ಹಾಕಿದರು ಬೀಗ ಬರಿದು ಮಾಡಿದರು ಮನೆಯ ॥ ೪ ॥
ಹೆಣ್ಣು ಕಾದಿತ್ತು ಮಾಯೆ ಮಣ್ಣು ಪಾಲಾಗಿತ್ತು ನೋಡಾ.
ಮಣ್ಣಿನ ಮಡಿವಾಳದೇವ ಗುಂಡಿನ ಸರಕಾರವಿದು.'[೫೭] ॥ ೫ ॥

ಒಂದು ಜೀವ ಜಗತ್ತಿನಲ್ಲಿ ಜನನವಾದರೆ ಸಾಕು ಅಲ್ಲೋಲ ಕಲ್ಲೋಲವಾದಂತೆ, ಹುಟ್ಟು ಸಾವುಗಳ ನಡುವೆ ನಿಂತು ಯಾಕೆಂದು ಪ್ರಶ್ನೆಗಳ ಸುರಿಮಳೆಗೈಯುವರು. ಇಹಲೋಕವನ್ನು ಬಿಟ್ಟು ಪರಲೋಕದಲ್ಲಿ ಪರಮೋಚ್ಚ ಸ್ಥಾನ ಹೊಂದಬೇಕೆಂದು ಬಯಸಿದವರು. ಭವ ಲೋಕದಲ್ಲಿರುವ ಸಂಸಾರಿಕ ಜಂಜಡವನ್ನು ಹಿಡಿದುಕೊಂಡು ನಡೆಯುವುದೇ ತತ್ವಪದಕಾರರಿಗೆ ಬೇಸರವನ್ನು ತಂದೊಡ್ಡುವ ಸಂಗತಿ. 'ಯಾಕೆ ಬಂದೆನವ್ವ ಇಂಥ ಊರಿಗೆ' ತಂಗಿ ದಾತರಿಲ್ಲದ ಹಾಳ್ ಕೇರಿಗೆ ಗುರುವಿಲ್ಲದಂತಹ ಒಬ್ಬ ಹೊಣೆಗಾರನಿಲ್ಲದಂತ ಊರು. ಅಬ್ಬಾ! ಇಲ್ಲಿ ಲೋಕ ವ್ಯವಹಾರ ದೃಷ್ಟಿಯಲ್ಲಿ ತರ್ಕಕ್ಕೆ ಒಡ್ಡಿದರೆ ಇದರ ಗೂಡಾರ್ಥವೇ ನಿಗೂಢವೇನೋ, ಇಲ್ಲಾ ಇದರ ಆರ್ಥವೇ ಬೇರೆಯಾಗಿ ಪಡೆ ಒಡೆಯುತ್ತದೆ. ಆತ್ಮ ಶರೀರವೆಂಬ ಅಂಗಿಯನ್ನು ಬಿಟ್ಟು ಭವಕ್ಕೆ ಬಂದದ್ದಾಗಿ ಗುರುತಿಸಲಾಗಿದೆ. ಈ ಮನುಷ್ಯನೆಂಬ ಪ್ರಾಣಿಗೆ ಗುರುವೆ ಇಲ್ಲಾವೆಂದಾದ ಮೇಲೆ ಅಥವಾ ಮೋಕ್ಷಕೆ ಮಾರ್ಗ ತೋರಿಸುವ 'ದಾತಾ' ಇನ್ನಿಲ್ಲಾವೆಂದಾಗ ಈ ಧರಣಿಗೆ ಉರುಳು ಹೊಡೆಯೂ ಬಾರದಿತ್ತು ; ಎಂಬುದು ತತ್ವಕಾರದ ಚಿತ್ತವಾಗಿರುವುದು ಸ್ಪಷ್ಟವಾಗಿದೆ.

## ೪.೨೭ ಸೃಷ್ಟಿ

ಸೃಷ್ಟಿಯ ಬಗ್ಗೆ ದಲಿತ, ಪೌರಾಣಿಕ, ಮತ್ತು ಜನಪದ ಕಥೆಗಳನ್ನು ನೋಡಿದಾಗ ಅವುಗಳು ಅವರ ಮೂಲ ಪುರುಷ ಹೇಗೆ ಇದ್ದ, ಅವನ ಜನ್ಮದ ರಹಸ್ಯ, ಅವನು ಮಾಡಿದ ಲೋಕ ಕಲ್ಯಾಣದ ಕೆಲಸಗಳು, ಅವರು ಈ ಜಗತ್ತಿಗೆ ನೀಡಿದ ಕೊಡುಗೆ ಮುಂತಾದವುಗಳನ್ನು ತುಂಬಾ ಅದ್ಭುತವಾಗಿ ವರ್ಣಿಸುತ್ತವೆ. ಅವುಗಳಲ್ಲಿ ಬಾವಿ, ಸೂರ್ಯ, ಚಂದ್ರ, ನಕ್ಷತ್ರ ಮುಂತಾದವುಗಳ ಸೃಷ್ಟಿಗೆ ತಮ್ಮ ಮಗನನ್ನೇ ಬಲಿಕೊಟ್ಟ ಈ ಜೀವ ಜಗತ್ತಿನ ಸೃಷ್ಟಿಗೆ ಕಾರಣವಾದದ್ದು ಗೊತ್ತಾಗುತ್ತದೆ. ಅದರ ಸಾರಾಂಶದಂತೆ ಮೂಲ ಪುರುಷನಾದ ಆದಿಜಾಂಬವನ ಹುಟ್ಟಿನೊಂದಿಗೆ ಆರಂಭವಾಗಿ ಕಾಲ ಮತಗಳ ವಿಂಗಡಣೆಯವರೆಗೂ ಸಾಗುತ್ತದೆ. ಈ ಮಧ್ಯ ಜಾಂಬವಂತ ಆದಿಶಕ್ತಿಯೊಂದಿಗೆ ಕೂಡಿ ತ್ರಿಮೂರ್ತಿಗಳಿಗೆ ಜನ್ಮ ಕೊಟ್ಟದ್ದು, ಆಕಾಶ, ಭೂಮಿ, ಚಂದ್ರ, ಸೂರ್ಯ, ನಕ್ಷತ್ರಗಳನ್ನು ಸೃಷ್ಟಿಸಿದ್ದು, ಜಲಮಯವಾಗಿದ್ದ ಈ ಜಗತ್ತಿನಲ್ಲಿ ಭೂ ಭಾಗವನ್ನು ರೂಪಿಸಲು ತನ್ನ ಸ್ವಂತ ಮಗನನ್ನೇ ಬಲಿಕೊಟ್ಟಿದ್ದು, ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಶ್ವ ಬ್ರಹ್ಮ ಜಗತ್ತ ನಿರ್ಮಿಸುವ ಶಕ್ತಿಯನ್ನೇ ಕಳೆದುಕೊಂಡಾಗ ಇನ್ನೊಬ್ಬ ಮಗನನ್ನು ಕಡಿದುಕೊಂದು ಅವನ ದೇಹದ ಅಂಗಾಂಗಗಳಿಂದ ವಿಶ್ವ ಬ್ರಹ್ಮನಿಗೆ ಬೇಕಾದ ಆಯುಧಗಳನ್ನು ಮಾಡಿಕೊಟ್ಟಿದ್ದು, ಹೀಗೆ ಮುಂದುವರಿಯುತ್ತಾ ' ಆದಿ ಜಾಂಬವಂತೆ ತನ್ನ ಮಗಳಾದ ಮತಂಗ ಕನ್ಯೆಯ ಬೆನ್ನು ಚರ್ಮವನ್ನೇ ಸಿಗಿದು ತುಂಡು ತುಂಡುಗಳನ್ನಾಗಿ ಕತ್ತರಿಸಿ ಒಂದೊಂದು ಗುಂಪಿಗೂ ಹಂಚಿದನಂತೆ' ಇವೇ ಮುಂದೆ ಜಾತಿಗಳಾದವಂತೆ, ಹೀಗೆ ಸೃಷ್ಟಿಯ ರಚನೆಯ ಬಗ್ಗೆ ಹಲವಾರು ದಂತ, ಪೌರಾಣಿಕ ಕಥೆಗಳನ್ನು ನಾವು ಗೊಂದಲಿಗರ ಕಥೆಗಳಲ್ಲಿ ಕಾಣುತ್ತೇವೆ.

## ೪.೨೮ ಅತಿಮಾನುಷ ಶಕ್ತಿಗಳು

ಗೊಂದಲಿಗರ ಕಥೆಗಳಲ್ಲಿ ಕಂಡು ಬರುವ ಅತಿಮಾನುಷ ಶಕ್ತಿಗಳು, ರಾಕ್ಷಸರು, ಪ್ರಾಣಿ ಪಕ್ಷಿಗಳು, ವಿಚಿತ್ರವಾಗಿ ಮಾತನಾಡುವ ವಸ್ತುಗಳು, ಕೀಲುಕುದುರೆ, ಎಲ್ಲವು ಪ್ರಮುಖ ಪಾತ್ರವಹಿಸುತ್ತವೆ. ಇಲ್ಲಿ ರಾಕ್ಷಸರು ಮರ್ತ್ಯಲೋಕ ಪಾತಾಳಲೋಕ ಎರಡಲ್ಲೂ ವಾಸ ಮಾಡುವರು. ಬಹುತೇಕ ಕ್ರೂರ ಸ್ವಭಾವದ ಸರ್ವಪ್ರಾಣಿ ಭಕ್ಷಕರು, ಮಾನವ ಪೀಡಕರಲ್ಲಿ ಮೊದಲಿಗರು. ಅವರಿಗೆ ಹಿಡಿಂಬಗಳೆಂಬ ಪರ್ಯಾಯ ನಾಮವೂ ಇದೆ. ಈ ಅತಿಮಾನುಷರದು ಶಾಶ್ವತ ಸಂಸಾರವಲ್ಲ, ತಾತ್ಕಾಲಿಕ. ಮೈಗರಜಿನದು, ದೇವರುಗಳಂತೆ ಇವರಿಗೂ ಈ ಮರ್ತ್ಯಲೋಕವೇ ಆಡುಂಬೊಲ. ಇಲ್ಲಿಯ ರಾಜ ಮಹಾರಾಜ, ಮಾನವರಿಗೆ ಮೊಹಗೊಂಡು ಅವರನ್ನು ಒಲಿಸಲು ಮಾರು ವೇಷದಿಂದ ಮೋಹಗೊಳಿಸಿ ಮೋಸ ಮಾಡುತ್ತಾರೆ. ಅದಕ್ಕಾಗಿ ವೇಷ ಮರೆಸುತ್ತಾರೆ. ಮೋಹಕ ರೂಪವನ್ನು ತಾಳಿ ಮೋಸ ಮಾಡುತ್ತಾರೆ.

ನೇರ ಹೋರಾಟಗಳಲ್ಲಿ ರಾಕ್ಷಸರನ್ನು ಸದೆ ಬಡಿದು ಕೊಲ್ಲಲಾಗುವುದಿಲ್ಲ. ಇವರ ಪ್ರಾಣಗಳು ಗಡಿಗೆ, ಗೊಂಬೆ, ಮರ ಸೋಟಗಳಂಥ ಅನ್ಯ ವಸ್ತುಗಳು ಹಾಗೂ ಗಿಳಿಗಳಂಥ

ಪಕ್ಷಿಗಳಲ್ಲಿರುವುದೇ ಹೆಚ್ಚು. ಈ ರಾಕ್ಷಸರ ಪ್ರಾಣತೆಗೆಯಲು ನಾಯಕರು ಹೋರಾಟ ಮಾಡಬೇಕಾಗುತ್ತದೆ. ಪಕ್ಷಿ, ಬಾಳೆಗಿಡ, ಮೂಲ ವಸ್ತುಗಳನ್ನು ನಾಶಮಾಡಿದಾಗಲೇ ಆ ಪೀಡಕರಿಗೆ ಸಾವು ಸಮಿಪಿಸುತ್ತದೆ.

ಉದಾಹರಣೆ, "ಒಂದೂರಲ್ಲಿ ಏಳು ಜನ ಅಣ್ಣಂದಿರು, ಮಗಿ ಹುಡುಗಿ ಅಂತ ಒಬ್ಬಳು ತಂಗಿ, ಅವಳು ಬಹಳ ಚಂದದವಳು. ಮಗಿ ಹುಡುಗಿಯ ರೂಪ ಕಂಡು ರಾಕ್ಷಸ ಅವಳನ್ನು ಬಯಸುತ್ತಾನೆ. ಒಂದು ದಿನ ಆತ ಜೋಗಿ ವೇಷದಲ್ಲಿ ಅವಳ ಮನೆಗೆ ಬರುತ್ತಾನೆ. ಆಕೆಯನ್ನು ಗಂಡನ ಮನೆಗೆ ಕರೆದೊಯ್ಯುವ ನೆಪದಲ್ಲಿ ತನ್ನ ಮನೆಗೆ ಕರೆತರುತ್ತಾನೆ.

ಇದರ ಸುಳುಹು ತಿಳಿದು ತಂಗಿಯನ್ನು ಹುಡುಕುತ್ತಾ ಅಲ್ಲಿಗೆ ಬಂದ ಅಣ್ಣಂದಿರನ್ನು ಕಲ್ಲು ಕುದುರೆಯಾಗಿಸುತ್ತಾನೆ. ಮುಂದೆ ಅಣ್ಣನ ಮಗ ಇವರನ್ನು ಹುಡುಕಿಕೊಂಡು ಬರುತ್ತಾನೆ. ಮಗಿ ಹುಡುಗಿ ಅವನನ್ನು ಅಡಗಿಸಿ ಇಡುತ್ತಾಳೆ. ಆ ರಾತ್ರಿ ರಾಕ್ಷಸ ಮನೆಗೆ ಬಂದಾಗ ಮಗಿ ಹುಡುಗಿ ಅಳುತ್ತ ಕುಳಿತಿರುತ್ತಾಳೆ. ಕಾರಣ ಕೇಳಿದ ರಾಕ್ಷಸ ಮನೆಗೆ ಬಂದಾಗ ನೀನು ಊರು ಮೇಲೆಲ್ಲ ಹೋಗುತ್ತಿ. ಇಲ್ಲಿ ನಾನು ಒಬ್ಬಳೇ ಇರುತ್ತೇನೆ. ನಿನ್ನನ್ನು ಯಾರಾದರೂ ಕೊಂದರೆ ನನ್ನ ಗತಿಯೇನು ? ಎನ್ನುತ್ತಾಳೆ. ಹಾಗೆ ನನ್ನನ್ನು ಕೊಲ್ಲಲು ಯಾರಿಗು ಸಾಧ್ಯವಿಲ್ಲ ನನ್ನ ಜೀವ ನನ್ನ ದೇಹದಲ್ಲಿಲ್ಲ, ಮನೆ ಮುಂದಿನ ದೊಡ್ಡ ತಾಳೆ ಮರದಲ್ಲಿದೆ. ಆ ತಾಳೆ ಮರವನ್ನು ಒಂದೇ ಪೆಟ್ಟಿಗೆ ಕಡಿಯಬೇಕು. ಅಲ್ಲಿ ನಡುವಿನಲ್ಲೊಂದು ಪೆಟ್ಟಿಗೆ, ಅದರೊಳಗೊಂದು ದುಂಬಿ ಇದೆ. ಅದನ್ನು ಕೊಂದರೆ ನಾನು ಸಾಯುತ್ತೇನೆ. ಹಾಗೆ ಕೊಂದರೂ ನನ್ನ ನೆಲಮಾಳಿಗೆಯಲ್ಲಿ ಒಂದು ನಾಗರಬೆತ್ತ ಇದೆ. ಅದರಿಂದ ದೇಹದುದ್ದಕ್ಕು ಮೂರು ಬಾರಿ ಸವರಿದರೆ ನಾನು ಮತ್ತೇ ಜೀವವಾಗುತ್ತೇನೆ, ಎಂದು ಸಮಾಧಾನ ಮಾಡುತ್ತಾನೆ. ಮರುದಿನ ರಾಕ್ಷಸ ಹೊರಟು ಹೋದ ಮೇಲೆ ಮಾಗಿ ಹುಡುಗಿ ಹುಡುಗನಿಗೆ ಎಲ್ಲ ಕಥೆ ಹೇಳುತ್ತಾಳೆ. ಹುಡುಗ ರಾಕ್ಷಸನನ್ನು ಕೊಲ್ಲುತ್ತಾನೆ. ನಾಗರಬೆತ್ತ ಎಳೆದು ಕಲ್ಲಾಗಿದ್ದ ಅಣ್ಣಂದಿರನ್ನು ಮಗಿ ಹುಡುಗಿ ಬದುಕಿಸುತ್ತಾಳೆ. ಎಲ್ಲರೂ ಒಟ್ಟಾಗಿ ಮನೆಗೆ ಬರುತ್ತಾರೆ."[೫೮]

ಗೊಂದಲಿಗರ ಹಲವಾರು ಕಾವ್ಯಗಳಲ್ಲಿ ನಾಯಕನ ಪಾತ್ರ ಅತಿಮಾನುಷ ಶಕ್ತಿಗಳಿಂದಾಗಿ ಚಿತ್ರಣಗೊಳ್ಳುತ್ತಾ ಬಂದಿದೆ. ಇಲ್ಲಿ ಅಂತಹ ಕೆಲವು ಉದಾಹರಣೆಗಳನ್ನು ಮಹಾಕಾವ್ಯಗಳಿಂದ ಆಯ್ದುಕೊಂಡಿರಬಹುದು. ಹನುಮಂತ ಸಮುದ್ರೋಲ್ಲಂಘನ ಮಾಡಿದ, ಸೀತೆ ಅಗ್ನಿ ಪ್ರವೇಶ ಮಾಡಿದಳು. ಹನುಮಂತ ಸಂಜೀವಿನಿ ಗಿಡ ತರಲು ಹೋಗಿ ಬೆಟ್ಟವನ್ನೇ ಎತ್ತಿ ತಂದ, ಕಪಿಸೈನ್ಯ ಸಮುದ್ರಕ್ಕೆ ಸೇತುವೆ ಕಟ್ಟಿತು, ಶ್ರೀಕೃಷ್ಣನು ದ್ರೌಪದಿಯ ವಸ್ತ್ರಾಹರಣ ಪ್ರಸಂಗದಲ್ಲಿ ಆಕೆಯುಟ್ಟ ವಸ್ತ್ರ ಅಕ್ಷಯವಾಗುವಂತೆ ಮಾಡಿದ, ದ್ರೌಪದಿಯು ಅಕ್ಷಯ ಪಾತ್ರೆಯಲ್ಲಿ ಉಳಿದ ಒಂದಗಳ ಅನ್ನದಿಂದ ಸಹಸ್ರಾರು ದುರ್ವಾಸರ ಶಿಷ್ಯರಿಗೆ ಹೊಟ್ಟೆ ತುಂಬುವಂತೆ ಮಾಡಿದಳು, ಭೀಮ ಬಕಾಸುರನಿಗೆಂದು ಸಿದ್ದಪಡಿಸಿದ ಬಂಡಿ ಅನ್ನವನ್ನು ಉಂಡನು. ಶಂಕರರಾಚಾರ್ಯರು

ಬಡವಿಯೊಬ್ಬಳ ಮನೆಯಲ್ಲಿ ಬಂಗಾರದ ನೆಲ್ಲಿಕಾಯಿಯ ಮಳೆ ಸುರಸಿ ಪರಕಾಯ ಪ್ರವೇಶ ಮಾಡಿದರು, ಏಸುವಿಗೆ ಸಮುದ್ರ ದಾರಿ ಬಿಟ್ಟಿತು. ಏಸು ಕುರುಡರಿಗೆ ಕಣ್ಣು ಕೊಟ್ಟ, ಮುಳುಗುವ ನಾವೆಯನ್ನು ತಡೆದ. ಡಾಂಟೆಯು 'ಡಿವೈನ್ ಕಾಮೆಡಿಯಲ್ಲಿ ವರ್ಜಿಲನೊಡನೆ ಸ್ವರ್ಗ ಪಾತಾಳ ಲೋಕಗಳನ್ನು ಸಂಚರಿಸಿದ, ಮಿಲ್ಟನ್‌ನ ಪ್ಯಾರಾಡೈಜ್ ಲಾಸ್ಟದಲ್ಲಿ ಮಾನವ ದೇವರ ಸಂಬಂಧವೇರ್ಪಡುವ, ಸೇಟನ್ನನು ಮಲಗಿ ನಿದ್ರಿಸುತ್ತಿದ್ದ ಹಾವಿನ ಶರೀರದಲ್ಲಿ ಪ್ರವೇಶಿಸುವ ಸಂಗತಿಯಿದೆ. ಕಾಲೆವಾಲಾದಲ್ಲಿ ಮಹಾಜ್ಞಾನಿ ವ್ಹೆನಾಮ್ಹೊಯ್ನಿನನು ಅಲೌಕಿಕ ರೀತಿಯಿಂದ ಜನಿಸಿದ. ಹೀಗೆ ಅತಿಮಾನುಷ ಶಕ್ತಿಯಿಂದ ವಿಶಿಷ್ಟವಾದ ಕಾರ್ಯಗಳು ನಡೆಯುತ್ತವೆ.

### ೪.೨೯ ಪ್ರಾಣಿಪಕ್ಷಿಗಳು

ಗೊಂದಲಿಗರ ಕಥೆಗಳಲ್ಲಿ ಕೇವಲ ವ್ಯಕ್ತಿಗತ ಸಂಬಂಧಗಳನ್ನು ಮಾತ್ರ ನಾವು ನೋಡುವುದಿಲ್ಲ. ಅಲ್ಲಿ ಪ್ರಾಣಿ ಪಕ್ಷಿಗಳು ಕೂಡ ಮಾತನಾಡುತ್ತವೆ. ಸಮಾಜದಲ್ಲಿ ದುಷ್ಟ ವ್ಯಕ್ತಿಗಳ ರೂಪವಾಗಿ ಸರ್ಪವನ್ನು ಕಾಣುತ್ತೇವೆ. ಚಾಡಿ ಹೇಳುವ ವ್ಯಕ್ತಿ ಪ್ರತಿರೂಪವಾಗಿ ಕಾಗೆ, ಹಾಗೂ ಇವೆರಡನ್ನು ಮೆಟ್ಟಿ ನಿಂತು ಪ್ರತಿಭಟಿಸುವ 'ಕಲ್ಲೇಡಿ'ಯನ್ನು ಕಾಣುತ್ತೇವೆ.

'ವಿಘ್ನಾವತಿ' ಕಥೆಯಲ್ಲಿ ಬರುವ ಖಾಸ್‌ಬಾಗಕ್ಕ ಎಂಬ ವನವಂತರಕ್ಕೆ ಕಾವಲುವಾಗಿ ಕರೆ ಕಾಗೆ ಹಾಗೂ ಕರೆ ಸರ್ಪಗಳಿವೆ. 'ಕರೆ' ಬಣ್ಣ ದುಷ್ಟತನದ ಅಪಾಯದ ಭಯಾನಕದ ಸಂಕೇತವಾಗಿ ಕಾಣುತ್ತದೆ. ಯಾರಾದರು ವನವಂತರದಲ್ಲಿ ಮಲಗಿಕೊಂಡರೆ ಆಗ ಕಾಗೆ 'ಕಾವ್ ಕಾವ್ ಕಾವ್' ಅಂತ ಕೂಗಿದಾಗ ಸರ್ಪ ಬಂದು ಕಚ್ಚುತ್ತದೆ. ಹೀಗೆ ಎಷ್ಟೋ ಜೀವಗಳನ್ನು ಬಲಿ ತೆಗೆದುಕೊಂಡಿರುವವು, ಅವೆರಡು ಜೀವದ ಗೆಳೆಯರಾಗಿದ್ದವು. ಅದೇ ರೀತಿಯಲ್ಲಿ ಚಂದ್ರೋಜಿಕುಮಾರನು ಬಂದು ಮರದ ಕೆಳಗೆ ಮಲಗಿಕೊಂಡಾಗ ಕಾಗೆ ಹಾರುತ್ತಾ ಬಂದು ರಾಜನನ್ನು ಕಾಣುತ್ತದೆ. ಆಗ ಅದು ತನ್ನ ಗೆಳೆಯನನ್ನು ಕೂಗುತ್ತದೆ. ಸರ್ಪ ಬಂದು ರಾಜನನ್ನು ಕಚ್ಚಿದ ಕೂಡಲೇ ರಾಜಕುಮಾರ ಸಾಯುತ್ತಾನೆ. ಅದನ್ನು ಕಂಡ ಕಲ್ಲೇಡಿ ಸತ್ತ ಹಾಗೆ ಬಿದ್ದು ಕಾಗೆಯ ಕಣ್ಣಿಗೆ ಬೀಳುತ್ತದೆ. ಕಾಗೆ ಅದರ ಹತ್ತಿರ ಬಂದಾಗ ಗಪ್ಪನ ಗೋಣು ಹಿಡಿದು ಬಿಟ್ಟಿತು. ಕೊಲ್ಲಬೇಡಾ ಅಂತ ಕಾಗಿ ಬೇಡಿಕೊಳ್ಳುತ್ತದೆ. ರಾಜನ ಜೀವ ಬದುಕಿಸು ನಿನ್ನ ಬಿಡ್ತೇನಿ. ಇಲ್ಲಂದ್ರ ನಿನಗೆ ಎರಡು ತುಂಡ ಮಾಡ್ತಿನಿ ಎಂದು ಹೇಳಿತು. ಆಗ ಕಾಗೆ ತನ್ನ ಗೆಳೆಯನಿಗೆ ಕರೆಯಿತು. ಅದು ಬಂದು ನೋಡಿದಾಗ, ಕಾಗೆಯ ಕತ್ತು ಕಲ್ಲೇಡಪ್ಪನ ಕೊಂಡಿಯಲ್ಲಿ ಸಿಕ್ಕಿಕೊಂಡಿತ್ತು. ನೀನು ರಾಜನನ್ನು ಬದುಕಿಸಿದರೆ ನನ್ನ ಬಿಡ್ತಾನಂತೆ ಎಂದು ಕಾಗೆ ಹೇಳಿದಾಗ ಸರ್ಪವು ರಾಜನಿಗೆ ಕಚ್ಚಿದ ಜಾಗದಲ್ಲಿಯೇ ವಿಷ ಹೀರುತ್ತದೆ. ಶಿವ ಶಿವ ಅಂತ ಚಂದ್ರೋಜಿಕುಮಾರ ಎದ್ದುಕುಳಿತ, ಮನುಷ್ಯನಿಗಿರೋ ವಿಷ ಸರ್ಪಕ್ಕೂ ಏರಿಬಿಡ್ತು ಅದು ಅಲ್ಲಿಯೇ ಪ್ರಾಣ ಬಿಡುತ್ತದೆ. ಇತ್ತ ಕಲ್ಲೇಡಿ ಕಾಗಿಯ ಕತ್ತು ಕತ್ತರಿಸಿ ಎರಡು ತುಂಡು ಮಾಡಿ ಅಂತ್ಯಹಾಡಿತು.

ಈ ಕಥೆಯಲ್ಲಿ ಉಪಕಾರ ಮಾಡುವ ಜೀವಿಗೆ ಯಾವಾಗಲು ಒಳ್ಳೆಯದೇ ಆಗುವುದು ಎಂಬ ತಾತ್ಪರ್ಯ ಕಂಡು ಬರುವುದು. ಕಲ್ಲೇಡಿಯ ಪ್ರಾಣ ಉಳಿಸಬೇಕು ಅದನ್ನು ನೀರು ಇದ್ದ ಸ್ಥಳದಲ್ಲಿ ಬಿಡಬೇಕು ಎಂದು ರಾಜ ಯೋಚಿಸುತ್ತಿದ್ದಾಗ ಆಗ ಅದೇ ಕಲ್ಲೇಡಿಯು ತನ್ನ ರಾಜನ ಪ್ರಾಣವನ್ನು ದುಷ್ಟ ಜಂತುಗಳಿಂದ ಉಪಾಯವಾಗಿ ರಕ್ಷಿಸುತ್ತದೆ. ಹೀಗೆ ಗೊಂದಲಿಗರು ತಮ್ಮ ಕಥೆಗಳನ್ನು ಪ್ರಾಣಿ ಪಕ್ಷಿಗಳೊಂದಿಗೆ ಹೆಣೆದುಕೊಂಡು ಮಾನವೀಯ ಮೌಲ್ಯಗಳನ್ನು ತಿಳಿಸಲು ಪ್ರಯತ್ನಿಸುತ್ತಾರೆ. ಅಲೆಮಾರಿಗಳಾದ ಇವರ ಬದುಕು ಸಹ ಪ್ರಾಣಿಗಳ ಜೊತೆಗೆ ಸಾಗಿತ್ತು ಎಂಬುದು ತಿಳಿದು ಬರುತ್ತದೆ.

'ಬಾಳಭಿಕ್ಷುಕ' ಕಥೆಯಲ್ಲಿ ಎರಡು ಗಂಡಭೇರುಂಡ ಪಕ್ಷಿಗಳು ಪದ್ಮಾವತಿಯನ್ನು ಹೊತ್ತುಕೊಂಡು ನಡೆಯುತ್ತಾ ತೊಟ್ಟಿಲಿಗೆ ಬಿಸಿಲಿನಿಂದ ರಕ್ಷಣೆ ನೀಡುತ್ತವೆ. ರಣರಣ ಬಿಸಿಲು ತಾಪಕ್ಕೆ ಕೂಸು ವಿಲಿ ವಿಲಿ ಒದ್ದಾಡುತ್ತಿರುತ್ತದೆ. ಆ ತೊಟ್ಟಿಲಕ್ಕೆ ಹೆಣ್ಣು-ಗಂಡು ಭೇರುಂಡ ಪಕ್ಷಿಗಳು ರೆಕ್ಕೆಗೆ ರೆಕ್ಕೆ ಕಲಿಸಿ ನೆರಳ ಹಿಡಿದು, ಅಲೆಯುತ್ತ  ಕಾಡಿನಲ್ಲಿ ಹೋಗುತ್ತಿರುವಾಗ ಆ ಮಗುವಿಗೆ ಹಸಿವಾಗಿ ಅದು ಬಾಯಿ ಬಾಯಿ ಬಿಡುತ್ತಿರುವಾಗ ಪದ್ಮಾವತಿಯು ತನ್ನ ಬೊಗಸೆಯಲ್ಲಿ ಕೆರೆಯ ನೀರನ್ನು ತಂದು ಒಂದೊಂದೇ ಹನಿ ಬಿಡಹತ್ತಿದಳು. ಪರಮಾತ್ಮನ ಕರುಣೆ ದೊಡ್ಡದು. ನೀರನ್ನು ಹಾಲನ್ನಾಗಿ ಪರಿವರ್ತಿಸಿದನು. ಅಲೆಮಾರಿಗಳಾದ ಗೊಂದಲಿಗರು ತಮ್ಮ ಅಲೆಮಾರಿ ಜೀವನದಲ್ಲಿ  ಸಹಜವಾದ ಕೆರೆ, ಬಾವಿ, ಹಳ್ಳ, ಕೊಳ್ಳದ ನೀರನ್ನು ಜೀವದ ಸೆಲೆಯಾಗಿ ಕುಡಿದು ಬದುಕಿದವರು. ದೇವರ ಕರುಣೆಯನ್ನು ಬಯಸಿದವರು. ಅದಕ್ಕಾಗಿ ಅವರು ನೀರನ್ನು ಹಾಲಾಗಿ ಕಲ್ಪಿಸಿಕೊಳ್ಳುವರು ಅದನ್ನೇ ತಮ್ಮ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ.

'ಬಸವಕುಮಾರ ಲೋಹಿತಕುಮಾರ' ಎಂಬ ಕಥೆಯಲ್ಲಿ ಲೋಹಿತಕುಮಾರ ಅಣ್ಣನನ್ನು ಹುಡುಕುತ್ತ ಕಾಡುದಾರಿಯಲ್ಲಿ ಅಲೆಯುತ್ತಿರುವಾಗ ಶಿವನು ಆದಿಶೇಷನನ್ನು ಬಿಡುತ್ತಾನೆ . ಪಣಿಯನ್ನು ಹರಡಿ ಬುಸಗುಡುತ್ತಾ ಕಾಣಿಸಿಕೊಂಡ ಸರ್ಪಕ್ಕೆ ಬೆದರಿ ಹೌಹಾರಿದನು .ಆದರೆ ಆದಿಶೇಷನು ಅವನೆದುರು ನಿಂತು 'ನಿನಗೆ ಸಹಾಯ ಮಾಡಲು ಬಂದಿದ್ದೆನೆ' ಎಂದು ಹೇಳಿ ನಾಗರತ್ನದ ಹರಳನ್ನು ಅವನ ಮುಂದೆ ಉಗುಳಿ ಮರೆಯಾಯಿತು.  ಇದೇ ಲೋಹಿತ ಮುಂದೆ ಮಂತ್ರಿಯ ಮೋಸದಿಂದ ಸಮುದ್ರದಲ್ಲಿ ಸಿಕ್ಕಿಕೊಂಡಾಗ ಕಪ್ಪೆಗಳನ್ನು ನೆನೆದಾಗ ನೂರಾರು ಕಪ್ಪೆಗಳು ಅವನನ್ನು ಬೆನ್ನಮೇಲೆ ಕುಳ್ಳಿರಿಸಿಕೊಂಡು ದಡವನ್ನು ಮುಟ್ಟಿಸಿದವು.

'ನೀಲಕಂಠ ರೂಪಾವತಿ' ಕಥೆಯಲ್ಲಿ ದೇವಲೋಕದ ಪಕ್ಷಿಗಳು ಹೇಳಿದ ಮಾತನ್ನು ಕೇಳಿ, ನೀಲಕಂಠನು ನೀಲಾವತಿಯನ್ನು ತೊರೆದು ಹಲವು ವರ್ಷಗಳಾಗಿವೆ. ಈ ಸಮಯದಲ್ಲಿ ಅವಳನ್ನು ಕೂಡಿದರೆ 'ಸಕ್ಕರೆ ಮುತ್ತು ಬಿಳ್ಳುವ, ಅತ್ತರೆ ಹವಳ ಬಿಳ್ಳುವ' ಮಗನನ್ನು ಪಡೆಯಬಹುದು ಎಂಬ ಪಕ್ಷಿಗಳ ಮಾತಿನಂತೆ ತನ್ನ ಹೆಂಡತಿಯನ್ನು ಕೂಡಬೇಕೆಂದು ಹಲಬುತ್ತಾನೆ.

ಅದನ್ನು ಕಂಡ ಪಕ್ಷಿಗಳು ಅವನನ್ನು ತಮ್ಮ ಬೆನ್ನ ಮೇಲೆ ಕುಳ್ಳಿರಿಸಿಕೊಂಡು ಸಾವಿರಾರು ಮೈಲುಗಳಾಚೆ ಇರುವ ಅರಮನೆಗೆ ಕರೆತಂದು ಬಿಡುತ್ತವೆ. ಹೀಗೆ ಪ್ರಾಣಿ ಪಕ್ಷಿಗಳು ಸಹಾಯಕರಾಗಿ, ಅತಿಮಾನುಷ ಶಕ್ತಿಗಳಾಗಿ ಕೆಲಸಗಳನ್ನು ಮಾಡಿವೆ.

## ಅಡಿ ಟಿಪ್ಪಣಿಗಳು

೧. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩, ಪುಟ ಸಂ.೫೫.

೨. ಅದೇ ಪುಟ ಸಂ. ೫೬.

೩. ರಮೇಶ, ಸ.ಚಿ. ಜಾನಪದ ಕರ್ನಾಟಕ ಸಂಪುಟ೩ ಸಂಚಿಕೆ೧,೨೦೦೪, ಪುಟಸಂ.೯೦ –೯೧.

೪. ಅದೇ ಪುಟ ಸಂ. ೧೨೭.

೫. ಗಾಯತ್ರಿ ನಾವಡ ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು ೧೯೯೯
ಪುಟ ಸಂ. ೧೪.

೬. ಅದೇ ಪುಟ ಸಂ. ೧೬.

೭. ಅದೇ ಪುಟ ಸಂ. ೧೭.

೮. ಅದೇ ಪುಟ ಸಂ. ೧೯.

೯.ಮುದೇನೂರ ಸಂಗಣ್ಣ ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩ ಪುಟ ಸಂ. ೧೧೨.

೧೦. ಶಿವನಂಜಯ್ಯ, ಡಿ. ಜನಪದ ಕಥನಗಳಲ್ಲಿ ಬಂಡಾಯ, ೨೦೦೭, ಪುಟ ಸಂ. ೧೩೫.

೧೧.ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩,ಪುಟ ಸಂ.೧೯೩

೧೨. ಅದೇ ಪುಟ ಸಂ. ೧೯೬, ೧೯೭.

೧೩. ಅದೇ ಪುಟ ಸಂ. ೩೧.

೧೪. ಅದೇ ಪುಟ ಸಂ. ೧೧, ೧೨.

೧೫. ಅದೇ ಪುಟ ಸಂ. ೩೬.

೧೬. ಅದೇ ಪುಟ ಸಂ. ೬೦.

೧೭. ಅದೇ ಪುಟ ಸಂ. ೧೪೬.

೧೮. ಗಂಗಾಧರ ದೈವಜ್ಞ , ಗೊಂದಲಿಗರು, ೨೦೧೦, ಪುಟ ಸಂ. ೨೬.

೧೯.ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩.ಪುಟಸಂ. ೧೯೬.

೨೦. ಗಾಯತ್ರಿ ನಾವಡ, ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ೧೯೯೯, ಪುಟ ಸಂ. ೨೬.

೨೧. ಅದೇ ಪುಟ ಸಂ. ೪೫.

೨೨. ಅದೇ ಪುಟ ಸಂ. ೬೩.

೨೩. ಅದೇ ಪುಟ ಸಂ.೭೧.

೨೪. ಮುದೇನೂರ ಸಂಗಣ್ಣ,ಗೊಂದಲಿಗರ ದೇವೇಂದ್ರಪ್ಪನವರ ಆಟಗಳು,೧೯೯೩,ಪು ಸಂ.೨೯.

೨೫. ಅದೇ ಪುಟ ಸಂ. ೩೦.

೨೬. ಶಿವನಂಜಯ್ಯ. ಡಿ.ಜನಪದ ಸಾಹಿತ್ಯದಲ್ಲಿ ಬಂಡಾಯದ ನೆಲೆಗಳು, ೨೦೦೭, ಪು ಸಂ.೯೯

೨೭. ಅದೇ ಪುಟ ಸಂ. ೯೯.

೨೮. ಅದೇ ಪುಟ ಸಂ. ೧೦೦.

೨೯. ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರ ಒಂದು ಅಧ್ಯಯನ, ೧೯೮೨, ಪುಟ ಸಂ.೬೪.

೩೦. ರಾಮಚಂದ್ರೇಗೌಡ, ಹಿ.ಶಿ. ಜಾನಪದ ೧೯೯೫, ಪುಟ ಸಂ. ೪೪.

೩೧. ಅದೇ ಪುಟ ಸಂ. ೪೪, ೪೫.

೩೨. ಅದೇ ಪುಟ ಸಂ. ೬೩.

೩೩. ಸಂಧ್ಯಾರೆಡ್ಡಿ, ಕೆ. ಆರ್. ಮಹಿಳಾ ಜನಪದ, ೨೦೦೩, ಪುಟ ಸಂ. ೪೭, ೪೮.

೩೪. ಶಾಂತಾ ಇಮ್ರಾಪೂರ, ಮಹಿಳೆ, ಸಾಹಿತ್ಯ, ಸಂಸ್ಕೃತಿ, ೨೦೦೧, ಪುಟ ಸಂ. ೮೭.

೩೫. ಸಂಧ್ಯಾರೆಡ್ಡಿ, ಕೆ. ಆರ್. ಮಹಿಳಾ ಜನಪದ, ೨೦೦೩, ಪುಟ ಸಂ. ೫೪.

೩೬. ಶಾಂತಾ ಇಮ್ರಾಪೂರ, ಮಹಿಳೆ, ಸಾಹಿತ್ಯ, ಸಂಸ್ಕೃತಿ, ೨೦೦೧, ಪುಟ ಸಂ. ೮೧, ೮೨.

೩೭. ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರ ಒಂದು ಅಧ್ಯಯನ, ೧೯೮೨, ಪುಟ ಸಂ.೭೮.

೩೮. ಅದೇ ಪುಟ ಸಂ. ೫೧.

೩೯. ಶಾಂತಾ ಇಮ್ರಾಪೂರ, ಮಹಿಳೆ, ಸಾಹಿತ್ಯ, ಸಂಸ್ಕೃತಿ, ೨೦೦೧, ಪುಟ ಸಂ. ೮೩.

೪೦.ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು.೧೯೯೩,ಪುಟ ಸಂ.೨೯೨.

೪೧. ಶಂಕರನಾರಾಯಣ. ತೀ.ನಂ ಜನಪದ ಸಾಹಿತ್ಯದ ಪ್ರಕಾರಗಳು, (ಸಂ) ಪುಟ ಸಂ. ೨೪.

೪೨. ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩,ಪುಟ ಸಂ.೨೮೨.

೪೩. ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರು : ಒಂದು ಅಧ್ಯಯನ, ೧೯೮೨,ಪುಟ ಸಂ. ೭೨.

೪೪. ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು.೧೯೯೩, ಪುಟ ಸಂ.೧೨೨.

೪೫. ಅದೇ ಪುಟ ಸಂ. ೪೬

೪೬. ಅದೇ ಪುಟ ಸಂ.೨೩೧.

೪೭. ಅದೇ ಪುಟ ಸಂ.೪೩.

೪೮. ಶಾಂತಪ್ಪ ಗುಡಕರ ಕುಂದಗೋಳ ಗ್ರಾಮದ ಕಲಾವಿದರಿಂದ ಸಂಗ್ರಹ.

೪೯. ಶಿವರುದ್ರಪ್ಪ. ಜಿ.ಎಸ್ ' ಸಮಗ್ರ ಗದ್ಯ ' ಸಂಪುಟ ಸಂ. ೧, ಪುಟ ಸಂ. ೨೮೩.

೫೦. ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು. ೧೯೯೩, ಪುಟ ಸಂ.೨೮೪.

೫೧. ಅದೇ ಪುಟ ಸಂ. ೩೫೩.

೫೨. ಅದೇ ಪುಟ ಸಂ. ೧೬೧.

೫೩. ಅದೇ ಪುಟ ಸಂ. ೧೬೨.

೫೪. ಅದೇ ಪುಟ ಸಂ. ೨೫೭.

೫೫. ಅದೇ ಪುಟ ಸಂ. ೨೫೯.

೫೬.ಕ್ಯಾತನಹಳ್ಳಿ ರಾಮಣ್ಣ. ಗೊಂದಲಿಗರು: ಒಂದು ಅಧ್ಯಯನ, ೧೯೮೨, ಪುಟ ಸಂ.೭೯.

೫೭. ದ್ಯಾಮಣ್ಣ ಗುಡಕರ, ಕುಂದಗೋಳ ಗ್ರಾಮದ ಕಲಾವಿದರಿಂದ ಸಂಗ್ರಹ.

೫೮.ಗಾಯತ್ರಿ ನಾವಡ, ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ೧೯೯೯, ಪುಟ ಸಂ.೭೦

## ಅಧ್ಯಾಯ ೫

# ಗೊಂದಲಿಗರ ಕಥನ ಶೈಲಿ

### ೫.೧ ಪೀಠಿಕೆ

ಗೊಂದಲಿಗರು ಕಾಪಾಡಿಕೊಂಡು ಬಂದ ಹಲವಾರು ಅನುಭಾವ ಪದಗಳು ಅವರ ಕಥನ ಶೈಲಿಯ ವೈಶಿಷ್ಟತೆಯನ್ನು ಹೆಚ್ಚಿಸಿವೆ. ಮನುಕುಲದ ರೀತಿ-ನೀತಿ, ತತ್ವ, ತಾತ್ವರತೆ, ಪ್ರಾಮಾಣಿಕತೆ, ಸಂಸ್ಕೃತಿ, ಸಂಪ್ರದಾಯ ಮುಂತಾದ ಹಲವಾರು ವಿಷಯಗಳನ್ನು ಒಳಗೊಂಡ ಅವರ ಕಥನಗಳು ಜನಪ್ರೀಯತೆ ಗಳಿಸಿವೆ. ಗದ್ಯ ಪದ್ಯ ಮಿಶ್ರಿತ ಇವರ ಕಥನ ಶೈಲಿಯಲ್ಲಿ ಕಥೆಯ ಜೊತೆ ನಡುನಡುವೆ ತಾತ್ವಿಕ ವಚನ, ಅನುಭಾವ, ಹಾಗೂ ಜಾನಪದ ಸಾಹಿತ್ಯದ ವಿವಿಧ ಮಜಲುಗಳನ್ನು ನೋಡಬಹುದು.

ಮಾನವ ತನ್ನ ಬದುಕಿನಲ್ಲಿ ಕಂಡು ಕೇಳಿದ, ಅನುಭವಿಸಿದ, ಕಲ್ಪಿಸಿಕೊಂಡ ಅನೇಕ ವಿಚಾರಗಳನ್ನು ಇನ್ನೊಬ್ಬರಿಗೆ ಮನಮುಟ್ಟುವಂತೆ ಗೊಂದಲಿಗರು ತಮ್ಮ ಕಥನಗಳ ಮೂಲಕ ಜನರಿಗೆ ತಿಳಿಸುವ ಕಲೆ ಅದ್ಭುತವಾದದ್ದು, ಪರಂಪರಾನುಗತವಾಗಿ ಸಂಪ್ರದಾಯ ಬದ್ಧವಾಗಿ ಬೆಳೆಸಿಕೊಂಡು ಬಂದ ಗೊಂದಲಿಗರ ಕಥನಗಳನ್ನು ಗೊಂದಲಿಗರ ಕಥನ ಸಾಹಿತ್ಯ ಎಂದೇ ಹೇಳಬಹುದು. ಸಾಹಿತ್ಯ ಎಂದರೆ ಒಂದು ಪರಂಪರೆಯ ಸಂಸ್ಕೃತಿ ಕುರುಹು ಎಂದರ್ಥ.

ಹಾಡುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡವರನ್ನು ವೃತ್ತಿಗಾಯಕರು ಎಂದು ಗುರುತಿಸಲಾಗುತ್ತದೆ. ನಿರ್ದಿಷ್ಟ ದೈವವೊಂದಕ್ಕೆ ಅರ್ಪಿಸಿಕೊಂಡು ಆ ದೈವದ ನಿಷ್ಠಾವಂತ ಭಕ್ತರಾಗಿ ಆ ದೈವಕ್ಕೆ ಸಾಪ್ರದಾಯಿಕವಾಗಿ ನಡೆದುಕೊಳ್ಳುವುದನ್ನು ಅನೇಕ ಅಲೆಮಾರಿ ವೃತ್ತಿ ಕಲಾವಿದರಲ್ಲಿ ಕಾಣುತ್ತೇವೆ. ತಮ್ಮ ಆರಾಧ್ಯ ದೈವವೇ ಅವರ ಹಾಡುವಿಕೆಯ ಪ್ರಧಾನ ವಸ್ತು. ದೈವದ ಹುಟ್ಟಿನಿಂದ ಅವರ ಕಥೆ ಪ್ರಾರಂಭವಾಗುತ್ತದೆ. ಹುಟ್ಟು, ಬಾಲ್ಯ ಯೌವನ ವೃದ್ಧಾಪ್ಯಗಳಲ್ಲದೇ, ದೈವದ ಜೀವಿತಾವಧಿಯಲ್ಲಿ ಘಟಿಸುವ ಪವಾಡಗಳು, ಮಹಿಮೆಗಳು ಹಲವಾರು ದೀರ್ಘ ವರ್ಣನೆಯಲ್ಲಿ ಮೂಡಿಬಂದು ಕಾವ್ಯ ಅತ್ಯಂತ ವಿಸ್ತಾರವಾಗಿ ಮಹಾಕಾವ್ಯ ಪಟ್ಟಕ್ಕೆ ಏರುವುದುಂಟು.

ಗೊಂದಲಿಗರ ಕಥನ ಬೆಳಗಿನವರೆಗೆ ನಡೆಯುವಂತಹದ್ದು. ಒಂದು ಕಥೆಯ ವಿಷಯ ಆಯ್ದುಕೊಂಡು ಅದನ್ನು ಹಿಗ್ಗಿಸುವ ಮತ್ತು ಕುಗ್ಗಿಸುವ ಸಾಮರ್ಥ್ಯವನ್ನು ಗೊಂದಲಿಗರು ಹೊಂದಿದ್ದಾರೆ. ಕಥೆಯನ್ನು ವಿಸ್ತಾರಗೊಳಿಸುವುದರ ಜೊತೆಗೆ ನಡುನಡುವೆ ಹಲವಾರು ಉಪಕತೆಗಳನ್ನು ಹೇಳುತ್ತಾರೆ. ಅವರ ಕಥನದ ನಡುವೆ ವಿಶಿಷ್ಟವಾದ ಶೈಲಿ ಕಂಡು ಬರುತ್ತದೆ. ಹಾಗೆಯೇ ಗೊಂದಲಿಗರು ಕಥನಗಳನ್ನು ನಿರೂಪಿಸುವಾಗ ಅವರ ಹಾವ ಭಾವಗಳು, ಕುಣಿತಗಳು, ಸಂಭಾಷಣೆ ಅಲ್ಲಿ ಒಂದು ರೀತಿಯ ನಾಟಕೀಯತೆಯ ರೂಪ ಪಡೆಯುತ್ತದೆ. ಗೊಂದಲಿಗರು ತಮ್ಮ ಕಥೆಯ ಜೊತೆಗೆ ಹಲವಾರು ಪೌರಾಣಿಕ ಉಪಕತೆಗಳನ್ನು, ನೀತಿಪದಗಳನ್ನು, ಜಾನಪದ ಪದ್ಯಗಳನ್ನು ಹಾಗೂ ಶಿವಶರಣರ ವಚನಗಳನ್ನು ಹೇಳುತ್ತಾರೆ. ಅಷ್ಟೇ ಅಲ್ಲದೇ ಶರೀಫರ ಹಾಗೂ ದಾಸರ ಪದಗಳನ್ನು ಕೆಲವು ಸಾರಿ ಸರ್ವಜ್ಞನ ತ್ರಿಪದಿಗಳನ್ನು ಬಳಸುತ್ತಾರೆ.

ಗದ್ಯ ಪದ್ಯ ಮಿಶ್ರಿತ ಇವರ ಕಥನ ಶೈಲಿ ವಿಶಿಷ್ಟವಾದದ್ದು. ಇದೇ ಶೈಲಿಯನ್ನು ಕರಪಾಲ ಮೇಳದ ಕಥೆಗಳಲ್ಲಿ ಕಾಣುತ್ತೇವೆ. ಇವು ಶುದ್ಧ ಜನಪದ ಮೂಲದ ಕಥೆಗಳಾಗಿವೆ. ನೃತ್ಯ, ಸಂಗೀತ ಹಾಗೂ ಸಾಹಿತ್ಯದ ಸಮ್ಮಿಲನವನ್ನು ಕರಪಾಲ ಮೇಳದಲ್ಲಿ ಕಾಣುತ್ತೇವೆ. ಸಾಮಾನ್ಯವಾಗಿ ಗೊಂದಲಿಗರು ಸೃಷ್ಟಿಸಿರುವ ಕಥನಗಳು ಅವರ ಬದುಕಿನ ಹಿನ್ನಲೆಯಲ್ಲಿಯೇ ಮೂಡಿಬಂದವುಗಳಾಗಿವೆ. ಕಥೆ ಸೃಷ್ಟಿಸುವ ಮತ್ತು ಹೇಳುವ ಪರಂಪರೆ ಪ್ರಾಚೀನ ಕಾಲದ್ದಾಗಿದ್ದರೂ ಕಥೆಗಳಲ್ಲಿ ವೈವಿಧ್ಯತೆಯನ್ನು ಹುಡುಕುತ್ತಾ ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ಉಳಿಸುವಲ್ಲಿ ಈ ವೃತ್ತಿಗಾಯಕರು ಪ್ರಮುಖರಾಗಿದ್ದಾರೆ.

### ೫.೨ ಪದ್ಯಸಾಹಿತ್ಯ

ಬದುಕಿನ ಅನುಭವ ಮತ್ತು ಅನುಭಾವಗಳಾಗಿ ಸಾಹಿತ್ಯದ ರೂಪದಲ್ಲಿ ಹೊರ ಹೊಮ್ಮುತ್ತದೆ. ಸಾಹಿತ್ಯವು ಬದುಕಿನ ಹಲವಾರು ಮುಖಗಳನ್ನು ಪ್ರತಿಬಿಂಬಿಸುವ ಕನ್ನಡಿಯಾಗಿದೆ. ಜನಪದ ಸಾಹಿತ್ಯದ ಹಿನ್ನಲೆಯಲ್ಲಿ ಈ ಮಾತುಗಳು ಸತ್ಯವಾಗಿದೆ. ಏಕೆಂದರೆ ಜನಪದ ಸಾಹಿತ್ಯದ ಸೌಂದರ್ಯವಿರುವುದು ಅದರ ಸರಳತೆ ಮತ್ತು ಸಹಜತೆಗಳಲ್ಲಿ. ಅನುಭವ ತುಂಬಿ ಬಂದಾಗ ಆಡುವ ಮಾತೆಲ್ಲವೂ ಕಾವ್ಯವಾಗುತ್ತದೆಂಬುದಕ್ಕೆ ಜನಪದ ಗೀತೆಗಳು ಒಳ್ಳೆಯ ಉದಾಹರಣೆ. 'ಜಾನಪದ ಕವಿಗಳು ಕೊಡುವ ನುಡಿ ಚಿತ್ರಗಳು, ವರ್ಣನೆಗಳು ಮಾತಿನ ಮೋಡಿ, ಅಲಂಕಾರಗಳ ಗಾರುಡಿ, ಅಚ್ಚಳಿಯದ ಪರಿಣಾಮವನ್ನುಂಟು ಮಾಡುವಂತಹವು ಅವು ಕೃತಕವಾಗಿ ತಂದು ಕಟ್ಟಿದುದಲ್ಲ ಜೀವನದ ಅನಂತ ಮುಖಗಳ ತುಂಬ ಅನುಭವದಿಂದ ಮೂಡಿಬಂದವುಗಳು'[1] ಕನ್ನಡ ನಾಡಿನ ನೆಲೆಗಟ್ಟಿನಲ್ಲಿ ಮಣ್ಣಿನ ಕಂಪು ಇದೆ. ಜನಪದೀಯ ಸೊಗಸು ಇದೆ. ಸಾಮಾನ್ಯವಾಗಿ ನಾಡಿನ ಹೆಣ್ಣು ಮಕ್ಕಳು ಬೆಳಗಾದ ಕೂಡಲೇ ಏಳುತ್ತಲೇ ಹಾಡು ರಂಗು

ಅವಳ ನಾಲಿಗೆ ಮೇಲೆ ಸಹಜವಾಗಿಯೇ ಮೂಡಿ ಬರುತ್ತವೆ.

ಏಳುತಲಿ ಯಾರ‍್ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆವಂತ। ಭೂಮಿತಾಯಿನ
ಎದ್ದೊಂದುಗಳಿಗೆ ನೆನೆದೇನ॥

ಬೆಳಗಾಗುತ್ತಲೆ ಹಳ್ಳಿಯ ಹೆಣ್ಣು ಮಕ್ಕಳು ತನಗೆ ಆಶ್ರಯ ನೀಡಿದ ಭೂಮಿತಾಯಿಯನ್ನು ನೆನೆಯುತ್ತಾರೆ. ಹಳ್ಳಿಯ ಹೆಣ್ಣು ಮಕ್ಕಳ ಹಾಡುಗಳಲ್ಲಿ ನಾಡಿನ ಸೊಗಸು ಅದರ ವೈಭವತೆಯನ್ನು ಕಾಣಬಹುದು. ಮೌಖಿಕ ಸಂಪ್ರದಾಯದಲ್ಲಿ ಬೆಳೆದು ಬಂದ ಬದುಕಿನ ರೀತಿ ನೀತಿಗಳನ್ನು ಸಂದರ್ಭಕ್ಕನುಸಾರವಾಗಿ ತಿಳಿಸುವ ಅನೇಕ ಜನಪದ ಹಾಡು, ಕಥೆಗಳು ಸದಾ ಜೀವಂತಿಕೆಯನ್ನು ಉಳಿಸಿಕೊಂಡಿವೆ ಎಂದು ಹೇಳಬಹುದು. ಗೊಂದಲ ಹಾಕುವ ಗೊಂದಲಿಗರು ಗೊಂದಲ ಹಾಕುವುದು ನಮ್ಮ ಧರ್ಮ ಹಾಗೂ ಪ್ರಮುಖ ಕಾಯಕಗಳಲ್ಲಿ ಒಂದು ಎಂದು ಭಾವಿಸಿಕೊಂಡಿದ್ದಾರೆ. ಗೊಂದಲಿಗರಲ್ಲಿಯ ಕಲೆ, ಸಾಹಿತ್ಯ ಸಂಸ್ಕೃತಿಯನ್ನು ಗಮನಿಸಿದಂತೆ ಅವರು ಕನ್ನಡ ಜನಪದ ವೃತ್ತಿಗಾಯಕರಲ್ಲಿ ಶ್ರೇಷ್ಠರು ಎಂದು ಹೇಳಬಹುದು. ಇವರ ಸಾಹಿತ್ಯವು ಜನಜೀವನದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಯಲು ಹಾಗೂ ಸಮಾಜಕ್ಕೆ ಮಾದರಿಯಾದ ನೀತಿಗಳನ್ನು ತಿಳಿಯಲು ಮಹತ್ವದ ದಾಖಲೆಗಳಾಗಿವೆ. ಗೊಂದಲಿಗರು ತಮ್ಮ ಬದುಕಿನ ಅನುಭವಗಳನ್ನು ಹಾಡಿನ ಮೂಲಕ ವ್ಯಕ್ತಪಡಿಸುವುದುಂಟು. ಇವರು ತಮ್ಮ ಬದುಕಿನಲ್ಲಿ ನ್ಯಾಯ, ನೀತಿ, ಧರ್ಮವನ್ನು ಅಳವಡಿಸಿಕೊಂಡಿರುವುದು ಕಂಡು ಬರುತ್ತದೆ. ಗೊಂದಲಿಗರ ಸಾಹಿತ್ಯವನ್ನು ಗೊಂದಲದ ಪ್ರಸಂಗದ ಹಾಡುಗಳು ಪರಂಪರೆಯ ಹಾಡುಗಳು ಹಾಗೂ ಭಿಕ್ಷಾಟನೆಯ ಪ್ರಸಂಗದ ಹಾಡುಗಳು ಎಂದು ವಿಂಗಡಿಸಿಕೊಳ್ಳಬಹುದು. ಗೊಂದಲಿಗರ ಕಥನಗಳಲ್ಲಿ ಮುಖ್ಯವಾಗಿ ದೇವಿಚರಿತ್ರೆ, ಮಹಿಮೆ, ಸ್ತುತಿ, ಮಂಗಳಾರುತಿ ಕಂಡು ಬರುತ್ತವೆ. ಇಲ್ಲಿ ಅಂಬಾಭವಾನಿಯ ಭಕ್ತಿಯ ಗೀತೆಗಳಿಗೆ ಪ್ರಾಧಾನ್ಯತೆ ಇದ್ದರೂ ಕಥೆಯ ನಡುವೆ ಮನರಂಜನೆಗಾಗಿ ಹಾಗೂ ಲೌಕಿಕ ಹಾಗೂ ನೀತಿ ಬೋಧಕ ಕಥೆಗಳನ್ನು ಹೇಳುವುದು ಸಾಮಾನ್ಯವಾಗಿ ಕಂಡು ಬರುತ್ತದೆ. ಗೊಂದಲಿಗರ ಹಾಡುಗಳ ಮೇಲೆ ಅನೇಕ ಶಿವ ಶರಣರ ಹಾಗೂ ದಾಸರ ಪ್ರಭಾವ ಹೇರಳವಾಗಿದೆ. ಕರ್ನಾಟಕದ ಅನುಭಾವ ಸಾಹಿತ್ಯವೇ ಗೊಂದಲಿಗರ ಹಾಡುಗಳಿಗೆ ವ್ಯಾಪಕ ಪ್ರೇರಣೆ ನೀಡಿದೆ ಎಂದು ಹೇಳಬಹುದು.

ಗೊಂದಲಿಗರು ಗೊಂದಲದ ಸಂದರ್ಭದಲ್ಲಿ ನಾವು ಶರಣರ ಪದಗಳನ್ನು ಹೇಳತೇವ್ರಿ ಮತ್ತು ಪ್ರೇಕ್ಷಕರ ಬೇಡಿಕೆಗಳಂತೆ ಕಥೆ ಹಾಡುಗಳನ್ನು ಹೇಳತೀವ್ರಿ ಎಂಬ ಮಾಹಿತಿಯನ್ನು ನೀಡುತ್ತಾರೆ. ಮಾತೃಪ್ರಧಾನ ಕುಟುಂಬವನ್ನು ಅನುಸರಿಸುತ್ತ ಬಂದಿರುವ ಗೊಂದಲಿಗರು ತಮ್ಮ ಧಾರ್ಮಿಕ ವೃತ್ತಿಯಲ್ಲಿ ಮಾತೃ ದೇವತೆಗಳನ್ನೇ ಪ್ರಧಾನ ಆರಾಧ್ಯ ದೈವಗಳನ್ನಾಗಿ

ಮಾಡಿಕೊಂಡಿದ್ದಾರೆ. ಇವರ ಹಾಡುಗಳಲ್ಲಿ ಆದಿಶಕ್ತಿ, ಅಂಬಾಭವಾನಿ ಕುರಿತು ಹೆಚ್ಚಿನ ಪ್ರಾಧಾನ್ಯತೆ ನೀಡಿರುವುದನ್ನು ಕಾಣಬಹುದು. ಇದರಿಂದ ಗೊಂದಲಿಗರ ಕೌಟುಂಬಿಕ ಜೀವನದಲ್ಲಿ ಸ್ತ್ರೀಯರಿಗೆ ವಿಶೇಷವಾದ ಮನ್ನಣೆ ಹಾಗೂ ಸ್ಥಾನ ಮಾನಗಳಿರುವುದು ಹಾಗೂ ಅವರನ್ನು ಗೌರವಿಸುವುದು ಕಂಡು ಬರುತ್ತದೆ. ಮುಖ್ಯವಾಗಿ ಗೊಂದಲಿಗರು ಆದಿಶಕ್ತಿಯ ಹಾಡುಗಳನ್ನು ಪ್ರಧಾನವಾಗಿ ಹಾಡುತ್ತಿದ್ದರೂ ಇತರ ಹಾಡುಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸುತ್ತಾರೆ. ಡಾ.ವ್ಹಿ.ಎಸ್.ಬಡಿಗೇರ ಅವರು ತಮ್ಮ "ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳ ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಗ್ರಂಥದಲ್ಲಿ ಗೊಂದಲಿಗರು ಹೇಳುವ ಪದಗಳನ್ನು ಈ ಕೆಳಗಿನಂತೆ ವಿಂಗಡಿಸಿದ್ದಾರೆ.

೧. ಸ್ತುತಿ ಪದಗಳು ೨.ಗೊಂದಲದ ಪದಗಳು ೩.ತತ್ವಪದಗಳು ೪.ಮನರಂಜನ ಪದಗಳು.

ಗೊಂದಲಿಗರ ಸಾಹಿತ್ಯ ಕುರಿತು ಅಧ್ಯಯನಕ್ಕಾಗಿ ಕ್ಷೇತ್ರ ಕಾರ್ಯಕೈಕೊಂಡು ಅವರ ಸಾಹಿತ್ಯವನ್ನು ಪರಿಶೀಲನೆ ಮಾಡಿದಾಗ ಅವರಲ್ಲಿ ಪ್ರಧಾನವಾಗಿ ಕಥೆ ಹೇಳುವುದು ಅವರ ಮುಖ್ಯ ಉದ್ದೇಶವಾಗಿರುತ್ತದೆ. ಗೊಂದಲ ಪೂಜೆಯ ಪ್ರತಿಷ್ಠಾಪನೆಯ ನಂತರ ಮೊದಲು ಆರಾಧನೆ ಪ್ರಾರಂಭಿಸುತ್ತಾರೆ. ಇಲ್ಲಿಂದಲೇ ಅವರು ದೇವಿಯ ಸ್ತುತಿ ಪದ್ಯಗಳನ್ನು ಹೇಳಲು ಪ್ರಾರಂಭಿಸುತ್ತಾರೆ.

ಗೊಂದಲಿಗರು ಹಾಡುವ ಕಥನಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಳ್ಳಬಹುದು.

**ಪದ್ಯಸಾಹಿತ್ಯ**

| **ಗೊಂದಲ ಪದಗಳು** | **ತತ್ವ ಪದಗಳು ನೀತಿ ಪದಗಳು** | **ಮನರಂಜನಾ ಪದಗಳು** |
|---|---|---|
| ೧) ಸ್ತುತಿಪದಗಳು | ೧) ಅನುಭಾವ ತತ್ವ ಪದಗಳು. | ೧) ಆಧ್ಯಾತ್ಮಿಕ ನೀತಿ ಪದಗಳು. |
| ೨) ಹರಕೆ ಪದಗಳು. | ೨) ಶರಣರ ಪದಗಳು. | ೨) ಗರತಿಯ ನೀತಿ ಪದಗಳು. |
| ೩) ಸೊಲ್ಲುಗಳು. | ೩) ದಾಸರ ಪದಗಳು. | |
| | ೪) ಸರ್ವಜ್ಞ ವಚನಗಳು. | |
| | ೫) ಶರೀಫರ ಕೀರ್ತನೆಗಳು | |

## ೫.೩. ಗೊಂದಲದ ಪದಗಳು.

ಸಂಪ್ರದಾಯವಾದಿಗಳಾದ ಗೊಂದಲಿಗರು ಗೊಂದಲ ಹಾಕುವ ಪ್ರಮುಖ ಧಾರ್ಮಿಕ ಕಾರ್ಯವನ್ನೇ ಒಂದು ಕಾಲದಲ್ಲಿ ತಮ್ಮ ಸಮುದಾಯದ ವೃತ್ತಿಯನ್ನಾಗಿ ಮಾಡಿಕೊಂಡಿದ್ದರು. ಗೊಂದಲಿಗರು ಹಾಕುವ ಗೊಂದಲಗಳನ್ನು ಬಯಲು ಗೊಂದಲ, ಗುಡಿಗೊಂದಲ, ಮದುವೆ ಗೊಂದಲ, ಹರಕೆಯ ಗೊಂದಲವೆಂದು ವಿಭಾಗಿಸಿಕೊಳ್ಳಲಾಗಿದೆ. ಪ್ರತಿ ಗೊಂದಲದ ಉದ್ದೇಶ

ಈ ಕೆಳಗಿನಂತಿದೆ. ದೇವಿಯ ಆರಾಧನೆ, ಧರ್ಮಾಚರಣೆ, ನೀತಿಭೋಧನೆ, ತತ್ವಬೋಧನೆ, ಸತ್ಯ, ಅಸತ್ಯದ ತಿಳುವಳಿಕೆ, ದುಷ್ಟ ಶಿಕ್ಷೆ, ಶಿಷ್ಟರಕ್ಷಣೆ, ಪತಿವೃತಾ ಧರ್ಮ, ಸಾಮಾಜಿಕ ಕಳಕಳಿ, ಮನರಂಜನೆ ಮುಂತಾದ ಅಂಶಗಳು ಇವರ ಗೊಂದಲದಲ್ಲಿ ಕಾಣಬಹುದು. ಗೊಂದಲಿಗರ ಇಡಿಯಾದ ಸಾಹಿತ್ಯ ಕ್ಷೇತ್ರವನ್ನು ಹಿಡಿದಿಡುವುದು ತುಂಬಾ ಕಷ್ಟ. ಗೊಂದಲ ಹಾಕುವ ಪ್ರತಿಯೊಬ್ಬ ಕಲಾವಿದ ಒಂದೊಂದು ಕ್ಷೇತ್ರದಲ್ಲಿ ಪರಿಣತಿಯನ್ನು ಹೊಂದಿರುತ್ತಾರೆ. ಅವರ ಪರಿಣತಿ ಕ್ಷೇತ್ರಗಳನ್ನೇ ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಲಿಕ್ಕೆ ಅವಕಾಶಗಳಿವೆ. ಗೊಂದಲಿಗರು ಹಾಕುವ ಗೊಂದಲದಲ್ಲಿ ಅಭಿವ್ಯಕ್ತಗೊಳ್ಳುವ ಅವರ ಪದ್ಯ ಸಾಹಿತ್ಯವನ್ನು ಈ ಕೆಳಗಿನಂತೆ ವಿಭಾಗಿಸಿಕೊಳ್ಳಲಾಗಿದೆ.

೧. ಸ್ತುತಿಪದ್ಯಗಳು.

೨. ಹರಕೆ ಪದ್ಯಗಳು

೩. ಸೊಲ್ಲುಗಳು.

**೫.೩.೧ ಸ್ತುತಿ ಪದ್ಯಗಳು**

ಗೊಂದಲ ಕಾರ್ಯದಲ್ಲಿ ಪ್ರಾರಂಭದಲ್ಲಿ ದೇವಿಯ ಅಂದರೆ ಕಳಸ ಪ್ರತಿಷ್ಠಾಪಿಸಿ ವಾದ್ಯಗಳಿಂದ ಸಂಗೀತ ನುಡಿಸುವರು. ಮುಮ್ಮೇಳದವರು ತದಿಮ್ ತದಿಮ್ ದಿಮ್ ದಿಮ್, ಎಂದೂ, ತಾಳದವನು ಚಳ್ ಚಳ್ ಎಂದು ತಾಳ ಬಾರಿಸಲು ಪ್ರಾರಂಭಿಸುವನು. ಇವರ ಜೊತೆಗೆ ಹಿಮ್ಮೇಳದವನು 'ತುಂ ತುಂ ತುಂ ತುಂ' ಎಂದು ತುಂತುಣಿ ನಾದವನ್ನು ಸಂಬಾಳದ ತಾಳದ ನಾದಕ್ಕೆ ಸ್ಪಂದಿಸುವನು. ಒಮ್ಮೆ ಈ ವಾದ್ಯಗಳ ನಾದವು ಜೋರಾಗಿ ಶಬ್ಧ ಮಾಡಲು ಪ್ರಾರಂಭಿಸಿದರೆ, ಅಲ್ಲಿ ನೆರೆದ ಪ್ರೇಕ್ಷಕರನ್ನು ಮಂತ್ರ ಮುಗ್ಧರನ್ನಾಗಿ ಮಾಡಿ, ತಮ್ಮ ಕಡೆಗೆ ಗಮನ ಸೆಳೆಯುತ್ತಾರೆ. ಒಂದೇ ನಿಮಿಷದಲ್ಲಿ ಅಲ್ಲಿ ಸೇರಿರುವ ಎಲ್ಲ ಜನರ ಮನಸ್ಸನ್ನು ಸೆರೆಹಿಡಿದು ದೇವಿಯ ಆರಾಧನೆಯಲ್ಲಿ ಭಯ ಭಕ್ತಿ ಮೂಡುವಂತೆ ಮಾಡುತ್ತಾರೆ. ಮೊದಲಿಗೆ ದೇವಿಯ ಸ್ತೋತ್ರ, ಜಪ, ತಪಗಳನ್ನು ಮಾಡುತ್ತಾ, ದೇವಿಯನ್ನು ಆಹ್ವಾನಿಸುವ ಕಾರ್ಯ ನಡೆಯುತ್ತದೆ. ತುಂತುಣಿ ವಾದ್ಯವನ್ನು ಹಿಡಿದವನು ಹಾಡಿನ ಸಾಲು ಮುಗಿದ ಬಳಿಕ 'ಹರ ಹರ ಮಹಾದೇವಿ' ಎಂದು ಹಾಡುವನು.

**ಸ್ತುತಿ ಪದ್ಯ–**

"ಮಾಯಾ ಜನನಿ  
ಅಂಬಾ ಜಗದಂಬಿ  
ವರವ ಮಾಡ ತಾಯಿ  
ವರವ ಕೊಡ ತಾಯಿಶಂಬುಗ ಮಾಡುವೆ

ತಾಯವ್ವ ನಾನಿನ್ನ ಜ್ಞಾನದಲಿ
ಜಗದಂಬ ನಾನಿನ್ನ ಧ್ಯಾನದಲಿ
ಕತದಿಂದ ಪಾಲಿಸ ತಾಯಿ
ದಯ ಮಾಡ ದೇವಿ"[೨]

ಗೊಂದಲಿಗರು ಹೇಳುವ ಸ್ತುತಿ ಪದ್ಯಗಳು ಪ್ರಾದೇಶಿಕವಾಗಿ ಭಿನ್ನಭಿನ್ನವಾಗಿರುವುದು ಕಂಡು ಬರುತ್ತದೆ. ಈ ಸ್ತುತಿ ಪದ್ಯಗಳನ್ನು ಮಾತೃ ದೇವತೆಗಳ ಸ್ತುತಿ ಪದಗಳು ಹಾಗೂ ಪಿತೃ ದೇವತೆಗಳ ಸ್ತುತಿ ಪದಗಳು ಎಂದು ವಿಂಗಡಿಸಿಕೊಳ್ಳಲಾಗಿದೆ.

**೧ ಮಾತೃ ದೇವತೆಗಳ ಸ್ತುತಿ ಪದ್ಯಗಳು:**

ಮಾತೃ ದೇವತೆಗಳ ಮೂಲ ಸ್ವರೂಪಿಣಿ ಆದಿಶಕ್ತಿ ಎಂಬುದು ಗೊಂದಲಿಗರ ಕಲ್ಪನೆ, ಅವಳು ವಿವಿಧ ಅವತಾರಗಳ ಗಣಿಯಾಗಿದ್ದಾಳೆ. ದುಷ್ಟ ಸಂಹಾರಿಣಿ ಶಿಷ್ಟ ಪರಿಪಾಲಕಳು ಇವಳಾಗಿದ್ದಾಳೆ. ದೇವಿ ತುಳಜಾಪುರದ ಅಂಬಾಭವಾನಿಯ ಸ್ತುತಿ ಪದ್ಯದಲ್ಲಿ ಆ ದೇವಿಯ ಹುಟ್ಟು, ಅವಳ ಆರಾಧನೆ, ಪೂಜಾ ಪದ್ಧತಿ ಹಾಗೂ ಅವಳ ಅವತಾರಗಳ ಬಗ್ಗೆ ಈ ಕೆಳಗಿನ ಪದ್ಯದಲ್ಲಿ ಗಮನಿಸಬಹುದಾಗಿದೆ.

"ಹುಟ್ಯಾಳಮ್ಮ ಮಾಹೂರದಲ್ಲಿ
ಬೆನ್ನಿನ ಪೂಜೆ ನಾಗಾವಿದಲ್ಲಿ
ಸ್ವಾರಿ ಹೊಂಬಾದ ಖ್ಯಾಡದಲ್ಲಿ
ಮಾಯನಾಗ್ಯಾಳ ಮಣೂರದಲ್ಲಿ
ಹಿಂತಾ ತಾಯಿ ಜಗದಂಬನ ಗೊಂದಲಗಳು
ಎಲ್ಲೆಲ್ಲಿ, ನಡದಾವ
ತುಳಜಾಪೂರಂ ಬಾಬಾಯಿ
ಕೋಲಾಪೂರ ಲಕ್ಷ್ಮೀ
ಬಾದಾಮಿ ಬನಶಂಕರಿ
ಶ್ರೀಶೈಲ್ಯ ಭ್ರಮರಾಂಬಿಕೆ."[೩]

ಆದಿಶಕ್ತಿಯು ಅವತಾರ ಪ್ರಕೃತಿಗೆ ಮಾತ್ರ ಮೀಸಲಾಗಿಲ್ಲ ತುಳಜಾಪುರದಲ್ಲಿ ಅಂಬಾಭವಾನಿಯಾಗಿ, ಕೊಲ್ಹಾಪುರದಲ್ಲಿ ಮಹಾಲಕ್ಷ್ಮಿಯಾಗಿ, ಬದಾಮಿಯಲ್ಲಿ ಬನಶಂಕರಿ ಯಾಗಿ ಶ್ರೀಶೈಲದಲ್ಲಿ ಭ್ರಮರಾಂಬಿಕೆ, ಕೊಲ್ಲೂರಿನಲ್ಲಿ ಮೂಕಾಂಬೆಯಾಗಿ, ಶೃಂಗೇರಿಯಲ್ಲಿ ಶಾರದಾಂಬೆಯಾಗಿ ಉಜ್ಜೈನಿಯಲ್ಲಿ ಚೌಡಮ್ಮಳಾಗಿ, ಮೈಸೂರಿನಲ್ಲಿ ಚಾಮುಂಡಿಯಾಗಿ ಒಡೆಯರ

ಮನೆತನಕ್ಕೆ ಮಾತೃದೇವತೆಯಾಗಿದ್ದಾಳೆ. ಆದಿಶಕ್ತಿ ಅನೇಕ ಪ್ರದೇಶಗಳಲ್ಲಿ ನೆಲೆಯಾಗಿ ಆಯಾ ಕ್ಷೇತ್ರಗಳಿಗೆಲ್ಲ ಅವಳೆ ಮಾತೃ ದೇವತೆಯಾಗಿದ್ದಾಳೆ ಎಂದು ತಿಳಿಸುತ್ತಾ ಭಕ್ತಿಯಿಂದ ಅವಳನ್ನು ಪ್ರಾರ್ಥಿಸುತ್ತಾ, ತಾಳಕ್ಕೆ ತಕ್ಕಂತೆ ಮೈಮರೆತು ಕುಣಿಯುತ್ತಾರೆ. ಹಾಡಿನ ಮೊದಲ ಮತ್ತು ಕೊನೆಯ ಸಾಲಿನ್ನು ಅತೀ ಎತ್ತರ ಧ್ವನಿಯಲ್ಲಿ ಶಕ್ತಿ ಮೀರಿ ಆಲಾಪ ಮಾಡುತ್ತಾರೆ. ಹಾಡು ಮುಗಿಯುವ ವೇಳೆಗೆ ಸಂಬಾಳ ಹಾಗೂ ಇತರೆ ವಾದ್ಯಗಳ, ತೀವ್ರಗತಿಯಲ್ಲಿ ಚಲತಿ ಹಿಡಿಯುತ್ತವೆ.

ಗೊಂದಲಿಗರ ಆಶಯದ ಪ್ರಕಾರ ಗೊಂದಲ ಪೂಜೆ ಕೈಕೊಂಡರೆ ಸ್ವತ: ದೇವಿಯೇ ಬಂದು ಭಕ್ತರ ಮನೆಯಲ್ಲಿ ನೆಲೆಸುವಳು ಎಂಬ ತಿಳುವಳಿಕೆಯನ್ನು ಭಕ್ತರಲ್ಲಿ ಹುಟ್ಟು ಹಾಕುತ್ತಾರೆ. ಅದಕ್ಕಾಗಿ ಅವರು

"ಬಾರವ್ವ ಜಗದಂಬೆ
ರಂಗ ಗೊಂದುಳದಲ್ಲಿ
ಚೌಡಕಿ ಸ್ವರದಲ್ಲಿ
ತಾಳ ಸಂಬಾಳದಲ್ಲಿ
ಬಾರವ್ವ ಜಗದಂಬಿ"[೪]

ಗೊಂದಲಿಗರು ಗೊಂದಲ ಪೂಜೆ ಮಾಡುವ ಸಂದರ್ಭದಲ್ಲಿ ಆಯಾ ್ರದೇಶದಲ್ಲಿ ಪ್ರಸಿದ್ಧಿಯನ್ನು ಪಡೆದ ಮಾತೃ ದೇವತೆಗಳ ಹೆಸರಿನಲ್ಲಿ ಗೊಂದಲ ಹಾಕುತ್ತಾರೆ. ಮತ್ತು ಗೊಂದಲಿಗರ ಪ್ರಕಾರ ಪ್ರಾದೇಶಿಕವಾಗಿ ಕಂಡು ಬರುವ ಎಲ್ಲ ಮಾತೃ ದೇವತೆಗಳ ಮೂಲ ಸ್ಥಾನ ತುಳಜಾಪುರದ ಅಂಬಾಭವಾನಿಯದ್ದು ಅವಳನ್ನು ಸ್ಮರಿಸಬೇಕಾದದ್ದು ನಮ್ಮ ಧರ್ಮ ಎಂಬುದನ್ನು ಗೊಂದಲಿಗರು ವ್ಯಕ್ತಪಡಿಸುತ್ತಾರೆ. ಆ ಮೂಲ ಸ್ಥಾನವನ್ನು ನೆನೆಯುವ ರೀತಿ ಈ ಕೆಳಗಿನಂತಿದೆ.

"ಏಳು ದಿಕ್ಕಿಗೆ ಏಳು ಸಮುದುರ
ನಟ್ಟ ನಡುವೆ ತೂಳದಾಪೂರ
ಗೊಂದಲಿಗರ ತಾಳಮೇಳ
ಅಲ್ಲಿ ಪಾಕದಾರ ಗೊಂದಳ
ಬಾರವ್ವ ಜಗದಂಬಿ "

**ಶಕ್ತಿದೇವತೆ ಸ್ತುತಿ**

"ಮುಮ್ಮೇಳ : ಬಾದೇವಿ ಭಕ್ತ ಮನಿಗೆ
ಬಾರಮ್ಮಾ ಬಾ ಭಕ್ತರ ಮನಿಗೆ

ಹಿಮ್ಮೇಳ :  ಭಾಗ್ಯದ ದೇವಿ ಭಾರಮ್ಮ ಅಮ್ಮಾ

ಬಾ ದೇವಿ ಭಕ್ತರ ಮನಿಗೆ

ಮುಮ್ಮೇಳ : ಅತ್ತಲಿತ್ತಲಿ ನೋಡುತ ಬಾ

ಭಕ್ತರ ಭಾವಕೆ ಒಲಿಯುತ ಬಾ

ಹಿಮ್ಮೇಳ :  ಬಾದೇವಿ ಭಕ್ತರ ಮನಿಗೆ

ಬಾರಮ್ಮಾ ಬಾ ಭಕ್ತರ ಮನಿಗೆ

ಮುಮ್ಮೇಳ : ಹೆಜ್ಜೆಯ ಮ್ಯಾಲೆ ಹೆಜ್ಜೆಯನಿಟ್ಟು

ಗೆಜ್ಜೆಯ ಕಾಲನು ಕುಣಿಸುತ ಬಾ

ಸಮೂಹ :  ಬಾದೇವಿ ಭಕ್ತರ ಮನಿಗೆ

ಭಾಗ್ಯದ ದೇವಿ ಬಾರಮ್ಮ"[೫]

ಗೊಂದಲಿಗರು ಪ್ರಾದೇಶಿಕವಾಗಿ ಆಯಾ ಭಾಗಗಳಲ್ಲಿ ವಿವಿಧ ರೀತಿಯಲ್ಲಿ ದೇವಿಯ ಸ್ತುತಿ ಪದ್ಯಗಳನ್ನು ಹಾಡುತ್ತಾರೆಂದು ಈಗಾಗಲೇ ತಿಳಿಸಲಾಗಿದೆ. ಧಾರವಾಡ ಜಿಲ್ಲೆಯ ಗೊಂದಲಿಗರು ಹೇಳುವ ಸ್ತುತಿ ಪದ್ಯ ಈ ಕೆಳಗಿನಂತಿದೆ.

"ಶಾಂಭವಿ ದಯಾ ಮಾಡ್ಯೆ

ಬಾ ದೇವಿ ಮನೆಗೆ

ಶಾಂಭವಿ ದಯಾ ಮಾಡ್ಯೆ

ಜಗದಂಬಾ ದೇವಿ ಶಾಂಭವಿ ದಯಾ ಮಾಡ್ಯೆ "

ತಾಯಿ ಒಳ್ಳೆದೇಳ ನಿನ್ನ ತಿರದ

ಜಗದಂಬಾ ಎವ್ವಾ ಒಳ್ಳೆದೇಳ ನಿನ್ನ ತಿರದ

ಒಳ್ಳೆದೇಳ ನಿನ್ನ ತಿರದ

ಶಾಂಭವಿ ದಯಾ ಮಾಡ್ಯೆ"[೬]

**ಗೋಕಾಕದ ಗೊಂದಲಿಗರು ಹೇಳುವ ಸ್ತುತಿ :**

"ಭಗವತಿಯ ನಿಜರೂಪ ತಾಯಿ

ನೀನೇಮಾಯಿ ಜಗದಂಬಾ

ಭಗವತಿಯೇ ಜಗದಂಬಾ

ಅಂಬಾ ಜಗದಂಬನ ಗೊಂದಲಕ ಬನ್ನಿ

ಅಂಬಾ ಜಗದಂಬನ ಗೊಂದಲಕ ಬನ್ನಿ
ಸವದತ್ತಿ ಯಲ್ಲಮ್ಮನ ಗೊಂದಲಕ ಬನ್ನಿ
ತುಳಜಾಪೂರ ತುಳಜಾಭವಾನಿ ಗೊಂದಲಕ ಬನ್ನಿ
ಕೊಲ್ಹಾಪೂರ ಮಹಾಲಕ್ಷ್ಮಿದೇವಿ ಗೊಂದಲಕ ಬನ್ನಿ
ಕೈಲಾಸದ ಪಾರ್ವತಿ ದೇವಿ ಗೊಂದಲಕ ಬನ್ನಿ
ವೈಕುಂಠದ ನಾರಾಯಣಿ ಗೊಂದಲಕ ಬನ್ನಿ
ಸ್ವರ್ಗದ ಸರಸ್ವತಿ ದೇವಿ ಗೊಂದಲಕ ಬನ್ನಿ
ಉದೋ ಉದೋ ಅನ್ನುತ ಗೊಂದಲಕ್ಕೆ ಬನ್ನಿ"[೭]

ಕೆಲವು ಪ್ರದೇಶಗಳಲ್ಲಿ ಎಲ್ಲ ಶಕ್ತಿದೇವತೆಗಳ ಅವತಾರಗಳಿಂದ ಗೊಂದಲ ಪೂಜೆ ಮಾಡಲಾಗುತ್ತದೆ ಎಂದು ಹೇಳುತ್ತಾರೆ. ಎಲ್ಲ ಶಕ್ತಿಗಳ ಅವತಾರಗಳ ಮೂಲ ಶಕ್ತಿಯೇ ಪಾರ್ವತಿಯಾಗಿದ್ದಾಳೆ. ದುಷ್ಟ ಸಂಹಾರ ಶಿಷ್ಟ ರಕ್ಷಣೆ ಎನ್ನುವಂತೆ, ದುಷ್ಟರ ಸಂಹಾರಕ್ಕಾಗಿ ಆಯಾ ಕ್ಷೇತ್ರಗಳಲ್ಲಿ ನೆಲೆಸಿದ್ದಾಳೆ. ಅವು ಪುಣ್ಯ ಕ್ಷೇತ್ರಗಳಾಗುವುದರ ಜೊತೆಗೆ ಅವರ ರಕ್ಷಣೆಯ ನೆಲೆಗಳಾಗಿವೆ.

ಗೋಕಾಕ ಭಾಗದ ಗೊಂದಲಿಗರು ಹೇಳುವ ಸ್ತುತಿ ಪದ್ಯದಲ್ಲಿ 'ಭಗವತಿಯನ್ನು ಕುರಿತು ಹೇಳಲಾಗುತ್ತದೆ. ಭಗವತಿಯೇ ಜಗದಂಬಾ ಎಂಬ ಮನೋಭಾವದಿಂದ ಸ್ತುತಿಯನ್ನು ಮಾಡಲಾಗುತ್ತದೆ. ಇಲ್ಲಿಯೂ ಆಯಾ ಕ್ಷೇತ್ರದ ಮಾತೃ ದೈವಗಳನ್ನು ಆಹ್ವಾನಿಸುವುದನ್ನು ಗೊಂದಲ ಸ್ತುತಿಯಲ್ಲಿ ಕಾಣುತ್ತೇವೆ. ಕೊನೆಗೆ ಉಧೋss ಉಧೋss ಎನ್ನುವ ನಾಮವನ್ನು ಕಾಣುತ್ತೇವೆ. ಕಾರಣ ಸವದತ್ತಿಯ ಎಲ್ಲಮ್ಮನ ಕ್ಷೇತ್ರವು ಈ ಪ್ರದೇಶಕ್ಕೆ ಸಮೀಪವಾಗುವುದರಿಂದ ಅವಳ ನಾಮಸ್ಮರಣೆ ಮಾಡುವುದನ್ನು ಈ ಪ್ರದೇಶದ ಗೊಂದಲದಲ್ಲಿ ಕಾಣುತ್ತೇವೆ.

**ವಿಜಯಪುರ ಗೊಂದಲಿಗರು ಹೇಳುವ ಸ್ತುತಿ**

"ಶ್ರೀದೇವಿ ಅಂಬಾನನಿನ್ನ ಗೊಂದಲ
ಉದೋ ಉದೋ ಅಂಬಾನನಿನ್ನ ಗೊಂದಲ
ಉದೋ ಉದೋ ಜಗದಂಬಾನನಿನ್ನ ಗೊಂದಲ
ಉದೋ ಉದೋ ಚಾಮುಂಡಿಯನಿನ್ನ ಗೊಂದಲ
ಉದೋ ಉದೋ ಚೌಡೇಶ್ವರಿಯನಿನ್ನ ಗೊಂದಲ
ಗೊಂದಲಕ ಬನ್ನಿ ಗೊಂದಲಕ ಬನ್ನಿ
ಮಾಯೆಯ ಗೊಂದಲಕ ಬನ್ನಿ

ದೇವಿಯ ಪೂಜೆಕ ಬನ್ನಿ

ದೇವಿಯ ರೂಪದ ತಾಯಿಯರು

ದೇವಿಯ ಗೊಂದಲ ನೋಡ ಬನ್ನಿ

ದೇವಿಯ ಮಾಯ ಕೇಳ ಬನ್ನಿ'[೮]

ವಿಜಯಪುರ ಜಿಲ್ಲೆಯ ಗೊಂದಲಿಗರು ವಿಶೇಷವಾಗಿ ಮಾತೃ ದೇವತೆಗಳ ಎಲ್ಲ ಅವತಾರಗಳನ್ನು ಸ್ಮರಿಸುತ್ತ 'ಎಲ್ಲಾ ದೇವಿಯರ ರೂಪದ ತಾಯಂದಿರು ಗೊಂದಲ ನೋಡಬನ್ನಿ' ಎಂದು ಆಹ್ವಾನಿಸುತ್ತಾರೆ.

**ಕೋಡಿಹಾಳ ಗೊಂದಲಿಗರು ಹೇಳುವ ಸ್ತುತಿ**

"ಗೊಂದಲ ಹಾಕಿದೆ ದೇವಿಗೆ ಗೊಂದಲ

ತಾಯಿಯ ಗೊಂದಲ ಉದೋ ಉದೋ

ಅಂಬಾಬಾಯಿ ಹೆಸರಿನ ಗೊಂದಲss

ಜಗದಂಬೆ ಹೆಸರಿನ ಗೊಂದಲss

ರೇಣುಕೆಯ ಹೆಸರಿನ ಗೊಂದಲss

ಮಹಾಲಕ್ಷ್ಮಿ ಹೆಸರಿನ ಗೊಂದಲss

ತುಳಜಾಬಾಯಿ ಹೆಸರಿನ ಗೊಂದಲ

ಗೊಂದಲ ಹಾಕಿದೆ ಶಕ್ತಿಗೆ ಗೊಂದಲss

ತಾಯಿಯ ಗೊಂದಲ ನಡದದss

ಉದೋ ಉದೋ ಉದೋss

ಉದೋ ಉದೋ ಉದೋs"[೯]

**ಮಿರಜ, ಸಾಂಗಲಿ ಗೊಂದಲಿಗರು ಹೇಳುವ ಸ್ತುತಿ.**

"ಮಾಯಿಯ ನಿಜರೂಪ ತಾಯಿಯ ಗೊಂದಳ

ಉದೆ ಉದೆ ಅಂಬಾಬಾಯಿ ಗೊಂದಳಕ್ಕೆ ಬನ್ನಿ

ಮಾರೇಶ್ವರ ಗಣಾ ಗೊಂದಳಕೆ ಬಾ

ಮೂವತ್ತು ಮೂರು ಕೋಟಿ ದೇವತೆಗಳು ಗೊಂದಳಕೆ ಬಾ

ಪೂಣೆಯ ಪಾರ್ವತಿ ಗೊಂದಳಕೆ ಬಾ

ಮಾಯಿಯ ಗಣಪತಿ ಗೊಂದಳಕೆ ಬಾ

ಕೃಷ್ಣಾ ಕೊಯಿನಾ ಮಾಯಿ ಗೊಂದಳಕೆ ಬಾ

ರತ್ನಗಿರಿ ಜೋತಿ ಬಾ ಗೊಂದಳಕೆ ಬಾ

ಕೊಲ್ಹಾಪುರಿಯ ಲಕ್ಷ್ಮಿ ಗೊಂದಳಕೆ ಬಾ

ತುಳಜಾಪುರದ ಭವಾನಿ ಗೊಂದಳಕೆ ಬಾ

PÁgÀr AiÀ¯Áè¨Á¬Ä UÉÆAzÀ¼ÀPÉ ¨Á'[೧೦]

ಮಹಾರಾಷ್ಟ್ರದ ಗಡಿಯಲ್ಲಿರುವ ಗೊಂದಲಿಗರು ಹೇಳುವ ಸ್ತುತಿಗಳು ವಿಶಿಷ್ಟವಾಗಿವೆ. ಇವರ ಸ್ತುತಿ ಪದ್ಯಗಳಲ್ಲಿ ಮಹಾರಾಷ್ಟ್ರದ ಪ್ರಸಿದ್ದ ನಗರಗಳ ಹೆಸರನ್ನು ಹೇಳುವುದರ ಜೊತೆಗೆ ಅಲ್ಲಿ ನೆಲೆಸಿ ಪೂಜೆಗೊಳ್ಳುತ್ತಿರುವ ಮಾತೃ ದೇವತೆಗಳನ್ನು ಗೊಂದಲಕ್ಕೆ ಆಹ್ವಾನಿಸುತ್ತಾರೆ.

**ಬಾಗಲಕೋಟದ ಗೊಂದಲಿಗರು ಹೇಳುವ ಸ್ತುತಿ :**

"ಆದಿಶಕ್ತಿ ಮಾಯಾ ಜನನಿ ಗೊಂದಲ ಹಾಕುವೆ

ಮಾಯಾ ಜನನಿ ಅಂಬಾದೇವಿ ಗೊಂದಲ ಹಾಕುವೆ

ಉದೋ ಉದೋ ಅಂಬಾದೇವಿ ಗೊಂದಲ ಹಾಕುವೆ

ದುಷ್ಟರ ದುರ್ಗಾದೇವಿ ಗೊಂದಲ ಹಾಕುವೆ

ರೌದ್ರದ ರುದ್ರಾದೇವಿ ಗೊಂದಲ ಹಾಕುವೆ

ಉದೋ ಉದೋ ಅಂಬಾದೇವಿ ಗೊಂದಲ ಹಾಕುವೆ.'[೧೧]

ಗೊಂದಲಿಗರ ಸ್ತುತಿ ಪದ್ಯಗಳನ್ನು ಗಮನಿಸಿದಾಗ ಆಯಾ ಕ್ಷೇತ್ರದಲ್ಲಿ ಪ್ರಾದೇಶಿಕ ಭಿನ್ನತೆ ಇರುವುದು ಕಂಡು ಬರುತ್ತದೆ. ದೇವಿಯ ಎಲ್ಲ ಅವತಾರಗಳನ್ನು ಗೊಂದಲಕ್ಕೆ ಆಹ್ವಾನಿಸುವುದು ಮತ್ತು ಉದೋ ಉದೋ ಎನ್ನುವ ನಾಮದೊಂದಿಗೆ ಸ್ತುತಿ ಮುಗಿಸುವುದು ಸಾಮಾನ್ಯವಾಗಿರುತ್ತದೆ.

**೨ ಪಿತೃ ದೇವತೆಗಳ ಸ್ತುತಿಗಳು :**

ಗೊಂದಲದ ಪೂಜೆಯಲ್ಲಿ ರಾಮ, ಕರಿರಾಮಾ, ಶಿವ ಮುಂತಾದ ಪುರುಷ ದೇವತೆಗಳ ಸ್ತುತಿಗಳನ್ನು ಮಾಡಲಾಗುತ್ತಿದೆ. ಗೊಂದಳವು ಸಾಂಘವಾಗಿ ಸಾಗಲು ಮೊದಲು ನಾಯಕನು ಗಣಪತಿಯ ಸ್ತುತಿಯನ್ನು ಮಾಡುತ್ತಾನೆ. ಈ ಪದ್ಯ ಮರಾಠಿ ಭಾಷೆಯಲ್ಲಿದೆ.

"ಮೋರೇಶ್ವರಾ ಗಣಾ ಗೊಂದಳಾಯೇ

ತಹಿತ್ತೀಸಕೋಟಿ ದೇವಾ ಗೊಂದಳಾಯೇ

ವಾಈಚ್ಯಾ ಗಣಪತಿ ಗೊಂದಳಾಯೇ

ಕೃಷ್ಣಾ ಕೋಯನಾ ಗೊಂದಳಾಯೇ

ಈ ಒಂದು ಗಣಪತಿ ಬನವಾ
ಶ್ರೀ ಗಣನಾಯಕ ನಿಜ ಸುಖದಾಯಕ
ಭಕ್ತವಚ್ಛಲ ಮಾರಾಜ್ "
" ಮದಲೀಗಿ ನೆನದೇವ್ರಿ ಗಣನಾಥಗೆ
ಗಣನಾಥಗೆ ಗೌರಿತನಗೆ ॥ ಪ ॥
ಇಲಿ ಮ್ಯಾಲ ಸ್ವಾರ ಆದಾವನೆ
ಸ್ವಾರಾದನೆ ನೀ ಇಗ್ನೇಶನೆ "
ಸುರುಳಿ ಸೊಂಡಿ ವೆಜ್ಜಂ ದಂತಾವನೆ
ವಜ್ರದಂತಾವನೆ ನೀ ಇಗ್ನೇಶನೆ "
ದೇಶದೊಳಗ ಇಂಡಿ ಶಾಂತೇಶನೆ
ಇಂಡಿ ಶಾಂತೇಶನೆ ಕುಡು ಮತಿನೀನೆ"[೧೨]

ಮಹಾರಾಷ್ಟ್ರದ ಮಿರಜ ಸಾಂಗಲಿ ಭಾಗದ ಗೊಂದಲಿಗರು ತಮ್ಮ ಗೊಂದಲ ಕಾರ್ಯಕ್ರಮದಲ್ಲಿ ಪಿತೃದೇವತೆಗಳನ್ನು ಸ್ತುತಿಸುವ ಅವರನ್ನು ಗೊಂದಲಕ್ಕೆ ಆಹ್ವಾನಿಸುವುದು ಕಂಡು ಬರುತ್ತದೆ.

"ಫಲಬನದ ರಾಮಾ ಗೊಂದಳಕೆ ಬಾ
ನಾಶಿಕದ ಕರಿರಾಮಾ ಗೊಂದಳಕೆ ಬಾ
ತವಠೆಯ ಕರಿರಾಮಾ ಗೊಂದಳಕೆ ಬಾ
ವಾಡೆ ಕುದರೆಗಳ ಬೋಲಾಯಿ ಗೊಂದಳಕೆ ಬಾ
ಏಳು ಸಮುದ್ರಗಳೇ ಗೊಂದಳಕೆ ಬನ್ನಿ
ನವಲಕ್ಷ ತಾರಾಗಣ ಗೊಂದಳಕೆ ಬನ್ನಿ
ಅಗ್ನಿಯ ತಂದೆ ಗೊಂದಳಕೆ ಬನ್ನಿ "[೧೩]

ಗೊಂದಲದ ಆರಾಧನೆಯಲ್ಲಿ ದೇವ ದೇವತೆಗಳನ್ನಷ್ಟೇ ಅಲ್ಲದೇ, ಪ್ರಕೃತಿ ದೈವಗಳಾದ ಸೂರ್ಯ, ಚಂದ್ರ, ಭೂಮಿ, ಆಕಾಶ, ನೀರು ಹೀಗೆ ಪಂಚಮಹಾಭೂತಗಳನ್ನು ಇಲ್ಲಿ ಆರಾಧಿಸುತ್ತಾರೆ. ಯಾವ ತೊಂದರೆ, ಕಷ್ಟಗಳು ಬರದಂತೆ ನೀವೆಲ್ಲರೂ ಕಾಪಾಡಿ ಮತ್ತು ಗೊಂದಲಕ್ಕೆ ಬನ್ನಿ ಎಂದು ಬೇಡಿಕೊಳ್ಳುತ್ತಾರೆ.

### ೫.೩.೨ ಹರಕೆ ಪದಗಳು

ಗೊಂದಲಿಗರು ಗೊಂದಲ ಪೂಜೆ ನಡೆಸುವವರ ಮನೆಗಳಿಗೆ ಹೋಗಿ ಗೊಂದಲ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಡುತ್ತಾರೆ. ಬೆಳತನಕ ಭಕ್ತಿಯ ರಸವನ್ನು ಹರಿಸುತ್ತಾರೆ. ಗೊಂದಲದ ಪೂಜೆ ರಾತ್ರಿಯುದ್ದಕ್ಕೂ ನಡೆಯಲೇಬೇಕು ಎಂಬುದು ಕಡ್ಡಾಯವಿಲ್ಲ. ಆದರೆ ಗೊಂದಲಿಗರು ಗೊಂದಲ ಹಾಕಿದ ಮನೆಯಿಂದ ಮಾರನೆಯ ದಿನ ಸೂರ್ಯೋದಯದ ನಂತರವೇ ಹೊರಗೆ ಹೋಗುವುದು ಸಂಪ್ರದಾಯ.

ಗೊಂದಲಿಗರು ಹೊರಡುವಾಗ ಶಕ್ತಿ ದೇವತೆಗೆ ಉತ್ತರ ರಂಗ ಪೂಜೆಯನ್ನು ಸಲ್ಲಿಸಿ ನಮಸ್ಕರಿಸುತ್ತಾರೆ. ನಂತರ ಅವರಿಗೆ ಬಟ್ಟೆ, ಹಣ, ಕುಬ್ಬಸ, ಎಲೆ ಅಡಿಕೆ, ಬಳಸಿದ ವಸ್ತುಗಳು ಹಾಗೂ ಮಕ್ಕಳಿಗೆ ಬಟ್ಟೆಗಳನ್ನು ನೀಡುತ್ತಾರೆ. ಇನ್ನು ಕೆಲ ಸ್ಥಳಗಳಲ್ಲಿ ಅವರು ನಿಗದಿಪಡಿಸಿದ ಹಣವನ್ನು ಮಾತ್ರ ಸ್ವೀಕರಿಸುತ್ತಾರೆ. ಗೊಂದಲ ವೀಕ್ಷಿಸಲು ಬಂದವರು ಸಹ ಅವರಿಗೆ ದಕ್ಷಿಣೆ ನೀಡುತ್ತಾರೆ. ಚೌಡಿಕೆ ವಾದ್ಯ ನುಡಿಸಿದವನು ಕೊನೆಗೆ ಹರಿಕೆ ಪದಗಳನ್ನು ಹೇಳುತ್ತಾನೆ. 'ಹರಿಕೆ' ಎಂದರೆ ಹರಿಸು, ಆಶೀರ್ವದಿಸು ಎಂಬ ಅರ್ಥವಿದೆ. ಇನ್ನೊಂದು ಅರ್ಥದಲ್ಲಿ ದೇವರ ಹೆಸರಿನಲ್ಲಿ ಮುಡುಪಿಡುವುದು ಅಥವಾ ಹರಿಕೆ ಕಟ್ಟುವುದು ಎಂದೂ ಅರ್ಥೈಸಿಕೊಳ್ಳಲಾಗುತ್ತದೆ.

ಗೊಂದಲದ ಪೂಜೆ ಮಾಡಿಸಿದ ಆ ಮನೆ ಸುಖ, ಶಾಂತಿ, ಸಮೃದ್ಧಿಯಿಂದ ಕೂಡಿರಲಿ ಎಂದು ಹರಸುತ್ತಾರೆ. ಅವರ ಹರಕೆ ಪದ್ಯಗಳು ಈ ಕೆಳಗಿನಂತಿವೆ

"ಆದಿಶಕ್ತಿ ನೀಡೆ ನೀನು
ಭಕ್ತರಿಗೆ ಭಾವವನು
ಆಡುವ ಮಕ್ಕಳಾಗಲಿ
ತೂಗುವ ತೊಟ್ಟಿಲಾಗಲಿ
ಗೊಂದಲ ಭಾವ ಬೆಳೆಯಲು
ನಾಯಕ ಮಕ್ಕಳನ ಕರೆಯಲಿ
ಓ ಉದೋ ಉದೋ
ಶಕ್ತಿ ಮಾಯಿ ತಾಯಿ
ನೀಡೆ ನಿನ್ನ ಹರಕೆಯನು"[೧೪]

### ೫.೩.೩ ಸೊಲ್ಲುಗಳು

ಗೊಂದಲಿಗರು ಜನಪದ ಸೊಗಡನ್ನು ತಮ್ಮ ಕಥಾ ನಿರೂಪಣೆಯೊಂದಿಗೆ ಸೇರಿಸಿಕೊಂಡು ತಮ್ಮದೇ ಆದ ಶೈಲಿಯಲ್ಲಿ ಕಥೆ ಹೇಳಿಕೊಂಡು ಹೋಗುತ್ತಾರೆ. ಕಥೆಯ ನಿರೂಪಣಾ ರೀತಿ ಸೊಗಸಾಗಿದ್ದು ಹಾಡು, ಕಥೆ ಮತ್ತು ಸಂಭಾಷಣೆ ಹಾಗೂ ಉಪಕಥೆಗಳೊಂದಿಗೆ ಅವರ

ಸಾಹಿತ್ಯ ಸಾಗುತ್ತಿದೆ. ಮೇಳದ ನಾಯಕ ಕಥನ ಗೀತೆಗಳನ್ನು ಹಾಡುವಾಗ ಹಿಮ್ಮೇಳದವರು ತಮ್ಮ ಕಥೆಗಳಲ್ಲಿ ಅನೇಕ ಜನಪದ ಸೊಲ್ಲುಗಳನ್ನು ಬಳಸುತ್ತಾರೆ. ಪ್ರತಿ ಸಾಲಿನ ಕೊನೆಗೆ ಈ ಸೊಲ್ಲುಗಳ ಬಳಕೆಯಾಗುತ್ತಿದೆ. ಈ ಸೊಲ್ಲುಗಳು ಕಥೆಯ ಸ್ವಾರಸ್ಯವನ್ನು ಹೆಚ್ಚಿಸುತ್ತದೆ ಮತ್ತು ಕಥೆಯ ಮುಂದುವರಿಕೆಯಾಗಿ ಕೆಲಸ ಮಾಡುತ್ತವೆ. ಇದು ಒಂದು ರೀತಿಯಲ್ಲಿ ಮುಖ್ಯ ಕಥೆಗಾರನಿಗೆ ಕ್ಷಣ ಮಾತ್ರದ ವಿಶ್ರಾಂತಿಯನ್ನೂ ನೀಡುವ ಕೆಲಸ ಮಾಡುತ್ತದೆ. ಈ ಸೊಲ್ಲುಗಳನ್ನು ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಹೇಳುತ್ತಾರೆ. ಸೊಲ್ಲುಗಳ ವಿಧಗಳನ್ನು ಈ ಕೆಳಗಿನಂತೆ ಕಾಣಬಹುದು.

೧. ಹರಹರ ಎನದೇವ ೨. ಶಿವ ಶಿವ ಮಾಹಾದೆವೆನ್ನೈದೇವಿ ೩. ಶಿವಹರನ ಮಹಾದೇವ ೪. ಶಿವರಾಯ ಎನ್ನಯ್ಯದೇವ್ಯೆ ೫. ಕೋಲ ಮುತ್ತಿನ ಕೋಲ ೬. ಹರ ಹರ ಮಹಾದೇವಿ. ೭. ಶಿವಹರ ಎನದೇವ.

ಉದಾ: 'ನೀಲಮ್ಮ' ಎಂಬ ಕಥಾ ಪ್ರಸಂಗದ ಕೆಲವು ಸಾಲುಗಳನ್ನು ಇಲ್ಲಿ ಉದಾಹರಣೆಗೆ ನೀಡಲಾಗಿದೆ.

ಮು –ಯಪ್ಪಾ ನಿಲಕರಂಜಿ ಪಟ್ಟಣದೊಳ
ಹಿ – ಶಿವರಾಯ ಎನ್ನೈದೇವ್ಯೆ
ಮು – ತಾಯಿ ಧರ್ಮವುಳ್ಳ ನೀಲಮ್ಮ
ಹಿ – ಶಿವರಾಯ ಎನ್ನೈದೇವ್ಯೆ
ಮು – ಪುಣ್ಯ ಉಪಕಾರ ಮಾಡುತಾಳ
ಹಿ – ಶಿವರಾಯ ಎನ್ನೈದೇವ್ಯೆ.
ಮು – ಪುಣ್ಯ ಉಪಕಾರ ಮಾಡುತಾಳೈ
ಹರನು ಹರನು ಮಹಾದೇವಿ
ಶಿವನು ಶಿವನು ಶಿವಎನ್ನಯ್ಯೆ ದೇವಿ.[೧೫]

## ೫.೪ ತತ್ವ ಪದಗಳು

### ೫.೪.೧ ಅನುಭಾವ ಪದಗಳು

ಕನ್ನಡ ನಾಡಿನಲ್ಲಿ ಹಲವಾರು ಅನುಭಾವಿಗಳು ಜನ್ಮತಾಳಿ ತಾತ್ವಿಕ ಅನುಭಾವಗಳನ್ನು ಬಿತ್ತಿದ್ದಾರೆ. ಮೌಖಿಕ ಪರಂಪರೆಯಲ್ಲಿಯೇ ಬರುವ ದಾಸರು, ವಚನಕಾರರು, ಶಿಶುನಾಳ ಶರೀಫರು ಮುಂತಾದವರು ತಾತ್ವಿಕ ಗುಣಗಳನ್ನು ಹೊಂದಿದ ಅನುಭಾವಿಗಳೇ ಆಗಿದ್ದಾರೆ. ಅನುಭವಗಳ ಮೂಲಕ ಸ್ವರ ಮಾಧುರ್ಯ, ಹಿತನುಡಿಗಳನ್ನು ಜನತೆಗೆ ತಿಳಿಸುವುದೇ

ಅನುಭಾವವಾಗಿದೆ. ಇದೊಂದು ಆಂತರಿಕ ಸ್ಫೂರ್ತಿಯಾಗಿದೆ. ತನ್ನ ಅರಿವೇ ತನಗೆ ಗುರುವಾಗಿರುತ್ತದೆ. ತತ್ವಪದಗಳು ಬದುಕಿನ ಕಷ್ಟಗಳನ್ನು ನೀಗಿಸುತ್ತವೆ. ಬೇಸರವನ್ನು ಹೋಗಲಾಡಿಸುತ್ತವೆ. ಸಮಸ್ಯೆಗೆ ಪರಿಹಾರವನ್ನು ಕೊಟ್ಟು ಆಧ್ಯಾತ್ಮಿಕ ನೆಲೆಯನ್ನು ಕಂಡುಕೊಳ್ಳಲು ದಾರಿಮಾಡಿಕೊಡುತ್ತವೆ. ಇಂತಹ ಹಲವಾರು ಕಾರ್ಯಗಳು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪರಂಪರಾಗತವಾಗಿ ನಡೆದುಕೊಂಡು ಬಂದಿವೆ.

ಸಾಮಾಜಿಕ ನೆಲೆಗಟ್ಟನ್ನು ಗಟ್ಟಿಗೊಳಿಸುವಲ್ಲಿ, ಸ್ಥಿರತೆ, ಸಮಾನತೆಯನ್ನು ಉಳಿಸುವಲ್ಲಿ ಈ ತಾತ್ವಿಕ ತತ್ವಪದಗಳು ಬಹಳ ಮುಖ್ಯ ಪಾತ್ರವಹಿಸುತ್ತವೆ. ಹಲವಾರು ಅನುಭಾವಿಗಳ ಅನುಭಾವ ತತ್ವಪದಗಳು ಜನಸಾಮಾನ್ಯರ ನಾಲಿಗೆ ಮೇಲೆ ಸರಾಗವಾಗಿ ಹಾಡಬಲ್ಲವಾಗಿವೆ. ಯಾವುದೇ ರಾಗ ತಾಳಗಳಿಗೆ ಕಟ್ಟುಬದ್ಧಾಗಿರದೇ ಯಾರಾದರೂ ಸುಲಭವಾಗಿ ಹಾಡಬಲ್ಲವುಗಳಾಗಿವೆ. ಇಂತಹ ಅನುಭಾವ ಪದಗಳನ್ನು ಗೊಂದಲಿಗರು ತಮ್ಮ ವಿವಿಧ ಪ್ರಸಂಗಗಳಲ್ಲಿ ಬಳಸಿ ಹೇಳುವುದುಂಟು. ತತ್ವಪದಗಳನ್ನು ರಕ್ಷಿಸುವ ಮತ್ತು ಪ್ರಚಾರಗೊಳಿಸುವ ಕಾರ್ಯವನ್ನು ಗೊಂದಲಿಗರು ನಡೆಸಿಕೊಂಡು ಬಂದಿದ್ದಾರೆ ಎಂದು ಹೇಳಬಹುದು. ನೀತಿಗಳನ್ನು ಹೇಳುವ ದೃಷ್ಟಾಂತ, ಉಪಮೆ ತಾತ್ವಿಕ ಕಥೆ, ಮುಂತಾದ ತಾತ್ವಿಕ ಮಾರ್ಗವನ್ನು ಸುಚಿಸುವ ಕಾರ್ಯ ಮಾಡುತ್ತಾರೆ. ಪಂಚತಂತ್ರದ ಕಥೆಗಳು, ಜನಪದ ನೀತಿ ಕಥೆಗಳು ಮಾನವನ ಬದುಕಿಗೆ ದಾರಿದೀಪಗಳಾಗಿವೆ. ಇವುಗಳಲ್ಲಿಯ ಅನೇಕ ಕಥೆಗಳನ್ನು ಗೊಂದಲಿಗರು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳುತ್ತ ಬಂದಿದ್ದಾರೆ. ನೀತಿಯನ್ನು ತಪ್ಪಿದ ಬದುಕು 'ಹಳಿ ತಪ್ಪಿದ ರೈಲಿನಂತೆ' ಎಂಬಂತೆ ಸಂಕಷ್ಟಗಳಿಗೆ ಮೂಲ ಎಂಬುದನ್ನು ತೋರಿಸುತ್ತವೆ. ನೀತಿಯ ಉಗಮವೇ ಧರ್ಮವಾಗಿದೆ. "ಧರ್ಮವನ್ನು ವ್ಯಕ್ತಿಯು, ಪ್ರಜೆಯು ತನ್ನ ಹಿತಕ್ಕೂ ಸಾರ್ವಜನಿಕ ಕ್ಷೇಮಕ್ಕೂ ಹೇಗೆ ತನುಮನದಿಂದ ಸಾಧಿಸಬಹುದು, ನೀತಿಯ ನಡಾವಳಿ ಎನೆಂಬುದನ್ನು ವಿಚಾರ ಮಾಡುವ ಶಾಸ್ತ್ರವೇ ನೀತಿಶಾಸ್ತ್ರ "[೧೬]

ತಾತ್ವಿಕತೆಯ ಮೂಲ ಗುರಿ ಸಂಸ್ಕೃತಿಯನ್ನು ಕಾಪಾಡುವುದಾಗಿದೆ. ತತ್ವದ ನಡವಳಿಯೇ ತಾತ್ವಿಕತೆಯ ಸ್ವರೂಪ. ಈ ತಾತ್ವಿಕತೆಯನ್ನು ವಿಚಾರ ಮಾಡುವ ಹಾಗೂ ಅಧ್ಯಯನ ಮಾಡುವ ಶಾಸ್ತ್ರವೇ ತತ್ವಶಾಸ್ತ್ರವಾಗಿದೆ. ಇದು ಜನಪದ ಮೂಲದಿಂದ ಬೆಳೆದು ಬಂದಿದೆ. ಗೊಂದಲಿಗರು ಈ ತತ್ವವನ್ನು ತಮ್ಮ ಬದುಕಿನೊಂದಿಗೆ ಹೆಣೆದುಕೊಂಡು ತಮ್ಮ ಕಥಾ ಸಂಕೀರ್ಣದಲ್ಲಿ ಈ ತತ್ವಗಳ ರೂಪಗಳನ್ನು ಹೆಣೆಯುತ್ತಾ ಬಂದಿದ್ದಾರೆ. ಗೊಂದಲಿಗರು ಹೇಳುವ ಹಲವಾರು ಕಥೆಗಳು ತಾತ್ವಿಕ ನೆಲೆಗಟ್ಟಿನ ಮೇಲೆ ನಿಂತಿವೆ. ಹಾಗೆಯೇ ಹಲವಾರು ಅನುಭಾವಿಗಳ ಪದಗಳನ್ನು ತಮ್ಮ ಗೊಂದಲ ಪ್ರಸಂಗದಲ್ಲಿ, ಭಿಕ್ಷಾಟನೆಯ ಪ್ರಸಂಗದಲ್ಲಿ ಈ ಪದಗಳನ್ನು ಹಾಡುತ್ತಾರೆ.

### ೫.೪.೨ ಶರಣರ ವಚಗಳು

ಶಿವಶರಣ ವಚನಕಾರರು ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿಯೇ ಕ್ರಾಂತಿಯನ್ನುಂಟುಮಾಡಿದರು. ಶಿವಶರಣರು ತಮ್ಮ ವಚನಗಳ ಮೂಲಕ ಜನರಲ್ಲಿ ಅರಿವು ಮೂಡಿಸುವ ಪ್ರಯತ್ನ ಮಾಡಿದರು. ಅವರ ವಚನಗಳು ನೀತಿಸಾರವನ್ನು ತಿಳಿಸುವ ಅನುಭವಗಳ ಆಗರವಾಗಿವೆ. ಸಾಹಿತ್ಯ ಪೂರ್ವ ಕಾಲದಲ್ಲಿದ್ದ ಸಂಸ್ಕೃತ ಸಾಹಿತ್ಯ ಪಂಡಿತರಿಗೆ ಮಾತ್ರ ಮೀಸಲಾಗಿತ್ತು. ಇದು ಜನಸಾಮಾನ್ಯರನ್ನು ಮುಟ್ಟುತ್ತಿರಲಿಲ್ಲ ಹಾಗೂ ಕೃತಿಗಳನ್ನು ಅರ್ಥೈಸಿಕೊಳ್ಳುವುದು ಕಬ್ಬಿಣದ ಕಡಲೆಯಾಗಿತ್ತು. ಇಂಥಹ ಕಾಲದಲ್ಲಿ ಶ್ರೀ ಸಾಮಾನ್ಯರೇ ರಚಿಸಿ ಅವರೇ ಓದುವಂತಹ ವಚನ ಸಾಹಿತ್ಯ ಸೃಷ್ಟಿಯಾಯಿತು. 'ವಚನ' ಸಾಹಿತ್ಯವನ್ನು ಗದ್ಯದಂತೆ ಓದಲು ಮತ್ತು ಪದ್ಯದಂತೆ ಹಾಡಬಹುದು. ಅನುಭವದಿಂದ ಅನುಭಾವ ಪಡೆದು ಶಿವ ತತ್ವ ಸಾರುವಂತ ವಚನಗಳಾಗಿವೆ. ಶಿವಶರಣರ ವಚನಗಳು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಕ್ರಾಂತಿಯನ್ನೇ ಉಂಟು ಮಾಡಿದವು. ಶರಣರ ವಚನಗಳನ್ನು ಗೊಂದಲಿಗರು ತಮ್ಮ ಕಥೆ, ಹಾಡುಗಳಲ್ಲಿ ಬಳಸಿಕೊಂಡು ಅವುಗಳನ್ನು ಜನಪ್ರಿಯಗೊಳಿಸುವ ಕಾರ್ಯವನ್ನು ಗೊಂದಲಿಗರು ಮಾಡುತ್ತಿದ್ದಾರೆ ಎಂದು ಹೇಳಬಹುದು.

ಶಿವಶರಣರ ಚರಿತ್ರೆಗಳನ್ನು ಗೊಂದಲಿಗರು ತಮ್ಮ ವೃತ್ತಿ ಪರಂಪರೆಯಲ್ಲಿ ಪೋಷಿಸಿ ಕೊಂಡಿದ್ದಾರೆ. ಗೊಂದಲಿಗರು ಶರಣರ ತತ್ವ ಸಿದ್ಧಾಂತಗಳನ್ನು ಜನರಲ್ಲಿ ಮೂಡಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತಿರುವುದು ಕಂಡು ಬರುತ್ತದೆ. ಶರಣರ ಆಚಾರ, ವಿಚಾರ, ನಡೆ ನುಡಿ, ಎಲ್ಲವು ಅವರ ಗೊಂದಲದ ಸಂದರ್ಭದಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಗೊಂದಲಿಗರು ವಚನಗಳನ್ನು ತಮ್ಮದೇ ಆದ ಕಾಯಕದಲ್ಲಿ ಅಳವಡಿಸಿದ್ದಾರೆ. ಗೊಂದಲಿಗರಾದ ದೇವಪ್ಪ ಗುಡಕರ ಅವರು ಹಾಡಿದ ಈ ಕೆಳಗಿನ ವಚನವು ಶರಣರ ನಾಮದೇಯವನ್ನು ಹೇಳುವಂತಿದೆ. ಇದೊಂದು ಸ್ತುತಿಪದ್ಯ ಎಂದು ಹೇಳುತ್ತಾರೆ.

"ಮಾಡುವೆ ಶರಣು ಮಾಡುವೆ ನಮ್ಮ
ಕೂಡಲ ಸಂಗನ ಶರಣರ ಪಾದಕ್ಕೆ ॥ ಪಲ್ಲ ॥
ಮೇದರ ಕೇತಯ್ಯ ಮರೆಮಿಂಡ ದೇವಯ್ಯ
ಆಯ್ದಕ್ಕಿ ಮಾರಯ್ಯ ಅಜಗಣ್ಣಗೆ
ಮೈದುನ ರಾಮಯ್ಯ ಮಡಿವಾಳಮಲುಹರಣ
ಸಾಧಿಸಿದ ಮರುಳಶಂಕರ ಸಿದ್ಧರಾಮಗೆ
ನೆಂಬಣ್ಣ ನಾಗಯ್ಯ ಬೆಂಬಿಡದೆ ಚಾರಮ

ಕಂಬಳಿ ಮರುಳ ಕಕ್ಕಯ್ಯನಿಗೆ
ಎಂಬ ಪ್ರಸಾದದಲಿ ಉದ್ಭವಿಸಿದಾತಗೆ
ಅಂಬಿಗರ ಚೌಡಯ್ಯ ಘನಘಟ್ಟಿವಾಳಿಕೆ “[೧೭]

ಬಸವಣ್ಣನವರ ಹಲವಾರು ವಚನಗಳನ್ನು ಗೊಂದಲಿಗರು ತಮ್ಮ ವೃತ್ತಿಯಲ್ಲಿ ಬಳಸಿಕೊಳ್ಳುತ್ತಿರುವುದು ಕಂಡು ಬರುತ್ತದೆ.

“ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯ
ಇವನಮ್ಮವ ಇವನಮ್ಮವ ಇವನಮ್ಮವನೆಂದೆನಿಸಯ್ಯ
ಕೂಡಲಸಂಗಮದೇವಾ
ನಿಮ್ಮ ಮನೆಯ ಮಗನೆಂದೆನಿಸಯ್ಯ.”[೧೮]

ಗೊಂದಲಿಗರು ಅಕ್ಕಮಹಾದೇವಿ, ಪ್ರಭುದೇವ, ಸಿದ್ಧರಾಮ ಹಾಗೂ ಚೆನ್ನಬಸವಣ್ಣನ ವಚನಗಳನ್ನು ಪ್ರಮುಖವಾಗಿ ಹಾಡುತ್ತಾರೆ. ಹಲವಾರು ಶರಣರ ಚರಿತ್ರೆಗಳನ್ನು ಹೇಳುತ್ತಾರೆ. ಕೊಳೂರು ಕೊಡಗೂಸಿನ ಕಥೆಯನ್ನು ತಮ್ಮ ಅಡ್ಡಕತೆಯಲ್ಲಿ ಹೇಳುತ್ತಾರೆ. ಗೊಂದಲಿಗರ, ಶರಣರ, ವಚನಗಳನ್ನು ಮಾರ್ಪಡಿಸಿಕೊಂಡು ರಾಗಬದ್ಧವಾಗಿ ಹಾಡುವುದರಲ್ಲಿ ನಿಸ್ಸೀಮರು.

“ಹೆಣ್ಣು ಮಾಯೆಯೆಂಬುದು । ಹರಹರೆನದೇವ್ವೈ ।
ಹೆಣ್ಣು ಮಾಯೆಯಲ್ಲ । ಹರ ಹರವನ ದೇವ್ವೈ ।
ಹೊಣ್ಣು ಮಾಯೆಯಲ್ಲ । ಹರ ಹರವನ ಮಹಾದೇವ್ವೈ ।
ಹೊನ್ನು ಮಾಯೆಯೆಂಬರು । ಹರಹರ ಏನ ದೇವ್ವೈ ।
ಹೊನ್ನು ಮಾಯೆಯೆಂಬರು । ಹರ ಹರ ಮಹಾದೇವ್ವೈ ।
ಹೊನ್ನು ಮಾಯೆಯಲ್ಲ । ಹರ ಹರ ಏನದೇವ್ವೈ ।
ಹೊನ್ನು ಮಾಯೆಯಲ್ಲ । ಹರ ಹರ ಮಹಾದೇವ್ವೈ ।
ಮಣ್ಣು ಮಾಯೆಯೆಂಬರು । ಹರ ಹರ ಏನದೇವ್ವೈ ।
ಮಣ್ಣು ಮಾಯೆಯೆಂಬರು । ಹರ ಹರ ಮಹಾದೇವ್ವೈ ।
ಮಣ್ಣು ಮಾಯೆಯಲ್ಲ । ಹರ ಹರ ಏನದೇವ್ವೈ ।
ಮನದ ಮುಂದಣ ಆಸೆಯೆ ಮಾಯೆ
ಕಾಣಾ ಗುಹೇಶ್ವರಾ । ಹರಹರ ಏನದೇವ್ವೈ ।”[೧೯]

ಗೊಂದಲಿಗರು ಶರಣರ ವಚನಗಳನ್ನು ಸುಶ್ರಾವ್ಯವಾಗಿ ಕೇಳುಗರಿಗೆ ಮನಮುಟ್ಟುವಂತೆ ಹಾಡುತ್ತಾರೆ. ಮುಮ್ಮೇಳದವರು ಅವುಗಳ ಭಾವಾರ್ಥಗಳನ್ನು ವರ್ಣಿಸಿದರೆ ಹಿಮ್ಮೇಳದವನು

ಅದಕ್ಕೆ ಸಾಥ್ ನೀಡುತ್ತಾನೆ. ಇದನ್ನು ಗಮನಿಸಿದಾಗ ಗೊಂದಲಿಗರು ಸಮಾಜೋಮುಖಿಯಾದ ಕಾರ್ಯಗಳನ್ನು ಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವುದು ಕಂಡು ಬರುತ್ತದೆ.

**೫.೪.೩ ದಾಸರ ಪದಗಳು**

ಶರಣರಂತೆ ದಾಸರು ಒಂದು ಹೊಸ ಭಾಷಿಕ ಶೈಲಿ ಮತ್ತು ಸಾಹಿತ್ಯವನ್ನು ನೀಡಿ ಕನ್ನಡ ಸಾಹಿತ್ಯವನ್ನು ವಿಸ್ತಾರಗೊಳಿಸಿದ್ದಾರೆ. ಕೃಷ್ಣನ ಆರಾಧಕರಾದ ಇವರು ಹರಿಯ ನಾಮಸ್ಮರಣೆಯಲ್ಲೇ ತಮ್ಮ ಮುಕ್ತಿಯನ್ನು ಕಂಡವರು. "ದಾಸ ಪರಂಪರೆ ೧೫ ನೇ ಶತಮಾನದಿಂದ ೧೮ ನೇ ಶತಮಾನದವರೆಗೆ ಮುಂದುವರೆಯುತ್ತದೆ. ವ್ಯಾಸರಾಯರಿಂದ ಪ್ರಾರಂಭವಾದ ಈ ಸಾಹಿತ್ಯ ದಾಸರೆಂದರೆ ಪುರಂದರ ದಾಸರಯ್ಯ" ಎಂದು ಹಾಡಿ ದಾಸತ್ವಕ್ಕೆ ಪಟ್ಟಕಟ್ಟಿದರು."ಜೀವಗಣ ; ಹರೇರನುಚರಾ : ನಿಚೋಚ್ಚ ಭಾವಂಗತಾ : " ಇದು ಮಾದ್ವದರ್ಶನ ಕಾಣಿಸುವ ಸತ್ಯ. ಆದ್ದರಿಂದ ಎಲ್ಲ ಜೀವಿಗಳೂ ಪರಮಾತ್ಮನ ದಾಸರೇ ಎಂಬ ಮಾತು ಸಿದ್ದವಾಗುತ್ತದೆ."[೨೦]

ಪುರಂದರದಾಸರು ಮತ್ತು ಕನಕದಾಸರು ಇವರಿಬ್ಬರೂ ವ್ಯಾಸರಾಯರ ಶಿಷ್ಯರಾಗಿ ಹರಿದಾಸ ಸಾಹಿತ್ಯವನ್ನು ಅದ್ಭುತವಾಗಿ ಬೆಳೆಸಿದರು. ಭಕ್ತಿ ಕಾವ್ಯದ ಕ್ರಿಯೆಯ ಮುಖ್ಯ ತತ್ವವಾದದ್ದು ಕನ್ನಡದಲ್ಲಿಯೇ ಎಂದು ಹೇಳಬಹುದು. ಗೊಂದಲಿಗರು ಇಂತಹ ತತ್ವ ಪದಗಳನ್ನು ತಮ್ಮ ಹಾಡಿನ ಮೂಲಕ ಜನತೆಗೆ ಸಾರುತ್ತಾರೆ. ಭಕ್ತಿಯೇ ಪ್ರಧಾನವಾದ ಇವರ ವೃತ್ತಿಗೆ ಇದು ಮೆರಗು ನೀಡುತ್ತದೆ. ಇವರು ಪುರಂದರದಾಸರ ಮತ್ತು ಕನಕದಾಸರ ಹಲವಾರು ಪದಗಳನ್ನು ಗೊಂದಲದ ಸಂದರ್ಭದಲ್ಲಿ ಹೇಳುತ್ತಾರೆ. ಕರ್ನಾಟಕದ ಗೊಂದಲಿಗರು ತಮ್ಮ ವೃತ್ತಿಯಲ್ಲಿ ಕೀರ್ತನೆಗಳನ್ನು, ದಾಸರ ಚರಿತ್ರೆಗಳನ್ನು ಅವರ ದೃಷ್ಟಾಂತಗಳನ್ನು ಇನ್ನೂ ಕಾಯ್ದುಕೊಂಡು ಬಂದಿದ್ದಾರೆ. ಆಧುನಿಕ ಯುಗದಲ್ಲಿಯೂ ಮತ ಧರ್ಮಗಳ ಬಗೆಗೆ ಮಾನವನ ರೀತಿ, ನೀತಿಗಳ ಬಗೆಗೆ ಜಾಗ್ರತಿ ಮೂಡಿಸುವಲ್ಲಿ ಹೋರಾಡುತ್ತಿರುವವರಲ್ಲಿ ಗೊಂದಲಿಗರೂ ಒಬ್ಬರು, ಗೊಂದಲಿಗರಿಗೆ ಪುರಂದರದಾಸರು ಕನಕದಾಸರು ಆದರ್ಶಪ್ರಾಯರಾಗಿದ್ದಾರೆ.

**ಪುರಂದರದಾಸರು**

ಪುರಂದರದಾಸರು ಭಕ್ತ-ಭಗವಂತರ ಸಂಬಂಧವನ್ನು ತಾಯಿ-ಮಗುವಿನ ಸಂಬಂಧವಾಗಿ ಕಲ್ಪಿಸಿಕೊಂಡು ವಿಶೇಷವಾಗಿ ಭಕ್ತಿ ಸಾಧನೆ ಮಾಡಿದವರು. ಇಂತಹ ಸಾಧಕರ ಕೀರ್ತಗಳನ್ನು ತಮ್ಮ ವೃತ್ತಿ ಪರಂಪರೆಯಲ್ಲಿ ಅಳವಡಿಸಿಕೊಂಡು ಆ ಸಾಹಿತ್ಯವನ್ನು ಪ್ರಚಾರ ಮಾಡುತ್ತಿರುವವರಲ್ಲಿ ಗೊಂದಲಿಗರೂ ಒಬ್ಬರು, ಗೊಂದಲದ ಸಂದರ್ಭದಲ್ಲಿ ಗೊಂದಲಿಗರು ಬಳಸುವ ದಾಸರ ಪದಗಳು ಈ ಕೆಳಗಿನಂತಿವೆ.

'ಆಚಾರ ವಿಲ್ಲದ ನಾಲಿಗೆ ನಿನ್ನ
ನೀಚ ಬುದ್ಧಿಯ ಬಿಡು ನಾಲಿಗೆ

ವಿಚಾರವಿಲ್ಲದೆ ಪರರ ದೋಷಿಪುದಕ್ಕೆ
ಚಾಚಿಕೊಂಡಿರುವಂಥ ನಾಲಿಗೆ'

ಗೊಂದಲಿಗರ ವೆಂಕಪ್ಪ ಸುಗತೇಕರ ಅವರು ಹೇಳಿದ ಪತಿವೃತಾ ಚಂದ್ರಲೇಖ ಕತೆಯಲ್ಲಿ ಮಾತು ತಪ್ಪಬಾರದು ಎಂದು ಹೇಳುವ ಸಂದರ್ಭದಲ್ಲಿ ನಾಲಿಗೆಗೆ ಸಂಬಂಧಿಸಿದ ಒಂದು ದಾಸರ ಈ ಪದ್ಯ ಹೇಳುತ್ತಾರೆ. ಗೊಂದಲಿಗರು ಕಥಾ ಸಾಹಿತ್ಯ ಹಾಗೂ ಸಾಂಬಾಳದಲ್ಲಿ ಕರ್ನಾಟಕ ಸಂಗೀತ ಮತ್ತು ದಾಸರ ಕೀರ್ತನೆಗಳನ್ನು ಹಿಡಿದಿಟ್ಟಿದ್ದಾರೆ.

'ಆದದ್ದೆಲ್ಲ ಒಳತೆ ಆಯಿತು ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು.'
'ಆರು ಬದುಕಿದರಯ್ಯ ಹರಿನಿನ್ನ ನಂಬಿ
ತೋರು ಈ ಜಗದೊಳಗೆ ಒಬ್ಬರನು ಕಾಣೆ.'
'ಆರು ಹಿತವರು ನಿನಗೆ
ಮೂರು ಮಂದಿಯೊಳಗೆ
ನಾರಿಯೋ, ಧಾರುಣಿಯೋ
ಬಲು ಧನದ ಸಿರಿಯೋ'
'ಜಾಲಿಯ ಮರದಂತೆ ಧರೆಯೊಳು ದುರ್ಜನರು
ಮೂಲಾಗ್ರಿ ಪರಿಯಂತ ಮುಳ್ಳು ಕೂಡಿಪ್ಪಂತೆ'
'ಗುಮ್ಮನ ಕರೆದಿರೆ ' ಅಮ್ಮ ನೀನು ಗುಮ್ಮನ ಕರೆಯದಿರೆ'
'ನಾ ಡೊಂಕಾದರೇನೋ ನಾಮ ಡೊಂಕೆ ವಿಠಲ'
'ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲಿ ಬೇಡಿ ಹುಚ್ಚಪ್ಪಗಳಿರಾ."[೨೧]

**ಕನಕದಾಸರು**

'ಕನಕದಾಸರು ಕ್ರಾಂತಿಕಾರಕ ಮನೋಭಾವದ ಕವಿಯೆಂದೆ ಪ್ರಖ್ಯಾತ ಹೊಂದಿದವರು. ಚಿಕ್ಕಂದಿನಲ್ಲಿಯೇ ತಂದೆತಾಯಿಯನ್ನು ಕಳೆದುಕೊಂಡ ಇವರು ಪಾಳಿಗಾರಿಕೆಯನ್ನು ನಡೆಸುತ್ತ ಬಂದವರು. ತಮ್ಮ ಕಾವ್ಯಗಳನ್ನು ರಚಿಸುವ ಮೂಲಕ ಹರಿದಾಸರೆನಿಸಿಕೊಂಡವರು, ಆದಿಕೇಶವ ಎಂಬ ಅಂಕಿತದಿಂದ ಇವರ ಕೀರ್ತನೆಗಳು ದೊರಕಿವೆ. ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಸೂಚಿಸುವ ಇವರ ಕೀರ್ತನೆಗಳನ್ನು ಗೊಂದಲಿಗರು ತಮ್ಮ ಗೊಂದಲದ ವೃತ್ತಿಯಲ್ಲಿ ಬಳಸುತ್ತಿರುವುದು ಕಂಡು ಬರುತ್ತದೆ. ಜೊತೆಗೆ ಕನಕದಾಸರ ಜೀವನ ಚರಿತ್ರೆಯನ್ನು ಸಂದರ್ಭಾನುಸಾರವಾಗಿ ಹೇಳುತ್ತಾರೆ.

ಮನುಷ್ಯ ಕುಲವು ತಾನೊಂದೇ ಎನ್ನುವಂತೆ ಕುಲ, ಜಾತಿ, ಧರ್ಮಗಳಿಗೆ ಹೊರಾಡದಿರಿ ಮನುಷ್ಯ ಜಾತಿ ಒಂದೇ ಎಂದು ಹೇಳಲು ಹೊರಟು ಕುಲ ಎಂದರೇನು ? ಕುಲದ ನೆಲೆ ನಿಮಗೆ ತಿಳಿದಿದೆಯೇ? ಎಂದು ಸಮಾಜಕ್ಕೆ ಸಂಕೀರ್ಣತೆಯ ಸವಾಲೆಸೆಯುತ್ತಾರೆ.

"ಕುಲಕುಲಕುಲವೆನ್ನುತಿಹರೋ
ಕುಲಯಾವುದು ಸತ್ಯ ಸಜ್ಜನರಿಗೆ ॥ ಪ ॥
ಕೆಸರದೊಳು ತಾವರೆ ಪುಟ್ಟಲು
ಅದು ತಂದು ಬಿಸಜನಾಗಪಿಸಲಿಲ್ಲವೇ
ಹಾಸುವಿನ ಮಾಂಸದೊಳುತ್ಪತ್ತಿ ಕ್ಷೀರವ
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೇ"

ಕೆಸರಿನಲ್ಲಿ ಹುಟ್ಟಿದ ಕಮಲದ ಹೂವು ದೇವರ ಮುಡಿಏರುವುದಿಲ್ಲವೆ? ಎಂಬ ಪ್ರಶ್ನೆಯೊಂದಿಗೆ ನಾವೇಲ್ಲ ಒಂದೆಂಬ ಸಂದೇಶವನ್ನು ಸಾರುತ್ತಾರೆ. ಗೊಂದಲಿಗರು ಗೊಂದಲದ ಪ್ರದರ್ಶನದ ಸಮಯದಲ್ಲಿ ಹಾಡುತ್ತ ಮಧ್ಯದಲ್ಲಿ ಹಾಡಿನ ವಿವರಣೆ ನೀಡಿ ಅದರಲ್ಲಿನ ತತ್ವಗಳನ್ನು ಬಿಡಿಸಿ ಹೇಳುತ್ತಾರೆ. ಗೊಂದಲಿಗರು ಗೊಂದಲದ ಸಂದರ್ಭದಲ್ಲಿ ಬಳಸುವ ಕನಕದಾಸರ ಪದ್ಯಗಳನ್ನು ಈ ಕೆಳಗೆ ನೀಡಲಾಗಿದೆ.

'ತಲ್ಲಣಿಸದಿರುಕಂಡ್ಯ ತಾಳು ಮನವೆ ಸ್ವಾಮಿ
ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ'
'ಕಷ್ಟಪಟ್ಟರೂ ಇಲ್ಲಿ ಕಳವಳಿಸಿದರಿಲ್ಲ
ಭ್ರಷ್ಟ ಮಾನವ ಹಣೆಯ ಬರೆಹವಲ್ಲದೆ ಇಲ್ಲ'
'ಆರು ಬಾಳಿದರೇನು ? ಆರು ಬದುಕಿದರೇನು ?
ನಾರಾಯಣದ ಸ್ಮರಣೆ ನಮಗಿಲ್ಲದನಕ'
'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ
ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೇ'
ನಾನೇನು ಬಲ್ಲೆ ನಿಮ್ಮ ಮಹಿಮೆಗಳ ಮಾಧವ'
'ಏನೆಂದು ಕೊಂಡಾಡಿ ಸ್ತುತಿಸುವೆನೋ ದೇವ

ಪುರಂದರದಾಸರ ಹಾಗೂ ಕನಕದಾಸರ ಕೀರ್ತನೆಗಳನ್ನು ಗಮನಿಸಿದಾಗ ಅವರ ಪದ್ಯಗಳಲ್ಲಿ ಭಕ್ತಿ, ವೈರಾಗ್ಯ, ದೇವ-ಭಕ್ತನ ಸಂಬಂಧ, ತಾಯಿಯ ಮಮತೆ, ಹಲವಾರು ವಿಷಯಗಳ ಹಾಗೂ ಈ ಪ್ರಪಂಚದ ಮೋಹ ಜನಕ ವಸ್ತುಗಳಾದ ಹೊನ್ನು, ಹೆಣ್ಣು,

ಮಣ್ಣುಗಳನ್ನು ದೂರವಿರಿಸಿ, ಎಚ್ಚರಿಕೆಯಿಂದ ವ್ಯವಹರಿಸಬೇಕು ಎಂಬ ತಿಳುವಳಿಕೆಯನ್ನು ಹೇಳುತ್ತವೆ. ಎಚ್ಚರಿಕೆ ಮನವೆ ಹಾಗೂ ಹೆಣ್ಣು ಮಣ್ಣಾಸೆ ವ್ಯರ್ಥ ಎನ್ನುವ ಕನಕದಾಸರು, ಹರಿದಾಸರ ಆಚಾರ ಮಾಧ್ವತಮತ ಸೀಮಿತವಾದರೂ ವಿಚಾರ ವಿಶಾಲವಾದದು. ದಾಸರು ತಮ್ಮ ಕೀರ್ತನೆಗಳ ಮೂಲಕ ಸತ್ಯ, ಧರ್ಮಾರ್ಥ ಮೌಲ್ಯಗಳನ್ನು ಎತ್ತಿ ಹಿಡಿಯುವುದರೊಂದಿಗೆ, ಸ್ನಾನ, ಜಪ, ತಪ, ವಿವಿಧ ಆಚರಣೆಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. 'ಬಟ್ಟೆಯನ್ನು ಒಣಗಿಸಿ ಉಟ್ಟರೆ ಮಡಿಯಲ್ಲ, ಹೊಟ್ಟೆಯೊಳಗಣ ಕಾಮಕ್ರೋಧ ಬಿಟ್ಟರೆ ಅದು ಮಡಿಯೋ'? ಎಂದು ಪುರಂದರ ದಾಸರು ಪ್ರಶ್ನಿಸುವರು.

ಹರಿದಾಸರು ಹೇಳಿದ ಮಾತುಗಳು ಅಂದಿನಂತೆ ಇಂದು ಸಹ ಅರ್ಥಪೂರ್ಣವಾಗಿವೆ. ಇಂದು ಸಮಾಜದಲ್ಲಿ ನಡೆಯುತ್ತಿರುವ ಅವ್ಯವಹಾರ ಅನ್ಯಾಯ, ಚಾಕುಚೂರಿಗಳ ಸಂಸ್ಕೃತಿ, ಗುರು-ಶಿಷ್ಯರ ಸಂಬಂಧಗಳು, ಹೆಣ್ಣುಮಕ್ಕಳನ್ನು ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿ ಕೊಲ್ಲುವ, ತತ್ವ ರಹಿತ ರಾಜಕೀಯ, ಹೀಗೆ ಪ್ರತಿಯೊಂದು ಕ್ಷೇತ್ರದಲ್ಲಿ ಮಾನವೀಯತೆ ಎಂಬುದು ಕಂಡು ಬರುವುದಿಲ್ಲ. ನಾಡಿನಾದ್ಯಂತ ಅನೇಕ ಸಮಸ್ಯೆಗಳು ತಾಂಡವವಾಡುತ್ತಿವೆ. ಇದಕ್ಕೆಲ್ಲ ದಾಸರು ಈ ಹಿಂದೆಯೇ ಪರಿಹಾರಗಳನ್ನು ಸೂಚಿಸಿದ್ದಾರೆ. ಮನುಷ್ಯ ಮನುಷ್ಯನಾಗಿ ಬಾಳುವ ಬಗೆಯನ್ನು ತೋರಿಸಿಕೊಟ್ಟಿದ್ದಾರೆ. ಗೊಂದಲಿಗರು ದಾಸರು ಹಾಕಿಕೊಟ್ಟ ಹಾದಿಯಲ್ಲಿ ನಡೆಯುತ್ತ ನೀತಿಯನ್ನು ಸಾರುತ್ತ ತಮ್ಮ ಗೊಂದಲದ ಕಾರ್ಯದ ಮೂಲಕ ಸಮಾಜ ಸುಧಾರಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಎಂದು ಹೇಳಿದರೆ ತಪ್ಪಾಗಲಾರದು. ಹೀಗಾಗಿ ಗೊಂದಲಿಗರು ಹರಿದಾಸರ ಕೀರ್ತನೆಗಳನ್ನು ಬಹಳಷ್ಟು ನಂಬಿಕೊಂಡು ತಮ್ಮ ಪದ್ಯ ಹಾಗೂ ಕಥಾ ಸಾಹಿತ್ಯದಲ್ಲಿ ಅವುಗಳನ್ನು ಬಳಸಿಕೊಂಡಿದ್ದಾರೆ.' ದಾಸರ ಅಂದಿನ ಕಾಯಕವನ್ನು ಇಂದು ಗೊಂದಲಿಗರು ನಿರ್ವಹಿಸುತ್ತಿದ್ದಾರೆಂದು ಹೇಳಬಹುದು. ನೀತಿ ತತ್ವಗಳನ್ನು ತಿಳಿಸುವುದೇ ಅವರ ಉದ್ದೇಶವಾಗಿದೆ. ಗೊಂದಲಿಗರು ತಮ್ಮ ಹಾಡು ಕಥೆಗಳಲ್ಲಿ ಸಾಮಾಜಿಕ ವಿಡಂಬಣೆಯನ್ನು ಮಾಡುತ್ತಾರೆ. ಇಂದು ನಡೆಯುತ್ತಿರುವ ಅನ್ಯಾಯಗಳ ಬಗ್ಗೆ ಎಚ್ಚರಿಸುತ್ತಾರೆ.

> ತಿದ್ದಿಕೊಳ್ರಿ ನೀವು ಮೊದಲ ಇದ್ದದ್ದ ಇದ್ದಂಗ ಹೇಳತಿನ್ರಿ
> ಪಾಪ ಹೆಚ್ಚಾಗಿ ಧರ್ಮ ಉಳಿದಿಲ್ಲ
> ಕಲತವ್ರಿಗಿ ನಾಚಿಕಿಲ್ಲರಿ
> ಕಲತವ್ರಿಗಿ ಬುದ್ದಿಯಿಲ್ಲ । ಕಲಿಸಿದವ್ರಿಗೆ ಬೆಲೆ ಇಲ್ಲ
> ಪತಿವ್ರತಾ ಹೆಣಮಗಳಿಗಿ ಕೂಳಸಿಗಲಿಲ್ಲ "[೨೨]

### ೫.೪.೪ ಸರ್ವಜ್ಞನ ತ್ರಿಪದಿಗಳು

ಗೊಂದಲಿಗರು ಹೇಳುವ ಕಥೆ ಹಾಡುಗಳಲ್ಲಿ ಮತ್ತು ಅವರು ಬಳಸುವ ನುಡಿಗಟ್ಟು ಗಾದೆಮಾತುಗಳಲ್ಲಿ ಸರ್ವಜ್ಞನ ತ್ರಿಪದಿಗಳ ಬಳಕೆ ಸಾಮಾನ್ಯವಾಗಿ ಕಂಡು ಬರುತ್ತವೆ. ಗೊಂದಲಿಗರು

ಹೇಳುವ ಕಥೆ, ಹಾಡುಗಳ, ಹೆಚ್ಚು ಆಕರ್ಷಣೀಯವಾಗಿರಲು ಹಾಗೂ ಜನರನ್ನು ಮಂತ್ರಮುಗ್ಧರನ್ನಾಗಿ ಮಾಡಲು ಸರ್ವಜ್ಞನ ತ್ರಿಪದಿಗಳು ಪ್ರಮುಖ ಪಾತ್ರವಹಿಸಿವೆ. ಸರ್ವಜ್ಞನ ತ್ರಿಪದಿಗಳನ್ನು ಗೊಂದಲಿಗರು ತಮ್ಮ ಕಥೆಗಳಲ್ಲಿ ಸಂದರ್ಭಕ್ಕೆ ಅನುಸಾರವಾಗಿ ಹೆಚ್ಚಾಗಿ ಬಳಸುತ್ತಿರುವುದು ಕಂಡು ಬರುತ್ತದೆ.

ಗೊಂದಲಿಗರ ವೆಂಕಪ್ಪ ಸುಗತೆಕರ ಅವರು 'ಪತಿವೃತಾ ಶಿರೋಮಣಿ ಚಂದ್ರಲೇಖ' ಕಥೆಯಲ್ಲಿ, ದೇವಲೋಕದಿಂದ ಬಂದ ಪಕ್ಷಿಗಳು ಮುತ್ತು, ರತ್ನ ಮೇಯುವುದನ್ನು ಕಂಡ ಚಂದ್ರಲೇಖ ಬಂದು ರಾಜನಿಗೆ ಹೇಳುತ್ತಾಳೆ. ಆಗ ರಾಜನು ಮಂತ್ರಿಗಳ ಅಚಾತುರ್ಯದಿಂದ ಅದು ಅಸತ್ಯವೆಂದು ತಿಳಿದು ಚಂದ್ರಲೇಖಳನ್ನು ಕಾಡಿಗೆ ಅಟ್ಟುತ್ತಾನೆ. ಕಥಾಸಾರವನ್ನು ತಿಳಿಸುವ ಸಂದರ್ಭದಲ್ಲಿ ಗೊಂದಲಿಗರು ಸರ್ವಜ್ಞನ ಈ ತ್ರಿಪದಿಯನ್ನು ಹೇಳುತ್ತಾನೆ.

'ಲೇಸಪ್ಪ ಸತಿಯೊಡನೆ, ದೋಷಮರಸುವನಿಗೆ ।
ಕಾಸಿದ ಹಾಲು ನೊಣಮುಟ್ಟಲದ ನಾರು ।
ಸೋಸಿತೆಗೆದಿಹರು ಸರ್ವಜ್ಞ'[೨೩]

ಎಂದು ಒಳ್ಳೆಯ ಹೆಂಡತಿಯಲ್ಲಿ ದೋಷವನ್ನು ಹುಡುಕುವವನು ಮುರ್ಖನು ಎಂದು ತ್ರಿಪದಿಯ ಅರ್ಥ ತಿಳಿಸುತ್ತಾ ಜನರಿಗೆ ನೀತಿಬೋಧನೆ ಮಾಡುತ್ತಾರೆ.

'ಮಕ್ಕಳಿಲ್ಲದ ಮನೆಯು ಪಕ್ಷಿಯಿಲ್ಲದ ವನವು
ದಿಕ್ಕಿಲ್ಲದವನ ಸಂಸಾರ ಕಳನು ಮನೆ ।
ಹೊಕ್ಕು ಹೋದಂತೆ ಸರ್ವಜ್ಞ.'[೨೪]

ಎಂದು ಮಕ್ಕಳ ಫಲದ ಬಗ್ಗೆ ಹಾಗು ಸಂತಾನದ ಮಹತ್ವವನ್ನು ಕುರಿತು ಸಂಸಾರದ ಪರಿಪೂರ್ಣತೆಗೆ ಸಂತಾನ ತುಂಬಾ ಅವಶ್ಯ ಎಂಬುದನ್ನು ಗೊಂದಲಿಗರು ತಮ್ಮ ಕಥನಗಳ ಜೊತೆಗೆ ಸರ್ವಜ್ಞನ ತ್ರಿಪದಿಗಳನ್ನು ಉದಾಹರಿಸುತ್ತಾರೆ.

ಹೆಣ್ಣಿನಿಂದಲೆ ಇಹವು ಹೆಣ್ಣಿನಿಂದಲೆ ಪರವು
ಹೆಣ್ಣಿನಿಂದಲೆ ಸಕಲ ಸಂಪದವು, ಹೆಣ್ಣೊಲ್ಲ ।
ದಣ್ಣಗಳು ಯಾರು ಸರ್ವಜ್ಞ,

ಸ್ತ್ರೀಯಳನ್ನು ಬಿಟ್ಟು ಯಾವುದು ಇಲ್ಲ ಸರ್ವಸಂಗತಿಗಳಲ್ಲಿ ಸ್ತ್ರೀಯಳೇ ಅಗ್ರಗಣ್ಯಳು ಎಂದು ಸ್ತ್ರೀಯಳ ಮಹತ್ವವನ್ನು ಸರ್ವಜ್ಞನ ತ್ರಿಪದಿಗಳನ್ನು ಬಳಸಿ ಗೊಂದಲಿಗರು ತಮ್ಮ ಕಥನಗಳ ಮೂಲಕ ಸಂದರ್ಭನುಸಾರವಾಗಿ ವ್ಯಕ್ತಪಡಿಸುತ್ತಾರೆ.

"ಅನ್ನದೇವರ ಮುಂದೆ ಇನ್ನು ದೇವರು ಉಂಟೆ
ಅನ್ನವುಂಟಾದರುಣಲುಂಟು, ಜಗದೊಳಗೆ
ಅನ್ನವೇ ದೈವ ಸರ್ವಜ್ಞ "[೨೫]

'ಶಿಲಾವತಿ ಕಥೆ'ಯಲ್ಲಿ ತನ್ನ ಪತಿಯನ್ನು ಹುಡುಕುವ ಸಲುವಾಗಿ ಅನ್ನ ಛತ್ರವನ್ನು ಕಟ್ಟಿಸುತ್ತಾಳೆ. ಅನ್ನದೇವರೆ ಜಗತ್ತಿನಲ್ಲಿ ಎಲ್ಲ ಜೀವಿಗಳ ಪ್ರಾಣರಕ್ಷಕ ಎಂಬ ನೈಜ ವಾಣಿಯನ್ನು ತಿಳಿಸಿದ್ದಾರೆ."ಅನ್ನಂ ಬ್ರಹ್ಮ" ಎಂಬ ಮಾತೊಂದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಸರ್ವಜ್ಞನ ಹಲವಾರು ತ್ರಿಪದಿಗಳನ್ನು ನೋಡಿದಾಗ ಗೊಂದಲಿಗರು ಭಾವ ತುಂಬಿ ಹೇಳುವ ಸರ್ವಜ್ಞ ವಚನಗಳು ಸಮಾಜದ ಪ್ರತಿಯೊಂದು ರಂಗಕ್ಕೂ ತಟ್ಟಿವೆ. ನೀತಿ, ಅನೀತಿ, ವೈರಾಗ್ಯ, ಸಂಸಾರ, ಸತಿ, ಪತಿ, ಪೂಜೆ ಪುರಸ್ಕಾರ, ರಾಜ, ಒಡೆಯ, ಅಹಂಕಾರ, ದಬ್ಬಾಳಿಕೆ, ಗೊಡ್ಡು ಸಂಪ್ರದಾಯ ಮುಂತಾದ ವಿಷಯಗಳನ್ನು ಕುರಿತು ಅವುಗಳನ್ನು ಟೀಕಿಸುವ ರೀತಿಯಲ್ಲಿ ಸರ್ವಜ್ಞನು ತನ್ನ ವಚನಗಳ ತಳುಹನ್ನು ಹರವಿದ್ದಾನೆ. ಗೊಂದಲಿಗರು ಬಳಸುವ ನುಡಿ ಹಾಡುಗಳಲ್ಲಿ ಸರ್ವಜ್ಞನ ವಚನಗಳನ್ನು ಬಳಸುವುದು ಸರ್ವೇ ಸಾಮಾನ್ಯವಾಗಿದೆ. ಇವು ಅವರ ಕಥೆ ಹಾಡುಗಳಿಗೆ ಪುಷ್ಟಿಕೊಡುತ್ತವೆ.

### ೫.೪.೫ ಶಿಶುನಾಳ ಶರೀಫ್‌ರ ಪದ್ಯಗಳು.

ಜನಪದ ಹಾಡುಗಳನ್ನು ನೆನೆಯುತ್ತ ಹೊದಂತೆ ನೆನಪಾಗುವುದು ಶಿಶುನಾಳ ಶರೀಫರ ತತ್ವ ಪದಗಳು ಜನಪದ ಕಲಾವಿದರಿಗೆ ಭಾವಸ್ಫೂರ್ತಿ, ಮನಸ್ಫೂರ್ತಿ ನೀಡುತ್ತವೆ. ಶರೀಫರ ಹಾಡುಗಳಲ್ಲಿ ಸಹಜ, ಸುಂದರ ಹಾಗೂ ವಾಸ್ತವ ದರ್ಶನವಿರುವ ಈ ಪದ್ಯಗಳು ಜನಸಾಮಾನ್ಯರ ನಾಲಿಗೆ ಮೇಲೆ ಸಹಜವಾಗಿಯೇ ರಾಗ ಸಂಯೋಜನೆ ಗೊಂಡಿವೆ. ಇಂತಹ ಶಿಶುನಾಳ ಶರೀಫರ ಪದಗಳನ್ನು ಗೊಂದಲಿಗರು ತಮ್ಮ ಕಥನ ಕಾವ್ಯಗಳಲ್ಲಿ ಸ್ವಾರಸ್ಯಕರವಾಗಿ ಬಳಸಿದ್ದಾರೆ. "ತೇರು ಸಾಗುತೈತೆ ತಂಗೀ ನೋಡಲಿಕ್ಕೆ ಹೋಗಾನು ಬಾ...' ಎಂಬ ಪದವನ್ನು ಮಾಹಾಸತಿ ಶಿವಲೋಚನಾ ಕಥೆಯಲ್ಲಿ ಶಿವಲೋಚನಳ ಶವವನ್ನು ಸಾಗಿಸುತ್ತಿದ್ದಾಗ ಹೇಳುತ್ತಾರೆ. "ಹಣೆಗೆ ಬಂಗಾರ ಸಾಮಾನು, ತಲಿಮ್ಯಾಲ ಮುತ್ತಿನ ದಂಡಿ, ತಾಯಿಗೆ ತೊಗೊಂಡು ತೇರು ಎಳೆದ್ಹಂಗ ಜಾತ್ರಿ ನಡದೈತಿ"[೨೬] ಎಂದು ಗೊಂದಲಿಗರು ಹಾಡುತ್ತಾರೆ.

ಶರೀಫರ ಪದಗಳು ತತ್ವದ ತಳಹದಿಯ ಮೇಲೆ ಆಧ್ಯಾತ್ಮವನ್ನು ಸಾರುವ ವಿಶಿಷ್ಟ ಪದಗಳಾಗಿವೆ. ಈ ಪದಗಳು ಈಗಾಗಲೇ ಅಚ್ಚಾದ, ಮುದ್ರಣವಾದ ಪದಗಳೇ ಆಗಿವೆ. ಗೊಂದಲಿಗರು ತಮ್ಮ ಕಥೆಯ ಜೊತೆಗೆ ಇಂಥಹ ಹಲವಾರು ನೀತಿಪರವಾದ ಪದಗಳನ್ನು ಬಳಸುತ್ತಾರೆ. 'ಅಳಬ್ಯಾಡ ತಂಗಿ ಅಳಬ್ಯಾಡ, ನಿನ್ನ ಕಳುಹ ಬಂದವರಿಲ್ಲಿ ಉಳುಹಿಕೊಂಬುವರಿಲ್ಲ...'[೨೭] ಎಂಬ ಪದವನ್ನು ಮಹಾಸತಿ ಶಿವಲೋಚನ ಕಥೆಯಲ್ಲಿ ಶಿವಲೋಚನಳನ್ನು ಸುಳ್ಳು ಕಾಗದ ಬರೆದು ಮದುವೆ ಮಾಡಿಕೊಂಡು ಬಂದಿದ್ದರಿಂದ ,ತವರು ಮನಿ ಎರುವಾಯಿತೆಂದು ಶಿವಲೋಚನಳು ಗೋಳಾಡುತ್ತಿರುವಾಗ ಮಂತ್ರಿಯು, ನಿನಗೆ ಉಳಿದಿದ್ದು ಗಂಡನ ಮನೆಯೊಂದೇ ಎಂದು ಹೇಳುವಾಗ ಗೊಂದಲಿಗರ ಕಲಾವಿದರು ಈ ಪದ ಹಾಡುತ್ತಾರೆ. ಇಂಥಹ ಪದಗಳು ಕಥೆ ಕೇಳಲು ಕುಳಿತ ಹೆಣ್ಣು ಮಕ್ಕಳ ಮನಸ್ಸಿಗೆ ಬದುಕಿನ ತತ್ವವನ್ನು ತಿಳಿಸಿ ಉತ್ಸಾಹವನ್ನು

ತುಂಬುತ್ತವೆ. "ಶಿವಲೋಚನಳ ಶವವನ್ನು ರಥದಲ್ಲಿ ಸಾಗಿಸುತ್ತ ಲೇಸಿ ರಂಬಾವತಿ ಮನೆಯ ಮುಂದೆ ಬಂದು ನೀಲಕುಮಾರನನ್ನು ಕರೆದರೂ ಆತ ಬರದೆ ಇದ್ದಾಗ ಶಿವಲೋಚನಳ ಕುರಿತು

'ಹುಟ್ಟಿದ್ದು ಹೊಲಿ ಮನಿ
ಬಿಟ್ಟೊಂಟೆ ತಾಯಿಮನಿ,
ಎಷ್ಟಿದ್ದರೇನು ಇದು ಖಾಲಿಮನಿ..."[೨೮]

ಎಂದು ಭಾವಪೂರ್ಣವಾಗಿ ಹಾಡುತ್ತಾರೆ. ಹೀಗೆ ಗೊಂದಲಿಗರು ನೀತಿಪರವಾದ ಸಂಗತಿಗಳನ್ನು ಜನರ ಮನದಾಳಕ್ಕೆ ಮುಟ್ಟುವಂತೆ ಮಾಡುತ್ತಾರೆ. 'ಕೋಡಗನ ಕೋಳಿ ನುಂಗಿತ ನೋಡವ್ವ ತಂಗಿ...' ಪತಿವೃತಾ ಶಿರೊಮಣಿ ಚಂದ್ರಲೇಖ ಕಥೆಯಲ್ಲಿ ಮಾಯೆಯ ಬಗ್ಗೆ ಹೇಳುವಾಗ ಗೊಂದಲಿಗರ ವೆಂಕಪ್ಪ ಸುಗತೇಕರವರು ಶಿಶುನಾಳ ಶರೀಫರ ಈ ಪದ್ಯವನ್ನು ಹೇಳುತ್ತಾರೆ. "ಮರುಳ ಮಾಡುವ ಮಾಯೆಯು ಹರಿ ಬ್ರಹ್ಮಾದಿಗಳನ್ನು ಬಿಟ್ಟಿಲ್ಲ" ಎಂದು ಹೇಳುವಲ್ಲಿ ಮಾಯೆಯ ಮಹತ್ವವನ್ನು ತಿಳಿಸುತ್ತಾರೆ.

ಶರೀಫರ ಹಲವಾರು ಪದಗಳನ್ನು ನೋಡಿದಾಗ ಪ್ರತಿಯೊಂದು ಪದಗಳಲ್ಲಿ ನೀತಿ, ತತ್ವ, ವೈಶಿಷ್ಟತೆಗಳು ಕಂಡು ಬರುತ್ತವೆ. ನೊಂದ ಮನಕ್ಕೆ ಸಾಂತ್ವಾನ ನೀಡುವುದು, ಅಹಂಕಾರದ ಮನಕ್ಕೆ ಬುದ್ಧಿ ಹೇಳುವುದು, ಸತ್ವ ತುಂಬಿದ ಬದುಕನ್ನು ಕೊಡುವ ಅಮೃತ ಚಿಲುಮೆಗಳಾಗಿವೆ.

ಗೊಂದಲಿಗರು ಶರೀಫರ ಪದಗಳಲ್ಲದೇ, ಕಬೀರರ ಭಜನೆಗಳನ್ನು ಅಂದರೆ ಕಬೀರ ದೋಹೆಗಳನ್ನು ಹೇಳುತ್ತಾರೆ. "ಅಜೀ ಕಹೇ ಪ್ರಭೂ ಏಕಬಾತ್ ಸಬ್ ದಿನ್ ಕಹೇ ಪ್ರಭು ಏಕಬಾತ್"[೨೯] ತಾತ್ವಿಕ ನೆಲೆಯನ್ನು ಕಂಡುಕೊಂಡ ತತ್ವಪದಕಾರರು ವ್ಯಕ್ತಿಗತವಾಗಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎಂದು ಧೃಡವಾಗಿ ನಂಬಿದವರಾಗಿದ್ದರು. ಹಲವಾರು ತತ್ವಪದಕಾರರು ಲೌಖಿಕ ಕಟ್ಟುಪಾಡುಗಳನ್ನು ಹರಿದೊಗೆದು, ಸಂಸಾರದಿಂದಲೇ ಜ್ಞಾನವನ್ನು ಪಡೆದು ಅನುಭವಗಳನ್ನು ಅನುಭವಿಸಿ ಮುಂದೆ ಅನುಭಾವಿಗಳಾಗಿ ಲೋಕದಲ್ಲಿ ಪ್ರಸಿದ್ಧಿ ಹೊಂದಿದ್ದಾರೆ.

**೫.೫ ನೀತಿಪದಗಳು.**

ಮನುಷ್ಯರಿಗೆ ತಿಳುವಳಿಕೆಯನ್ನು ನೀಡುವ, ಸನ್ಮಾರ್ಗದ ಕಡೆಗೆ ದಾರಿ ತೋರುವ ಮನುಷ್ಯನ ವೈಚಾರಿಕತೆಯನ್ನು ಓರೆಗೆ ಹಚ್ಚುವಂತಹ ನೀತಿ ಪದ್ಯಗಳನ್ನು ಗೊಂದಲಿಗರು ತಮ್ಮ ಕಥನಗಳಲ್ಲಿ ಬಳಸಿಕೊಳ್ಳುತ್ತಾ ಬಂದಿದ್ದಾರೆ. ನೀತಿಪದಗಳಲ್ಲಿ ಭಕ್ತಿ, ಹಾಗೂ ಲೌಕಿಕ ವಿಷಯಗಳನ್ನೇ ಹೆಚ್ಚಾಗಿ ಬಳಸಿಕೊಂಡಿದ್ದಾರೆ. ನೀತಿ ಹೇಳುವ ವಿಡಂಬನಾತ್ಮಕ ಪದ್ಯಗಳನ್ನು ಇವರು ಬಳಸುವುದು ಕಂಡು ಬರುತ್ತದೆ. ನೀತಿ ಪದಗಳನ್ನು ಎರಡು ಭಾಗಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

೧. ಆಧ್ಯಾತ್ಮಕ ತತ್ವ ಪದಗಳು.

೨. ಗರತಿಯ ನೀತಿ ಪದಗಳು.

**೫.೫.೧ ಆಧ್ಯಾತ್ಮಿಕ ನೀತಿ ಪದಗಳು.**

ಗೊಂದಲಿಗರು ಸಾಮಾನ್ಯವಾಗಿ ಕಥೆಯನ್ನು ಹೇಳುವಾಗ ನಡುನಡುವೆ ಹಲವಾರು ತತ್ವಪದಗಳನ್ನು ನೀತಿಪದಗಳನ್ನು ಹೇಳುತ್ತಾರೆ. ಗೊಂದಲ ನೋಡಲು ಆಗಮಿಸಿದ ಜನರಿಗೆ ಸೂಕ್ಷ್ಮವಾಗಿ ಮನಮುಟ್ಟುವಂತೆ ನೀತಿ ಪದಗಳನ್ನು ಹೇಳುತ್ತಾರೆ. ಮತ್ತು ಅವರನ್ನು ಜಾಗ್ರತಗೊಳಿಸಲು ಪ್ರಯತ್ನ ಮಾಡುವುದು ಕಂಡು ಬರುತ್ತದೆ. ಉದಾಹರಣೆಗೆ ನಾಲಿಗೆ ಎಂಬುದರ ಬಗ್ಗೆ ಗೊಂದಲಿಗರು ಹಾಡುವ ಈ ಕೆಳಗಿನ ಪದ್ಯವನ್ನು ನೋಡಬಹುದು.

"ಸುಮ್ಮನ ಇರು ಕಂಡ್ಯಾ ನಾಲಿಗಿ
ಒಬ್ಬರಿಗಿ ಆಡಿಕೊಳ್ಳಬಾಡಿ ನಾಲಿಗಿ । ಪ ।
ಅಣ್ಣ ತಮ್ಮರೆಂದು ನಾಲಿಗಿ
ಬಹು ಆಶಿಯ ಬೀಳಬ್ಯಾಡೋ ನಾಲಿಗಿ "[೩೦]

ಮನುಷ್ಯನ ವ್ಯಕ್ತಿತ್ವವನ್ನು ಅವನ ನಾಲಿಗೆಯ ಮೂಲಕ ಕಂಡುಕೊಳ್ಳಲಾಗುತ್ತದೆ. ಮಾತು ಶುದ್ಧವಾಗಿದ್ದರೆ ಮನಸ್ಸು ಶುದ್ಧವಾಗಿರುತ್ತದೆ. ಸುಮ್ಮನಿರದೆ ಇನ್ನೊಬ್ಬರ ಬಗ್ಗೆ ಚಾಡಿ ಹೇಳುವುದು, ಕೆಟ್ಟದಾಗಿ ನುಡಿಯುವುದು ಮಾಡದೆ ನಾಲಿಗೆಯನ್ನು ಹತೋಟಿಯಲ್ಲಿ ಇಡಬೇಕು ಎಂಬ ಸತ್ಯವನ್ನು ಸೂಕ್ಷ್ಮವಾಗಿ ಗೊಂದಲಿಗರು ಬಿಡಿಸಿ ಹೇಳುತ್ತಾರೆ. ಅದಕ್ಕಾಗಿ 'ಮಾತು ಆಡಿದರೆ ಹೊಯ್ತು ಮುತ್ತು ಒಡೆದರೆ ಹೊಯ್ತು ' ಎನ್ನುವ ಗಾದೆಮಾತು ಪ್ರಚಲಿತವಿದೆ.

ಗೊಂದಲದ ಕಲಾವಿದ ಶಾಂತಪ್ಪ ದ್ಯಾಮಣ್ಣ ಗುಡಕರ ಅವರು ಹಾಡುವ ನೀತಿ ಪದಗಳು ಈ ಕೆಳಗಿನಂತಿವೆ.

"ಹುಟ್ಟಿದ ಹೊಲಿಮನಿ
ಸದಾಶಿವ ಬಿಟ್ಟೊಹೊಂಟೋ ಕಾಲಿಮನಿ ॥ ಪ ॥
ಇದುವಸ್ತಿ ಇರೋಮನಿ ಗಸ್ತಿ ತಿರುಗೋಮನಿ
ಶಿಸ್ತಿಲಿ ಕಾಣೋದೋ ಶಿವನಮನಿ "[೩೧]

ಮರ್ತಲೋಕವೆಂಬುದು ಹೊಲಿಮನಿಯಾಗಿದೆ. ಇಲ್ಲಿ ಹುಟ್ಟಿದ ಮನುಷ್ಯನ ಬಾಳು ಗಸ್ತಿಲಿ(ವೈಭವಯುತ) ತಿರುಗುವ ನಾಲ್ಕು ದಿನದ ಬದುಕು ಮಾತ್ರ ಶಾಶ್ವತವಾದ ಮನೆ ಆ ಶಿವನ ಸಾಮಿಪ್ಯವಾಗಿದೆ. ಅಂದರೆ ಮೋಕ್ಷ ಒಂದೇ ಬದುಕಿನ ಗುರಿ. "ಮಾನವ ಜನ್ಮ ದೊಡ್ಡದು ಹಾಳು ಮಾಡಬೇಡಿ ಹುಚ್ಚಪ್ಪಗಳಿರಾ" ಎಂದು ಪುರಂದರದಾಸರು ಹೇಳಿರುವಂತೆ ಶಿವನ ಸನ್ನಿದಾನವೇ ಶ್ರೇಷ್ಠವಾಗಿದ್ದು ಅದುವೇ ನಮ್ಮ ನಿಜವಾದ ಮನೆ ಎಂಬರ್ಥದಲ್ಲಿ

ಹೇಳಲಾಗಿದೆ. ಇಲ್ಲಿ ಪಾರಮಾರ್ತಿಕತೆಗೆ ಹೆಚ್ಚು ಒತ್ತು ಕೊಡಲಾಗಿದೆ.

"ಯಾರಿಗೆ ಯಾರ್ಯಾರಿಲ್ಲೋ
ಈ ಜಲ್ಮಕ ಯಾರಿಗಿ ಯಾರ್ಯಾರಿಲ್ಲೈ ॥ ಪ ॥
ಮನುಷ್ಯ ಯಾರಿಗೆ ಯಾರಿಲ್ಲ
ದಾರಿ ಸಂಗಡವಿಲ್ಲ
ನೀರ ಮೇಲಿನ ಗುಳ್ಳಿ
ನೆಚ್ಚಬೇಡ ಜನ್ಮ "

"ಯಾತಕ ಬೇಕಂತಿ ನಾಳಿಗಿ ದಿವಸ
ಹಾರಿ ಹೋಗುವುದು ಜನ್ಮಗಾಳಿಗಿ
ಇದ ದಾರಿ ಹೋಗುವುದು ಜನ್ಮಗಾಳಿಗಿ
ಇದ ಮಣ್ಣ ಪಾಲಾಗುವುದು ಬಾರಿಗಿ"

"ಬರಬಾರದಿತ್ತಣ್ಣ ಈ ಊರಿಗೆ
ಸರಕಾರ ಇಲ್ಲದ ಹಾಳ ಊರಿಗೆ ನಾವು
ಬರಬಾರದಿತ್ತಣ್ಣ ಈ ಊರಿಗೆ"

"ಜನ್ಮ ಮರ್ತ್ಯ ಲೋಕದ ಬಂದಿ
ಬರುವಾಗ ಏನೇನ ತಂದಿ
ಜನ್ಮ ಮರ್ತ್ಯ ಲೋಕಕೆ ಬಂದಿ"[೨]

ಗೊಂದಲಿಗರ ಹಾಡುಗಳಲ್ಲಿ ಜೀವನದ ನಶ್ವರತೆಯನ್ನು ತಿಳಿಸಲಾಗಿದೆ. 'ಇಂದು ನಾಳಿಗೆಯೆಂದು ಕೂಡಿಡಬೇಡ, ಬಂದುದನೆ ಉಂಡು ಸುಖಿಸು' ಎನ್ನುವಂತೆ ಗೊಂದಲಿಗರು ಮರ್ತಲೋಕಕ್ಕೆ ಬಂದ ಜನ್ಮ 'ಬರುವಾಗ ಏನು ತಂದಿಲ್ಲ, ಹೋಗುವಾಗಲೂ ಏನು ಇಲ್ಲ ಜನ್ಮ ಮಣ್ಣ ಪಾಲಾಗುವುದು ಒಂದು ದಿನ' ಎಂದು ಹೇಳುತ್ತಾರೆ. ಶಿವನಿಲ್ಲದ ಊರು ಆತ್ಮವಿಲ್ಲದ ದೇಹ. ಹೀಗಾಗಿ 'ಸರಕಾರ(ಶಿವ)ವಿಲ್ಲದ ಈ ಊರಿಗೆ ನಾವು ಬರಬಾರದಿತ್ತು ಎಂದು ಹೇಳುವಲ್ಲಿ ಮನುಷ್ಯನಿಗೆ ಆತ್ಮ (ಶಿವ)ಸಾಕ್ಷಾತ್ಕಾರ ಮುಖ್ಯವಾಗಿದೆ ಎಂಬ ಅರ್ಥ ಒಳಗೊಂಡಿದೆ.

### ೫.೫.೨ ಗರತಿಯ ಪದಗಳು

ಗೊಂದಲಿಗರು ಗೊಂದಲದ ಸಂದರ್ಭದಲ್ಲಿ ಹೆಣ್ಣು ಮಕ್ಕಳಿಗೆ ವಿನಯ ಪೂರ್ವಕವಾಗಿ ಕೆಲವು ಪದಗಳನ್ನು ಹೇಳುತ್ತಾರೆ. ಸಂಸಾರ, ಗಂಡ, ಮನೆ, ಮಕ್ಕಳು, ವಸ್ತ್ರ, ವಡವೆ, ಮುತ್ತೈದಿತನ, ಅತಿಥಿ, ಅತ್ತೆ ಮಾವನ ಸೇವೆ ಹೀಗೆ ಹಲವಾರು ಬಗೆಯ ತಿಳುವಳಿಕೆಯನ್ನು ಪದ್ಯಗಳ ಅವರ ಮೂಲಕ ಮನ ಮುಟ್ಟುವಂತೆ ಹೇಳುತ್ತಾರೆ. ಉದಾಹರಣೆಗೆ.

"ಮುತ್ತಿನಂತ ಮಾತೊಂದು ಹೇಳಿತೀನಿ ತಾಯಿಗಳಿರಾ
ಗಂಡನ ಜೋಪಾನ ಮಾಡಬೇಕ್ರೆವ್ವ
ಗಂಡನ ದೇವರು ಗಂಡನೇ ಸರ್ವಸ್ವ
ಗಂಡನಿಂದಲೇ ನಿಂದು ಸೌಭಾಗ್ಯ
ಹಣಿಮ್ಯಾಲಿಹಚ್ಚಬೇಕು ಚಂದದ ಕುಂಕುಮ
ಕೊರಳೊಳು ಕಟ್ಟಬೇಕು ಕರಿಮಣಿ ತಾಳೆವ್ವ"[೩೩]

ಗರತಿಯಾದವಳು ಗಂಡನೇ ತನ್ನ ಪ್ರಾಣ ಎಂದು ತಿಳಿದು ಆತನೇ ತನ್ನ ಸರ್ವಸ್ವ ಎಂಬ ಭಾವನೆಯಿಂದ ಆತನನ್ನು ಜೋಪಾನ ಮಾಡಬೇಕಾಗುತ್ತದೆ ಎಂದು ಹೇಳುತ್ತಾರೆ .

"ಗಂಡನ ಜೋಪಾನ ಮಾಡು ತಂಗೆಮ್ಮ
ಗಂಡನೆಂದರೂ ನಿನ್ನ ಮನಿ ದೇವರಮ್ಮ ॥ ಪ ॥
ತವರವರು ಕೊಟ್ಟಿದ ಬಂದು ಕಳಸದ ಗಿಂಡೆವ್ವ
ತವರವರು ಕೊಟ್ಟಿದ ಬಂದು ಕಳಸದ ಗಿಂಡೆವ್ವ
ಆ ಗಿಂಡಿ ಹೊದಮ್ಯಾಲ ನೀ ರಂಡಿ ಮುಂಡೆವ್ವ ॥ ೧ ॥
ಬಂಧುಬಳಗ ಕೊಟ್ಟಿದ ಬಂದು ಕರಿಮಣಿ ಕಾಶಿಮ್ಮ
ಆ ರಾಶಿ ಹೋದಮ್ಯಾಲ ನೀ ಪರದೇಶಮ್ಮ ॥ ೨ ॥
ಅತ್ತೆ ಮಾವಕೊಟ್ಟಿದ ಬಂದು ಮುತ್ತೈದೆತಾಳೆಮ್ಮ
ಅತ್ತೆ ಮಾವಕೊಟ್ಟಿದ ಬಂದು ಮುತ್ತೈದೆತಾಳೆಮ್ಮ
ಆ ತಾಳಿ ಹೋದಮ್ಯಾಲ ನೀ ಪರದರೊಳ್ಳಿ ॥ ೩ ॥
ಸತ್ಯವಾನ ಸಾವಿತ್ರೈಮ್ಮ ಸತ್ಯದಿಂದ ನಡೆದಾಳಮ್ಮ
ಸತ್ತಗಂಡನ ಪ್ರಾಣ ಉಳಿಸಿದಳಮ್ಮ
ಸತ್ತಗಂಡನ ಪ್ರಾಣ ಉಳಿಸಿದಳಮ್ಮ ॥ ೪ ॥

ಧರೆಯೊಳು ಸತ್ಯ ಶಿಶುನಾಳದೀಶನ
ಸತ್ಯ ಶಿವಶರಣ ಪಾದ ಸತ್ಯ ಸೇವೆ ಮಾಡಮ್ಮ
ಗಂಡನ ಜೋಪಾನ ಮಾಡ ತಂಗೆಮ್ಮ
ಗಂಡನೆಂದರೂ ನಿನ್ನ ಮನಿ ದೇವರಮ್ಮ "[೩೪]

ಇಂತಹ ಪದ್ಯಗಳು ಜನರಲ್ಲಿ ಸೂಕ್ಷ್ಮವಾಗಿ ಸಾಮಾಜಿಕ ಹಾಗೂ ಕೌಟುಂಬಿಕ ಬದಲಾವಣೆ ತರಲು ಸಹಕಾರಿಯಾಗುತ್ತವೆ ಎಂಬುದು ಗೊಂದಲಿಗರ ಅಭಿಪ್ರಾಯವಾಗಿದೆ.

ಮದುವೆಯಾದ ಹೆಣ್ಣು ಮಕ್ಕಳು ಸಂತಾನದ ಫಲ ಪಡೆದಾಗಲೇ ಅವಳ ಬದುಕು ಸಾರ್ಥಕತೆ ಪಡೆಯುತ್ತದೆ. ಹೀಗಾಗಿ ಮದುವೆಯಾದ ಹೆಣ್ಣು ಆದಷ್ಟು ಬೇಗನೆ ನನಗೆ ಮಕ್ಕಳ ಭಾಗ್ಯ ಕಲ್ಪಿಸು ಎಂದು ಸದಾ ದೇವರಲ್ಲಿ ಬೇಡಿಕೊಳ್ಳುತ್ತಿರುತ್ತಾಳೆ. ಮದುವೆಯಾಗಿ ನಾಲ್ಕೈದು ವರ್ಷಗಳ ವರೆಗೆ ಮಕ್ಕಳಾಗದಿದ್ದರೆ ಸಮಾಜ ಅವಳನ್ನು ಬಂಜೆ ಎಂದು ತುಚ್ಚವಾಗಿ ಕಾಣಲು ಪ್ರಾರಂಭಿಸುತ್ತಾರೆ. ಅಂತಹ ಹೆಣ್ಣು ಮಕ್ಕಳಲ್ಲಿ ಬಂಜೆತನ ಅಳಿದು ಹೋಗಿ, ಮಕ್ಕಳ ಭಾಗ್ಯ ಕಲ್ಪಿಸಿದ ದೈವವನ್ನು ಅವಳು ಹೇಗೆ ಸ್ಮರಿಸುತ್ತಾರೆ ಎಂಬುದನ್ನು ಈ ಗೊಂದಲಿಗರ ಪದ್ಯದಲ್ಲಿ ಕಾಣುತ್ತೇವೆ.

"ಬಂಜೆತನ ಹಿಂಜಿತವ್ವ ಶಿವ ಕೊಟ್ಟನು ಫಲ
ಬಂಜೆತನ ಹಿಂಜಿತವ್ವ ಶಿವ ಕೊಟ್ಟನು ಫಲ
ಕೂಸಿನ ಜನ್ಮಕೇನು ಸುಖವಿಲ್ಲ ಜೀ ಜೀ ಜಿ ॥ ಪ ॥
ತಂಗಿ ಹನ್ನೆರಡ ದೇವರ ಹರಕೆ ಹೊತ್ತ
ಹಡದೆನವ್ವಗೊಬ್ಬ ಬಾಲ
ಹಡದೆನವ್ವಗೊಬ್ಬ ಬಾಲ
ಸೂರ್ಯಚಂದ್ರನಂತ ಕುಮಾರ "[೩೫] ॥ ೧ ॥

'ಮುಂಜಾನೆ ಕೊಟ್ಟು ಸಂಜೀಕ ಕರೆದೊಯ್ಯೋ...' ಎಂದು ನಮ್ಮ ಜಾನಪದ ನಾಡಿನ ಗರತಿ ಬಂಜೆತನದ ಬಗ್ಗೆ ಶಿವನಿಗೆ ತನ್ನ ಅಳಲನ್ನು ತೊಡಿಕೊಳ್ಳುವ ರೀತಿ ಇದು. 'ಯಾರ ಜನ್ಮ ಯಾರ ಕೈಯಲ್ಲಿ ಇಲ್ಲ, ಶಿವ ಮುನಿದರ ಅದು ಬಿಟ್ಟು ಹೋಗುವುದು ಒಂದು ದಿನ ಎಂಬ ಮಾತು ಈ ಪದ್ಯದಲ್ಲಿ ತುಂಬಾ ಮಾರ್ಮಿಕವಾಗಿ ಸಾವಿನ ಸತ್ಯ ಸಂಗತಿಯೊಂದು ಮೂಡಿಬಂದಿದೆ. ಆದರೂ ಸಮಾಜದ ಕೆಂಗಣ್ಣಿಗೆ ಗುರಿಯಾಗದೆ ತನ್ನ ಬಂಜೆತನ ಹಿಂಜಲಿ ಎಂದು ಬಯಸುತ್ತಾಳೆ. ಅದಕ್ಕಾಗಿ ಜೀವ ಮೋಕ್ಷ ಹೊಂದಲು ಗುರುವಿನ ತತ್ವ, ಸನ್ನಿದಾನ ಬಹುಮುಖ್ಯ ಎಂಬುದನ್ನು ಈ ಕೆಳಗಿನ ಪದ್ಯದಿಂದ ಕಾಣಬಹುದು.

“ತಂಗಿ ಹೋಗೋಣ ಬಾರಮ್ಮ
ಏ ತಯಾರಾಗಮ್ಮ ತಂಗಿ ಸಾಗುಣ ಬಾರಮ್ಮ
ತಂಗಿ ಹೋಗೋಣ ಬಾರಮ್ಮ
ತಡವ ಮಾಡುವುದ್ಯಾಕರಿ
ಆ ಲಿಂಗನ  ಸ್ಥಳದಲ್ಲಿ ಮೇಲಿಂಗನ ಕೊಡಬೇಕ
ತಂಗಿ ಹೋಗೋಣ ಬಾರಮ್ಮ
ಏ ತಯಾರಾಗಮ್ಮ ತಂಗಿ ಸಾಗುಣ ಬಾರಮ್ಮ ”[೩೬]

## ೫.೬ ಮನರಂಜನಾ ಹಾಡುಗಳು

ಗೊಂದಲಿಗರ ಹಾಡುಗಾರಿಕೆಯಲ್ಲಿ ಸಂದರ್ಭಕ್ಕೆ ತಕ್ಕಂತೆ ಅನೇಕ ಮನರಂಜನಾ ಹಾಡುಗಳನ್ನು ಹಾಡುತ್ತಿರುವುದು ಕಂಡು ಬರುತ್ತದೆ. ಗೊಂದಲಿಗರು ವರ್ತಮಾನದಲ್ಲಿ ನಡೆಯುವ ಪ್ರತಿಯೊಂದು ವಿಷಯವನ್ನು ತಿಳಿದುಕೊಂಡು ಅದನ್ನು ಪದ್ಯದ ರೂಪದಲ್ಲಿ ಹಾಡುತ್ತಾರೆ. ಹೀಗಾಗಿ ಇವರು ಆಶುಕವಿಗಳೂ ಆಗಿದ್ದಾರೆ ಎಂದು ಹೇಳಬಹುದು. ಗೊಂದಲ ನೋಡಲು ಆಗಮಿಸಿದ ಪ್ರೇಕ್ಷಕರ ಬೇಸರ ಕಳೆಯಲು ಕೆಲ ಹಾಡುಗಳನ್ನು ಗೊಂದಲಿಗರು ಹಾಡುತ್ತಾರೆ. ಉದಾಹರಣೆಗೆ.

“ಇದ್ದರು ಇಬ್ಬರು ಗಂಡ ಹೆಂಡಿರ
ಹೆಂಡತಿ ಆಗಿದ್ದಳು ಗುಂಡ ಗುಂಡಗ
ಹತ್ತೆಮ್ಮಿ ಹೈನ, ಮನ್ಯಾಗ ಚಿಂತ್ಯಾನ
ಗಂಡಗಿರಲಿಲ್ಲ ಗುಟಕು ಹೈನ
ಎಮ್ಮಿ ಕಾಯುವದು ಬಿಡಲಿಲ್ಲ ಕೂನ ”[೩೭]

ಗಂಡ ಹೆಂಡಿರ ಬದುಕು ಜೋಡು ಎತ್ತಿನ ಬಂಡಿ ಇದ್ದಂತೆ, ಸರಸ ವಿರಸದಲ್ಲಿ ಸಮಭಾವತೆಯ ತೋರುವ ಇವರ ಪ್ರೀತಿ ಶಾಶ್ವತ. ವಿರಸದೊಂದಿಗೆ ಹಾಸ್ಯವನ್ನು ತೋರುವ ಈ ಪದ್ಯವು ಅವರ ಪ್ರೀತಿಯ ಒಡನಾಟವನ್ನು ತಿಳಿಸುತ್ತದೆ. 'ಗಂಡ ಮೂರಮೊಳ ಹೆಂಡತಿ ಆರ್ಮೊಳ, ಅವರು ಪ್ರೀತಿ ಮಾಡುವಾಗ ಗಂಡಗ ನಿಲಕತಿರಲಿಲ್ಲ ಗಲ್ಲ, ಗುಂಡದ ಮ್ಯಾಲ ಏರಿ ಕೊಡತಿದ್ನ ಬೆಲ್ಲ' ಎನ್ನುವ ಹಾಡೊಂದು, ಗಂಡನಿಗೆ ಎಮ್ಮಿ ಕಾಯಲು ಕಳುಹಿಸಿ ಹೈನ ಮತ್ತು ರೊಕ್ಕದ ಒಡತಿಯಾಗಿ ಹೆಂಡತಿ ನಡೆಸುತ್ತಿದ್ದ ಸಂಸಾರದ ಬಗ್ಗೆ ಬಹಳ ಹಾಸ್ಯ ಭರಿತವಾಗಿ ಹೇಳುತ್ತಾ ಸಾಗುತ್ತದೆ.

ಗೊಂದಲಿಗರು ಇಂದಿನ ನೈತಿಕ ಅಂಧಃಪತನವನ್ನು ಖಂಡಿಸುವ ಪದ್ಯಗಳನ್ನು ಹಾಡುತ್ತಾರೆ.

ಉದಾಹರಣೆಗೆ,

> “ಇದ್ದದ್ದ ಇದ್ದಂಗ ಹೇಳಿತಿನ್ರಿ
> ತಿದ್ದಿಕೊಳ್ರಿ ನೀವು ಮೊದಲ
> ಪಾಪ ಹೆಚ್ಚಾಗಿ ಧರ್ಮ ಉಳಿದಿಲ್ಲ
> ಕಲತವ್ರಿಗೆ ನಾಚಿಕಿಲ್ಲರಿ
> ಕಲತವ್ರಾಗಿ ಬುದ್ದಿಯಿಲ್ಲ । ಕಲಿಸಿದವ್ರಿಗೆ ಬೆಲೆಯಿಲ್ಲ
> ಪತಿವ್ರತಾ ಹೆಣಮಗಳಿಗಿ ಕೂಳಸಿಗಲಿಲ್ಲ.
> ಹಾದರಗಿತ್ತಿ ಉಂಡಳು ಹಾಲುಸಕ್ಕರಿ
> ಹಂಗ ಹರದ ಅಂಗಿಚೊನ್ನ ಹೊಲಸತಾರಿ
> ಕುಂಡಿ ಕಾಣುವಂಗ ಆಹಾ ॥ ಕುಂಡಿ ಕಾಣುವಂಗ ”[೩೮]

ದುಂದುವೆಚ್ಚ, ಪತಿವೃತ, ಹೆಣ್ಣಿನ ನೋವು, ಕಲಿತವರ ಬಾಳು ಹೀಗೆ ಹಲವಾರು ವಿಷಯಗಳನ್ನು ನೇರ ನುಡಿಯಲ್ಲಿ ಪದ್ಯಗಳ ಮೂಲಕ ಪ್ರತಿಕ್ರಿಯಿಸುತ್ತಾರೆ. ಇಂತಹ ಸಂದರ್ಭಗಳಲ್ಲಿ ಗೊಂದಲಿಗರು ಸಮಾಜದಲ್ಲಾಗುತ್ತಿರುವ ಬದಲಾವಣೆ, ರೀತಿ, ನೀತಿಗಳು ಅಧರ್ಮದ ದಾರಿಯಲ್ಲಿ ನಡೆದಿವೆ ಎಂಬುದನ್ನು ತಮ್ಮ ನೋವು ಭಾವನೆಗಳೊಂದಿಗೆ ಏರಿಳಿತಗಳ ಜೊತೆಗೆ ಏರು ಧ್ವನಿಯಲ್ಲಿ ಹೇಳುತ್ತಾರೆ.

### ೫.೭ ಮಾತೃದೇವತೆಗಳು

ಭಾರತೀಯ ಸಂಸ್ಕೃತಿಯಲ್ಲಿ ಮಾತೃದೇವತೆಗಳ ಸ್ಥಾನವು ವಿಶಿಷ್ಟವಾದದ್ದು. ಅನಾದಿಕಾಲದಿಂದಲೂ ಮಾತೃದೇವತೆಗಳ ಆರಾಧನೆಯನ್ನು ನಾವು ಕಾಣುತ್ತ ಬಂದಿದ್ದೇವೆ. ಮಾತೃ ಪ್ರಧಾನ ಕುಟುಂಬಗಳ ಪ್ರಾಚೀನ ಇತಿಹಾಸ ಗಮನಿಸಿದಾಗ ಕುಟುಂಬದ ಪಾಲನೆ ಪೋಷಣೆ, ಮಕ್ಕಳ ಹಾಗೂ ವಯಸ್ಕರ ಜವಾಬ್ದಾರಿ ಹೀಗೆ ಪ್ರತಿಯೊಂದನ್ನು ಅವಳೇ ನಿರ್ವಹಿಸುತ್ತಿದ್ದಳು. ಹೆಣ್ಣು ಆ ಕುಟುಂಬದ ಶಕ್ತಿಯಾಗಿದ್ದಳು. ಹಾಗೆಯೇ ಗ್ರಾಮಗಳಲ್ಲಿ ಕಂಡು ಬರುವ ಶಕ್ತಿ ದೇವತೆಗಳು ಇಡೀ ಗ್ರಾಮದ ರಕ್ಷಣೆ ಮಾಡುವ ಮಾತೃದೇವತೆಗಳಾಗಿ ಕಾರ್ಯನಿರ್ವಹಿಸುತ್ತಾಳೆ ಎಂಬುದು ಜನಪದರ ನಂಬಿಕೆ.

ಮಾತೃದೇವತೆಗಳ ಪಾತ್ರವು ಎಷ್ಟು ಮುಖ್ಯವಾದುದು ಎಂಬುದನ್ನು ಹಿ. ಚಿ. ಬೋರಲಿಂಗಯ್ಯ ಅವರು ಹೀಗೆ ವ್ಯಕ್ತಪಡಿಸುತ್ತಾರೆ..

೧. ಮನುಷ್ಯ ಸಮುದಾಯದ ಪಾಲನೆ ಪೋಷಣೆ ಮತ್ತು ರಕ್ಷಕಿಯಾಗಿರುತ್ತಾಳೆ

೨. ಧಾನ್ಯಗಳ ದೇವತೆಯಾಗಿರುತ್ತಾಳೆ.

೩. ರೋಗ ನಿಯಂತ್ರಕಳಾಗಿರುತ್ತಾಳೆ

ದ್ರಾವಿಡ ಸಮುದಾಯದಲ್ಲಿ ಮಾತೃ ಮೂಲ ಕುಟುಂಬಗಳೇ ಪ್ರದಾನವಾಗಿದ್ದವು. ಪ್ರಾಚೀನ ಕಾಲದಿಂದ ಸಾಗಿ ಬಂದ ಮಾತೃಮೂಲ ಆರಾಧನೆಯನ್ನು ತಿಳಿಸಲು ಅನೇಕ ಆಕರಗಳಿವೆ. ಕ್ರಿಶ್ಚಿಯನ್ ಪೂರ್ವದ ಇಡಿ ಯೂರೋಪಿನಲ್ಲಿ ಮಾತೃದೇವತೆಯ ಆರಾಧನೆಯೇ ಪ್ರಭಲವಾಗಿತ್ತು ಎಂದು ಅನೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. 'ಖ್ಯಾತ ಚಿಂತಕ ಡಿ.ಡಿ. ಕೋಸಾಂಬಿ ಅವರ ಪ್ರಕಾರ ಅಲೆಮಾರಿ ಜನಾಂಗವು ಕೆಲಸ ಕಾರ್ಯ ಮುಗಿದ ನಂತರ ಒಂದು ಕಡೆ ಎಲ್ಲರು ಸೇರುವ ಹಾದಿಯಲ್ಲಿ ದೇವತೆಯನ್ನು ಪ್ರತಿಷ್ಠಪಿಸುತ್ತಿದ್ದರು. ಅದಕ್ಕೆ ನರ ಬಲಿ ಅಥವಾ ರಕ್ತ ಬಲಿ ಕೊಡುತ್ತಿದ್ದರು.'[೩೯] ಅದಕ್ಕಾಗಿ ಈಗಲೂ ಹಲವಾರು ಸಮುದಾಯಗಳಲ್ಲಿ ಕೋಳಿ ,ಕುರಿಯಂತಹ ಪ್ರಾಣಿ ಬಲಿಗಳು ನಡೆಯುತ್ತಿವೆ. ಮತ್ತೊಬ್ಬ ಖ್ಯಾತ ಚಿಂತಕ ದೇವಿ ಪ್ರಸಾದ ಚಟ್ಟೋಪಾಧ್ಯಾಯ ಅವರ ಪ್ರಕಾರ ಉಗಮಗೊಂಡ ಮಾತೃದೇವತಾ ಪಂಥದ ಜಾನಪದ ರೂಪಗಳೇ ಗ್ರಾಮ ದೇವತೆಗಳಾಗಿವೆ ಎಂದು ಹೇಳುತ್ತಾರೆ.

"ಆರ್ಯರ ಮುಖಂಡತ್ವದಲ್ಲಿ ಪುರುಷ ಪ್ರಧಾನ ಮೌಲ್ಯ ವಿಜೃಂಬಿಸಿ, ಪುರುಷ ದೈವಗಳ ಸೃಷ್ಟಿಯು ಆಯಿತು. ಆ ದೈವಗಳ ಪುರಾಣಗಳು ಲಿಖಿತವಾಗಿ ದಾಖಲಾದವು. ಮಾತೃವಿನ ಸಂಕೇತದ ದೇವತೆಗಳು ಪುರುಷ ದೈವಗಳ ಅಡಿಯಾಳಾಗಿಯೋ, ನಿಕೃಷ್ಟ ಸೇವಕಿಯಾಗಿಯೋ ಇಲ್ಲವೇ ಆರ್ಯ ದೈವಗಳ ಹೆಂಡತಿಯರಾಗಿಯೋ ಕಾಣಿಸಿಕೊಂಡರು. ಈ ಎಲ್ಲ ಪುರುಷ ಅವಸ್ಥಾಂತರಗಳ ನಡುವೆಯೂ ಗ್ರಾಮೀಣ ಪ್ರದೇಶಗಳಲ್ಲಿ ಇನ್ನು ಸ್ಥಾನವನ್ನು ಭದ್ರಪಡಿಸಿಕೊಂಡಿರುವ ದೇವತೆಗಳು ಮಾತೃದೇವತೆಗಳೇ ಆಗಿರವುದು ವಿಶೇಷವಾಗಿದೆ."[೪೦]

ಮಾತೃದೇವತೆಗಳ ಆರಾಧನೆಯು ಸಾಮಾಜಿಕ ಅಥವಾ ಧಾರ್ಮಿಕ ಆಚರಣೆ ಒಳಪಟ್ಟು ಗ್ರಾಮದೇವತೆಗಳಾಗುವುದರ ಜೊತೆಗೆ ಕುಲದೈವಗಳಾಗಿ ತಮ್ಮ ಸ್ಥಾನ ಭದ್ರಪಡಿಸಿಕೊಂಡವು. ಜನಪದ ದೈವಗಳಲ್ಲಿ ಹೆಣ್ಣು ದೈವಗಳೇ ಪ್ರಧಾನವಾಗಿದ್ದು, ಪುರಾಣಗಳಲ್ಲಿ, ಬರುವ ಮಾತೃಕೆಗಳಾದ ಸವದತ್ತಿ ಎಲ್ಲಮ್ಮ, ಕೊಲ್ಲೂರ ಮೂಕಾಂಬಿಕೆ, ಶಿರ್ಸಿಯ ಮಾರಮ್ಮ, ಮುನಿರಾಬಾದದ ಹುಲಿಗೆಮ್ಮ, ಬಳ್ಳಾರಿ ದ್ಯಾವಮ್ಮ, ಬಾದಾಮಿ ಬನಶಂಕರಿ, ಮೈಸೂರಿನ ಚಾಮುಂಡಿ, ತುಳಜಾಪುರ ಅಂಬಾಭವಾನಿ, ಮುಂತಾದವರು ಪ್ರಮುಖ ದೇವತೆಗಳಾಗಿದ್ದಾರೆ. ಹನುಮಂತ ಭರಮಪ್ಪ ಮೈಲಾರಲಿಂಗ ಜೋಕಮಾರ, ಗಣಪ, ಮುತ್ತಪ್ಪ ಮೊದಲಾದವುಗಳು ಜನಪದರ ಗಂಡುದೇವತೆಗಳಾಗಿದ್ದಾರೆ. ಗೊಂದಲಿಗರ ಆರಾಧನಾ ದೇವತೆಯು ಈ ಹಿನ್ನೆಲೆಯಲ್ಲಿಯೇ ಕುಲದೈವವಾಗಿ ಮಾತೃದೇವತೆಗಳ ಆರಾಧಕರಾಗಿದ್ದಾರೆ. ಕುಲದೈವವಾಗಿ ಅಂಬಾಭವಾನಿ ಅಥವಾ ತುಳಜಾಪೂರದ ತುಳ ಜಾಭವಾನಿಯನ್ನು ಪೂಜಿಸುತ್ತಾರೆ. ಇದರ ಜೊತೆ ಜೊತೆಗೆ ಇನ್ನಿತರ ದೇವದೇವತೆಗಳನ್ನು ಪೂಜಿಸುತ್ತಾರೆ.

ಎಸ್.ಎಸ್. ಹುರಕಡ್ಲಿ ಅವರು ತಮ್ಮ ಮಹಾಪ್ರಬಂಧದಲ್ಲಿ ಗೊಂದಲಿಗರ ಸಮುದಾಯವು ಆರಾಧಿಸುವ ಸ್ತ್ರೀ ದೈವಗಳ ಹಾಗೂ ಪುರುಷ ದೈವಗಳ ಪಟ್ಟಿಯನ್ನು ಕೊಟ್ಟಿದ್ದಾರೆ.

| | | |
|---|---|---|
| ೧. | ತುಳಜಾಭವಾನಿ / ಅಂಬಾಭವಾನಿ– | ಸ್ಥಳ ತುಳಜಾಪೂರ. |
| ೨. | ಮಹಾಲಕ್ಷ್ಮಿ | – ಕೊಲ್ಲಾಪೂರ |
| ೩. | ಎಲ್ಲಮ್ಮ | – ಸವದತ್ತಿ ಬೆಳಗಾಂವ ಜಿಲ್ಲೆ. |
| ೪. | ಹುಲಿಗೆಮ್ಮ | – ಹುಲಿಗಿ ಹೊಸಪೇಟೆ. |
| ೫. | ನೀರಮಾನ್ವಿ ಯಲ್ಲಮ್ಮ | – ನೀರಮಾನ್ವಿ ಮಾನ್ವಿ ತಾಲೂಕ. |
| ೬. | ದುರಗಮ್ಮ | – ಅಮರಗೋಳ |
| ೭. | ದ್ಯಾಮಮ್ಮ | – ಲೋಕುರ |
| ೮. | ಮಾರಿಕಾಂಬಾ ದೇವಿ / ಮಾರಮ್ಮ | – ಶಿರ್ಸಿ. |
| ೯. | ಕೋಣಮ್ಮ ದೇವಿ | – ಬದಾಮಿ |
| ೧೦. | ಗಾಳೆಮ್ಮ | – ಗಾಳಮ್ಮನಗುಡಿ ತಾ: ಹೊಸಪೇಟೆ. |
| ೧೧. | ದುರ್ಗಮ್ಮಾ | – ದುಗ್ಗಲಮರಿ ತಾ:ಹುನಗುಂದ |
| ೧೨. | ಲಕ್ಷ್ಮೀದೇವಿ | – ಹಂದಿಗನೂರ |
| ೧೩. | ಕನಕಲ ಶ್ರೀದೇವಿ | – ಕನಕಲ ಬಾಗೇವಾಡಿ ಹತ್ತಿರ |
| ೧೪. | ಬನಶಂಕರಿ | – ಬದಾಮಿ |

"ಗೊಂದಲಿಗರು ಸ್ವತ: ತಾವು ಜಮದಗ್ನಿ ರೇಣುಕೆಯ ವಂಶಜರೆಂದು ಹಾಗೂ ಅಂಬಾಭವಾನಿಯ ಪುತ್ರರೆಂದು ಭಾವಿಸುತ್ತಾರೆ. ಆದರೆ ಚೌಡಿಕೆಯ ಸಂಪ್ರದಾಯವು ಜೋಗಪ್ಪ ಜೋಗತಿಯೆಂದು ಅವರು ಕಂಸಾಳೆಯಂತೆ ದಿಕ್ಷಾಬದ್ಧರಲ್ಲ. ಚೌಡಿಕೆ ಸಂಪ್ರದಾಯವು ಕುಲವೃತ್ತಿಯಲ್ಲ. ಅದನ್ನು ಯಾರೂ ಬೇಕಾದರೂ ದೀಕ್ಷೆ ಪಡೆಯಬಹುದು. ಗೊಂದಲಿ ಮತ್ತು ಚೌಡಿಕೆ ಸಂಪ್ರದಾಯಗಳಿಗೆ ಆರಾಧ್ಯ ದೇವತೆ ರೇಣುಕೆಯೇ ಆದರೂ ಆಚಾರಣೆ ವಿಭಿನ್ನವಾಗಿದೆ."[೪೧]

"ಗೊಂದಲಿಗರು ತಮ್ಮ ಗೊಂದಲಕ್ಕೆ ಬನ್ನಿಮಹಾಂಕಾಳಿ ರೇಣುಕಾ ಮಹಾತ್ಮೆಯಂಥ ಭಕ್ತಿ ಪ್ರಧಾನ ಕಥೆಗಳನ್ನು ಆಯ್ದುಕೊಳ್ಳುವುದೇ ಹೆಚ್ಚು. ಜಯರಾಣಿ ಬಾಳಾವತಿ, ರಸ್ತಾಳರಾಜ, ಶೀಲಾವತಿ, ಬಾಳಭಿಕ್ಷುಕ, ಅರಣ್ಯಕುಮಾರ ಮುಂತಾದ ನೀತಿಪರ ಕಥೆಗಳನ್ನು ಬಳಸಿಕೊಳ್ಳುವುದುಂಟು. ಗೊಂದಲದ ಆಟಗಳಲ್ಲಿ ದೇವಿಸ್ತುತಿ ಮತ್ತು ಕುಣಿತಗಳಿಗೆ ಪ್ರಾಧಾನ್ಯತೆ ಹೆಚ್ಚು."[೪೨] ಸ್ತ್ರೀ ದೈವಗಳು ಅಥವಾ ಮಾತೃದೇವತೆಗಳು ಅಲೆಮಾರಿ ಜನಾಂಗದಿಂದ ಹೇಗೆ

ಸಂಸ್ಕೃತೀಕರಣಗೊಂಡವು ಎಂಬುದಕ್ಕೆ ಹಿ.ಚಿ. ಬೋರಲಿಂಗಯ್ಯನವರು ತಮ್ಮ ಉಜ್ಜನಿ ಚೌಡಮ್ಮ ಗ್ರಂಥದಲ್ಲಿ ಹೇಳಿದ್ದಾರೆ. "ಹರಪ್ಪ ಸಂಸ್ಕೃತಿಯಲ್ಲಿ ಒಂದು ಕುತೂಹಲಕರವಾದ ಮುದ್ರೆ ದೊರೆತಿದ್ದು ಇದು ಕೃಷಿ ದೃಶ್ಯಕ್ಕೆ ಸಂಬಂಧಿಸಿದ್ದಾಗಿದೆ. ಈ ಮುದ್ರಿಕೆಯಲ್ಲಿ ಒಂದು ಸ್ತ್ರೀ ವಿಗ್ರಹವು ಆಕೆಯ ಒಂದು ಸಸ್ಯವು ಹುಟ್ಟಿರುವಂತೆ ಚಿತ್ರಿಸಲಾಗಿದೆ. ಇದರ ಇನ್ನೊಂದು ಬದಿಯಲ್ಲಿ ಸ್ತ್ರೀ ಪುರುಷರ ಚಿತ್ರಗಳಿವೆ. ಒಬ್ಬ ಮನುಷ್ಯನು ನೇಗಿಲಿನಂಥ ಆಯುಧವನ್ನು ಹಿಡಿದಿದ್ದಾನೆ. ಈ ಚಿತ್ರದಲ್ಲಿರುವ ಮನುಷ್ಯ ಉಳಿಮೆ ಮಾಡುವ ರೈತನೆಂದು ಭಾವಿಸಲಾಗಿದೆ. ಗರ್ಭದಿಂದ ಸಸ್ಯವು ಹೊರಬರುತ್ತಿರುವುದೇ ಆಕೆಯನ್ನು ಮಾತೃದೇವತೆಯೆಂದು ಹೇಳಲಾಗಿದೆ. ಈಕೆಯನ್ನೆ ಶಾಕಾಂಬರಿ ಎಂದು ಗುರುತಿಸುತ್ತಾರೆ'.[೪೩]

'ಪಶ್ಚಿಮ ಭಾರತದ ವಲಸೆಗಾರರು ಮತ್ತು ಪಶುಪಾಲಕರನ್ನು ಕುರಿತು ವಿಸ್ತೃತ ಅಧ್ಯಯನ ನಡೆಸಿರುವ ಸೊಂಥಮ್ಮೈರ್ ಎಂಬ ವಿದ್ವಾಂಸ, ವಲಸೆಗಾರರಲ್ಲಿ ಪ್ರಚಲಿತವಿರುವ ಸಪ್ತ ಮಾತೃಕೆಯರ ಆರಾಧನೆ ಕುರಿತು ವಿಶೇಷ ಬೆಳಕು ಚೆಲ್ಲುತ್ತಾರೆ. ಇದರ ಪ್ರಕಾರ ಅಕ್ಕ-ತಂಗಿಯವರೆನಿಸಿದ ಈ ಏಳು ಜನ ಸಹೋದರಿಯರು ಅಥವಾ ದೈವಗಳಾಗಿದ್ದು ಮತ್ತು ಅವರು ಹೋದಲೆಲ್ಲಾ ಅವರ ದೇವತೆಯರನ್ನು ಹೊತ್ತೊಯ್ಯುತ್ತಿದ್ದರು.'[೪೪]

ಅಲೆಮಾರಿ ಬುಡಕಟ್ಟುಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ತಮ್ಮ ವಾಸವನ್ನು ಬದಲಾವಣೆ ಮಾಡುತ್ತಾ ತಮ್ಮ ಜೊತೆಗೆ ದೈವವನ್ನು ಆರಾಧಿಸುತ್ತಾರೆ. ಅವರು ಬೀಡುಬಿಟ್ಟ ಸ್ಥಳದಲ್ಲಿಯೇ ದೈವವನ್ನು ಸ್ಥಾಪಿಸುತ್ತಾರೆ. ಇಂತಹ ಆರಾಧಕರ ಹಿನ್ನೆಲೆಯಲ್ಲಿಯೇ ಬರುವ ಗೊಂದಲಿಗರು ಗೊಂದಲ ಕಾರ್ಯದಲ್ಲಿ ಅಂಬಾಭವಾನಿ ಅಥವಾ ತುಳಜಾ ಭವಾನಿಯನ್ನು ಸ್ಥಾಪಿಸಿ ಗೊಂದಲ ಹೇಳುತ್ತಾರೆ.

ಮಾತೃಪ್ರಧಾನ ಕುಟುಂಬವನ್ನೇ ಪಾಲಿಸಿಕೊಂಡು ಬಂದಿರುವ ಗೊಂದಲಿಗರು ಸಹಜವಾಗಿ ಶಕ್ತಿಯ ಆರಾಧಕರಾಗಿದ್ದಾರೆ. ಶಕ್ತಿಯ ಅವತಾರಗಳನ್ನು ಶಕ್ತಿಸ್ವರೂಪವನ್ನು ಅವರ ಹಾಡು-ಕಥೆ, ಪೂಜೆ, ಹಾಗೂ ಅವರ ಜೀವನ ಕ್ರಮದಲ್ಲಿ ಕಾಣುತ್ತೇವೆ. ಗೊಂದಲದ ಕಥೆ ಹಾಡುಗಳಲ್ಲಿ ಗುಡ್ಡದ ಯಲ್ಲಮ್ಮ ಚಿಂಚಲಿ ಮಾಯಮ್ಮನ, ಹಾಡುಗಳನ್ನು ಹಾಗೂ ಅಂಬಾಭವಾನಿಯ ಚರಿತೆಯನ್ನು ಹೇಳಲಾಗುತ್ತದೆ. ಕೆಲವು ಮಾತೃದೇವತೆಯರನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ತುಳಜಾಭವಾನಿ / ಅಂಬಾಭವಾನಿ**

ಸಪ್ತ ಮಾತೃಕೆಯರಲ್ಲಿ ಒಬ್ಬಳಾದ ಅಂಬಾಭವಾನಿ ಅಥವಾ ತುಳಜಾಭವಾನಿ ದುಷ್ಟರ ಸಂಹಾರಕ್ಕಾಗಿ ಅವತರಿಸಿದ ಅವರು 'ದುಷ್ಟ ಸಂಹಾರ ಶಿಷ್ಟ ಪರಿಪಾಲಕಳು ಎಂಬ ತಿಳುವಳಿಕೆ ಗೊಂದಲಿಗರದ್ದು. ತುಳಜಾಭವಾನಿಯ ಉಲ್ಲೇಖವನ್ನು "ತ್ರೈಲೋಕ್ಯ ಮಲ್ಲ (೨ನೇ ತೈಲಪ) ಚಾಲುಕ್ಯ ಮನೆತನದ ರಾಮಚಂದ್ರ ಯಾದವನ ಶಾಸನ. ಕದಂಬ ಕುಲದ ಮರುಡದೇವನ

ಶಾಸನವಿದೆ ಮತ್ತು ಕಾಟಿ ಊರಲ್ಲಿ ತುಳಜಾಭವಾನಿಯ ಉಲ್ಲೇಖವಿದ್ದ ಫೆರೋಜಶಹಾನ ಬಹಮನಿ ಕಾಲದ ಮಹತ್ವದ ಶಾಸನವಿದೆ. ಕಾಟಿ ಸಾವರಗಾವದಲ್ಲಿಯ ನಾಲ್ಕು ಮರಾಠಿ ಶಾಸನಗಳನ್ನು ಸಂಪಾದಿಸಿರುವ ಡಾ. ತುಳಪುಳೆಯವರು ತುಕಾಯಿ ಮಂದಿರದ ಸಂದರ್ಭದಲ್ಲಿ ಹೇಳುವುದೇನೆಂದರೆ 'ತುಳಜಾಪುರದ ಪ್ರಸಿದ್ಧ ತುಳಜಾಭವಾನಿ ಮಂದಿರದ ಚಿಕ್ಕ ಪ್ರತಿಕೃತಿಯಾಗಿದೆ. ಅಂಬಾದೇವಿಯ ಉಲ್ಲೇಖವಿರುವ ಈ ಶಾಸನವು ಕದಂಬ ಮರುಡದೇವನ ಕಾಲದ್ದು ಮಹಾಮಂಡಲೇಶ್ವರನಾದ ಮರುಡದೇವನು ರಾಜ್ಯವಾಳುತ್ತಿದ್ದಾಗ ಅವನ ಸೇವಕ ಅಂಬಾದೇವಿಯ ಮಂದಿರಕ್ಕೆ ತೋಟದ ಇಪ್ಪತ್ತನೇಯ ಭಾಗವನ್ನು ದಾನ ಮಾಡಿದರು."[೪೫] ಎಂಬ ಮಾಹಿತಿ ಲಭ್ಯವಿದೆ.

"ಭವಾನಿಯು ಅಷ್ಟಭುಜ ಮಹಿಷ ಮರ್ದಿನಿಯ ರೂಪದಲ್ಲಿದ್ದಾಳೆ. ಆಕೆಯ ಮಸ್ತಕದಲ್ಲಿ ಸಯೋನಿ ಶಿವಲಿಂಗವಿದೆ. ಕೈಯಲ್ಲಿ ತ್ರಿಶೂಲ ಬಾಣ, ಶಂಖ, ಚಕ್ರ, ಧನುಷ್ಯ ಪಾನಪಾತ್ರೆ ಮತ್ತು ಮಹಿಷಾಸುರನ ದೇಹವನ್ನು ಹತ್ತಿಕ್ಕಿದ ಎರಡು ಕಾಲುಗಳ ನಡುವೆ ಮಹಿಷಾಸುರನ ತಲೆ ಬಿದ್ದಿದೆ. ದೇವಿ ಮುಖದ ಬಲ-ಎಡಕ್ಕೆ ಚಂದ್ರ ಸೂರ್ಯರನ್ನು ಕೆತ್ತಲಾಗಿದೆ. ದೇವಿ ವಾಹನ ಸಿಂಹವಿದೆ. ಕೆಳಗೆ ಮಾರ್ಕಂಡೆಯ ಋಷಿಯಿದ್ದಾನೆ. ಎಡಕ್ಕೆ ಭವಾನಿಯು ಪೊರೆದ ಶಿರದ ಮೇಲೆ ದೇಹವನ್ನು ಇರಿಸಿದ ತಪೋಮಗ್ನಸತಿ ಅನಸುಯೆಯಿದ್ದಾಳೆ. "[೪೬] ಮಾರ್ಕಂಡೆಯ ತಪಸ್ವಿಗೆ ಒಲಿದು ಅಲ್ಲಿ ಬಂದು ತುಳಾಜಾಪೂರದಲ್ಲಿ ನೆಲೆಸಿದ್ದಾಳೆ ಎಂಬುದು ಅಲ್ಲಿ ಜನರ ಅಭಿಪ್ರಾಯವಾಗಿದೆ. ಮಹಾಸತಿ ಅನಸೂಯಾಳು ಸಹ ಆ ಭವಾನಿಯ ಭಕ್ತಳಾಗಿದ್ದಳು ಎಂಬುದು ಪುರಾಣಗಳ ಅಭಿಪ್ರಾಯ. ಇಂಥಹ ಮಹಿಮಾ ಶಕ್ತಿಯುಳ್ಳ ಅಂಬಾಭವಾನಿಯನ್ನು ಗೊಂದಲಿಗರು ತಮ್ಮ ಗೊಂದಲ ಕಾರ್ಯದಲ್ಲಿ ಸ್ತುತಿಸುತ್ತಾರೆ.

"ಆದಿಶಕ್ತಿ ಮಾಯಾ ಜನನಿ ಗೊಂದಲಹಾಕುವೆ
ಮಾಯಾ ಜನನಿ ಅಂಬಾದೇವಿ ಗೊಂದಲ ಹಾಕುವೆ
ಉಧೋ ಉಧೋ ಅಂಬಾದೇವಿಗೊಂದಲ ಹಾಕುವೆ
ದುರ್ಗದ ದುರ್ಗಾದೇವಿ ಗೊಂದಲ ಹಾಕುವೆ
ಆನಂದದ ಅಂಬಾದೇವಿ ಗೊಂದಲ ಹಾಕುವೆ "[೪೭]

ಎಂದು ದೇವಿಯನ್ನು ಆಹ್ವಾನಿಸುತ್ತಾರೆ.

"ಮಂಗಳೂರಿನಲ್ಲಿರುವ ಶಿವಾಜಿ ಮರಾಠರು ಇವರು ಶಿವಾಜಿಯ ನೌಕಾದಳದ ಸೇವೆಯಲ್ಲಿದ್ದರು ಹಾಗೂ ಉಡುಪಿಯ ಮರಾಠರು ಸಹ ತುಳಜಾಭವಾನಿಯ ಉಪಾಸಕರು. ಇವರು ತುಳಜಾಪೂರಕ್ಕೆ ಸ್ಥಳಾಂತರಗೊಂಡ ನಂತರ ಸ್ಥಳೀಯ ದೇವಿ ಮಂದಿರದಲ್ಲಿಯೇ ಗೊಂದಳ ವಿಧಿಯನ್ನು ನಡೆಸುತ್ತಿದ್ದಾರೆ. ಕನ್ನಡದ ಜೊತೆಗೆ ಮರಾಠಿ ಭಾಷೆಯಲ್ಲಿ ಆಕೆಯ

ಭಕ್ತಿಗೀತೆಯನ್ನು ಗೊಂದಳದ ಕಾಲಕ್ಕೆ ಬಳಸುತ್ತಾರೆ. ಇಲ್ಲಿ ಕನ್ನಡ ಹಾಗೂ ಮರಾಠಿ ಭಾಷೆಯ ಸಮನ್ವಯವನ್ನು ಕಾಣುತ್ತೇವೆ. ಮಹಾರಾಷ್ಟ್ರದ ದೇವಿಯ ಉಪಾಸಕರಂತೆ, ವಿಧಿಯನ್ನು ಕೈಗೊಳ್ಳುವ ಪ್ರಮುಖ ಕಲಾವಿದನನ್ನು ' ನಾಯಿಕ ' ಎಂದು ಕರೆಯಲಾಗುತ್ತದೆ. ಇವನು ಶ್ರದ್ಧೆಯಿಂದ ತುಳಜಾಭವಾನಿಯ ಹೆಸರನ್ನು ಉಲ್ಲೇಖಿಸುತ್ತಾನೆ.

"ಯಾವ ದೇಶದಿಂದ ಬಂದೆ ತಾಯಿ ? ಯಾದೇಶದಿಂದ ಬಂದೆ ?

ತುಳಜಾಪುರದಿಂದ ಬಂದಳು ತಾಯಿ ।

ತುಳಜಾಪುರದಿಂದ ಬಂದು ತಾಯಿ ।

ಎಂದು ಗಾಯಕರು ತುಳಜಾಪೂರವನ್ನು 'ತುಳದಾಪುರ' ಎಂದು ಉಚ್ಚರಿಸುತ್ತಾರೆ."[೪೮]

**ಎಲ್ಲಮ್ಮ**

ಜನಪದದಲ್ಲಿ ಎಲ್ಲಮ್ಮನ ಪತಿವೃತಾ ಧರ್ಮವನ್ನು ಸಾರುವ ಹಲವಾರು ಗದ್ಯಕಥೆಗಳಿವೆ. ಎಲ್ಲಮ್ಮನ ಸೌಮ್ಯ ಅವತಾರವನ್ನು ಪ್ರದರ್ಶಿಸುವ ಎಲ್ಲಮ್ಮನ ಕಥೆ, ರೇಣುಕಾ ಮಾಹಾತ್ಮೆಯಂತಹ ಕಥೆಗಳೊಂದಿಗೆ ಆಕೆಯ ರೌದ್ರ ಅವತಾರವನ್ನು, ಎಲ್ಲಮ್ಮ ರೇಣುಕೆಯಾಗಿ, ಮಹಿಷಾಸುರ ಮರ್ಧಿನಿಯಾಗಿ, ದುಷ್ಟರ ಸಂಹಾರಿಣಿಯಾಗಿ ಕಾಣುವ ಕಥೆಗಳನ್ನು ಗೊಂದಲಿಗರು ಹೇಳುತ್ತಾರೆ. ಸೌಮ್ಯ ಅವತಾರದಲ್ಲಿ ರೇಣುಕರಾಜನ ಮಗಳಾದ ರೇಣುಕೆ, ಜಮದಗ್ನಿಯನ್ನು ಮದುವೆಯಾಗಿ ತನ್ನ ಪತಿವ್ರತಾ ಧರ್ಮದ ಪ್ರಭಾವದಿಂದ ಹಾವಿನ ಸಿಂಬಿ ಮಾಡಿಕೊಂಡು ಉಸುಕಿನ ಕೊಡದಲ್ಲಿ ನೀರು ತರುವುದರ ಮೂಲಕ ಪತಿಯನ್ನು ಸಾಕ್ಷತ್ಕರಿಸುವುದು ಒಂದು ಕಡೆಯಾದರೆ, ಅದೇ ರೇಣುಕೆಯ ಮನಸ್ಸು ಚಂಚಲವಾಗಿ ಪತಿಯ ಶಾಪಕ್ಕೆ ಗುರಿಯಾಗುತ್ತಾಳೆ. ಇಲ್ಲಿ ಗೊಂದಲಿಗರು ಹೆಣ್ಣಿನ ಮನಸ್ಸು ಹಾಗೂ ಪತಿವ್ರತಾ ಧರ್ಮದ ಬಗ್ಗೆ ಎಚ್ಚರಿಕೆಯ ನುಡಿಯನ್ನಾಡುತ್ತಾರೆ. ಸಂಸಾರ ಅಂದರೆ ಲೋಕಗೆಲ್ಲಲು ತನು, ಮನ, ಭಾವ ಶುದ್ಧಿಯಾಗಿರಬೇಕು ಎಂದು ಗೊಂದಲಿಗರು ತಿಳಿದುತ್ತಾ' ಸೊರುತಿಹುದು ಮನೆಯ ಮಾಳಿಗೆ ಅಜ್ಞಾನದಿಂದ ಸೊರುತಿಹುದು ಮನೆಯ ಮಾಳಿಗೆ'[೪೯] ಎಂದು ಶಿಶುನಾಳ ಶರೀಫರ ಪದವನ್ನು ಹಾಡುತ್ತಾರೆ. ತತ್ವ ಸಂವಾದದೊಂದಿಗೆ ಮತ್ತೆ ರೇಣುಕೆಯ ಕಥೆಯನ್ನು ಪ್ರಾರಂಭಿಸುತ್ತ ಅವಳ ರೌದ್ರ ಅವತಾರವನ್ನು ತಮ್ಮದೇ ಆದ ಧಾಟಿಯಲ್ಲಿ ಹೇಳುತ್ತಾರೆ.

"ಎಲ್ಲಮ್ಮನನ್ನೇ ರೇಣುಕೆಯೆಂದು ಭಾವಿಸಿ ಅವಳ ಸೌಮ್ಯ ಗುಣವನ್ನು ಚಿತ್ರಿಸುವ ಈ ಕಥೆಗಳ ಜೊತೆಗೆ ಅವಳ ಉಗ್ರತೆಯನ್ನು ಪರಿಚಯಿಸುವ ಈ ಕಥೆಯನ್ನು ಪರಿಶೀಲಿಸುವುದು ಮುಖ್ಯ. ಈ ಕಥೆಯಲ್ಲಿ ರೇಣುಕೆಯನ್ನು ಮಹಿಷಾಸುರ ಮರ್ಧಿನಿಯನ್ನಾಗಿ ಕಾಣುವ ಗೊಂದಲಿಗರ ಪ್ರಯತ್ನವನ್ನು ನೋಡಬಹುದು. ಮಹಾ ಉಗ್ರದೇವತೆಯಾಗಿ ಎಲ್ಲಮ್ಮ ದೇವತೆಗಳೆಲ್ಲರ ಹಾರೈಕೆಯಂತೆ ಜನ್ಮ ಪಡೆದವಳಾಗಿ ಇಲ್ಲಿ ಚಿತ್ರಿತಳಾಗಿದ್ದಾಳೆ. ಅವಳ 'ಉಗಮ' ರೇಣುಕಾ ಮಹಾತ್ಮೆ

ಕಥೆಯಲ್ಲಿ ಅತ್ಯಂತ ಸ್ವಾರಸ್ಯಕರ ರೀತಿಯಲ್ಲಿ ನಿರೂಪಿತವಾಗಿದೆ. ದೇವಾನುದೇವತೆಗಳೆಲ್ಲ ಸೇರಿ ಮಾಡಿದರು, ಮಹಿಷಾಸುರನನ್ನು ಕೊಲ್ಲುವ ಮಹಾಶಕ್ತಿ ದೇವತೆಯನ್ನು ಪಡೆಯಲು ಯಾಗ, ಈ ಸಮಾರಂಭದಲ್ಲಿ ' ರಣೋರಾಯನ ಕಣ್ಣೊಳಕ್ಕೆ ಗಂಧದ ಹೊಗೆ ಹೋಗಿ ಕಣ್ಣಿನಲ್ಲಿ ಒಂದು ಹನಿ ನೀರು ಬಂದಿತು. ಒಂದು ಎಳೆನೀರನ್ನು ' ಮೊಗಳು ' ತೆಗೆದು ಆ ಕಣ್ಣೀರನ್ನು ಅದಕ್ಕೆ ಹಾಕಿ ಆಹುತಿಮಾಡಿದರು. ಯಾಗದ ಬೆಂಕಿಯಿಂದ ಎಲ್ಲಮ್ಮ ಅವತರಿಸಿದಳು ಎಂದು ಗೊಂದಲಿಗರು ಹೇಳುತ್ತಾರೆ.

ಎಲ್ಲಮ್ಮನ ಮೂಲದ ಬಗ್ಗೆ ಹೊಸ ದೃಷ್ಟಿಯನ್ನು ಹೊಂದಿರುವ ಈ ಪ್ರಸಂಗ ಕಥೆಯ ಮೂಲ ಉದ್ದೇಶಕ್ಕೆ ಪೂರಕವಾಗಿಯೇ ಇದೆ. ಇಲ್ಲಿ ಎಲ್ಲಮ್ಮ ಪತಿಯ ಅಗ್ರಹಕ್ಕೆ ಈಡಾಗಿ ಮಗನ ಕೊಡಲಿಗೆ ಆಹುತಿಯಾಗುವ ಅಸಹಾಯಕ ಹೆಣ್ಣಾಗಿ ಕಾಣದೆ ಲೋಕಕಂಟಕನಾದ ದೈತ್ಯನೊಬ್ಬನ ಸಂಹಾರಕ್ಕಾಗಿಯೇ ಅವತರಿಸಿದ ಮಹಾಶಕ್ತಿಯಾಗಿದ್ದಾಳೆ. ಯಾಗದ ಅಗ್ನಿಯಿಂದ ಹುಟ್ಟಿ ಬಂದ ಉಗ್ರ ಸ್ವರೂಪಿಣಿಯಾಗಿದ್ದಾಳೆ. ಯಾಗದ ಹೊಗೆ ದೇವತೆಗಳ ನೋವಿನ ಬೇಗೆಯಾಗಿ 'ರಣೋರಾಯ'ನ ಕಣ್ಣಿಗೆ ತಟ್ಟಿ ಅಲ್ಲಿಂದ ಜಿಗಿದ ಕಣ್ಣೀರೇ ಎಲ್ಲಮ್ಮನ ಉಗ್ರತೆಗೆ ಕಾರಣವಾಗಿದೆ. ಅವಳು ಜಮದಗ್ನಿ ಋಷಿಯನ್ನು ಹಾಗೂ ಮಗ ಪರುಶರಾಮನನ್ನು ಪಡೆದ ಪ್ರಸಂಗ ಅಪೂರ್ವವಾದ ರೀತಿಯಲ್ಲಿ ಚಿತ್ರಿತವಾಗಿದೆ. ಪ್ರಸ್ತುತ ರಚನೆಯಲ್ಲಿ ಶಿವಪಾರ್ವತಿಯರು ಏಳು ಕೋಟಿ ಮೈಲಾರಲಿಂಗ, ದೇವಾನುದೇವತೆಗಳೆಲ್ಲ ಎಲ್ಲಮ್ಮ ದೇವಿಯನ್ನು ಕರೆದುಕೊಂಡು ಹನ್ನೆರಡು ಗಾವುದ ನಡೆದು ಬಂದಿದ್ದಾರೆ. ಜಮದಗ್ನಿ ಮಹಾಮುನಿ ತಲೆಕೆಳಗಾಗಿ ನಿಂತು ತಪಸ್ಸು ಮಾಡುತ್ತಿದ್ದಾನೆ. ಅವನ ಘೋರ ತಪಸ್ಸನ್ನು ನೋಡಿ ಮೆಚ್ಚಿದ ಪರಮೇಶ್ವರ. "ಅಯ್ಯ ಭಕ್ತನೆ ನಾವು ನಿನಗೆ ಒಂದು ಕನ್ಯೆಯನ್ನು ತಂದಿದ್ದೇವೆ. ನೀನು ಲಗ್ನವಾಗು" ಎಂದು ಉಚ್ಚರಿಸಿದ. ಜಮದಗ್ನಿ ದೇವವಾಣಿಯನ್ನು ಗುರುತಿಸಿ ಕಣ್ಣು ಮುಚ್ಚಿಕೊಂಡೆ ವಂದಿಸಿ ಮರುನುಡಿದನು. "ನಾನು ಈ ಮುಚ್ಚಿದ ಕಣ್ಣನ್ನು ಬಿಟ್ಟಾಗ ಎರಡು ಕೆಂಡಗಳು ಬರುತ್ತವೆ. ಆ ಕೆಂಡವನ್ನು ಯಾರು ಒಂದೊಂದು ಕೈಯಲ್ಲಿ ಒಂದನ್ನು ತೆಗೆದುಕೊಂಡು ಎರಡನ್ನು ಒಂದರ ಮೇಲೊಂದು ಇಟ್ಟು ಒತ್ತುತ್ತಾರೆ. ಆ ಕನ್ಯೆಯನ್ನು ನಾನು ಲಗ್ನವಾಗುತ್ತೇನೆ." ಎಂದನು ದೇವತೆಗಳೆಲ್ಲ ಹಿಂದೆ ಸರಿದರು. ಜಮದಗ್ನಿ ಕಣ್ಣುಬಿಟ್ಟನು. ಆಗ ಎರಡು ಉರಿಯುವ ಕೆಂಡಗಳು ಅವನ ಕಣ್ಣಿನಿಂದ ಹೊರಗೆ ಚಿಮ್ಮಿದವು. ಎಲ್ಲಮ್ಮ ದೇವಿ ಅವುಗಳನ್ನು ತನ್ನ ಕೈಯಲ್ಲಿ ಧರಿಸಿ ಒಂದರ ಮೇಲೆ ಒಂದನ್ನು ಇಟ್ಟು ಒತ್ತಿದಳು. ಅವಳ ಅಂಗೈಯಲ್ಲಿ ಒಂದು ರಾಗಿಯ ಕಾಳಿನ ಗಾತ್ರದ ಗುಳ್ಳೆಯಾಯಿತು. ಆ ಗುಳ್ಳೆ ಬೆಳೆದು ದೊಡ್ಡದಾಯಿತು.

'ಗುಳ್ಳೆನ ಗುಳ್ಳೆ ಬೆಳೆಯುತಾದೆ
ಗುಳ್ಳಿನ ಗುಳ್ಳೆ ಕಲ್ಯಾಣದಾತೆ
ಶಿವನೇ ಎನ್ನ ಮಾದೇವ

ಒಂದು ಅಂಬೋ ಒಂದು ದಿವ್ವಾವೆ
ಒಂದು ತಿಂಗಳು ತುಂಬ್ಯಾವೆ  ಶಿವನೇ ಎನ್ನ ಮಾದೇವ
ಎರಡು ಅಂಬೋ ಎರಡು ದಿವ್ವಾವೆ
ಎರಡು ತಿಂಗಳು ತುಂಬ್ಯಾವೆ  ಶಿವನೇ ಎನ್ನ ಮಾದೇವ"[೫೦]

ಹೀಗೆ ಒಂಬತ್ತು ತಿಂಗಳು ಒಂಬತ್ತು ದಿವಸದಲ್ಲಿ ಮಹಾದೇವಿಯ ಕೈಯ ಗುಳ್ಳೆ ಒಡೆದು ಏಳು ವರ್ಷದ ಪರುಶುರಾಮ ಜನಿಸಿದ್ದಾನೆ ಎಂದು ಪರಶುರಾಮನ ಹುಟ್ಟಿನ ಬಗೆಗೆ ಕಥೆ ಹೇಳುತ್ತಾರೆ.

ಎಲ್ಲಮ್ಮನ ಮಗ ಪರುಶುರಾಮ ಎಂಬ ಅಂಶವನ್ನು ಇದುವರೆಗೆ ಪ್ರಸ್ತಾಪಿಸಿದ ಎಲ್ಲ ಕಥೆಗಳು ಒಪ್ಪಿಕೊಳ್ಳುತ್ತವೆ. ಆದರೆ ಅವನ ಜನನದ ಬಗ್ಗೆ ಒಂದೊಂದು ಕತೆಯೂ ಒಂದೊಂದು ರೀತಿಯ ಕೌತುಕವನ್ನು ಚಿತ್ರಿಸುತ್ತವೆ. ಜಮದಗ್ನಿಯ ಬೆವರ ಹನಿಯೇ ಹೂವಾಗಿ ತೇಲಿ ಪರುಶರಾಮನ ಜನನಕ್ಕೆ ಕಾರಣವಾಯಿತು ಎಂಬ ಕಥೆ ರಮ್ಯತೆಯನ್ನು ಹುಟ್ಟಿಸುತ್ತದೆ. ತಾಯಿ ಕನ್ಯೆಯಾಗಿ ಮೂಡಿ ಬಂದರೆ, ಮಗ ತಂದೆಯ ತಪಸ್ಸಿನ ದಿವ್ಯಾಗ್ನಿಯಿಂದ ಮೂಡಿದವನು. ತಾಯಿ–ಮಗ ಜೊತೆಗೂಡಿ ಮಹಿಷಾಸುರ ಸಂಹಾರಕ್ಕೆ ಹೊರಡಬೇಕಾಗಿದೆ. ಅದನ್ನು ಮೊದಲು ಪ್ರಚೋಧಿಸುವವನು ಪರುಶರಾಮನೆ ಉಕ್ಕಿನ ರಥವೇರಿ ತಾಯಿ–ಮಗ ಹೋದರು ಎಂದು ಕಥೆಗಾರ ವರ್ಣಿಸುತ್ತಾನೆ.

ಗೊಂದಲಿಗರ ಕಥೆ ಅನಗತ್ಯವಾದುದೇನನ್ನು ಚಿತ್ರಿಸುವುದಿಲ್ಲ. ಕತೆಯನ್ನು ವಿಸ್ತರಿಸದೆ ಆದಷ್ಟು ತೀರ್ವವಾಗಿ ಗುರಿಯ ಕಡೆ ಸಾಗುವುದೇ ಕಥೆಗಾರನ ದೃಷ್ಟಿ. ಜಮದಗ್ನಿಯೊಡನೆ ರೇಣುಕೆಯ ಸಂಬಂಧವನ್ನು ಕಲ್ಪಿಸಿದ ಮೇಲೆ ಜೊತೆಯಲ್ಲಿ ಬಂದಿದ್ದ ದೇವತೆಗಳಲ್ಲಿ ಏನಾದರೂ ಎಂಬುದರ ವರ್ಣನೆಗೆ ಕತೆಗಾರ ತೊಡಗುವುದಿಲ್ಲ. ಜಮದಗ್ನಿ ಎಲ್ಲಮ್ಮ ಇವರ ಸಂಬಂಧವನ್ನು ಕ್ಷಣಾರ್ಧದಲ್ಲಿ ಚಿತ್ರಿಸಿ ಪರುಶುರಾಮನ ಜನನವೊಂದೇ ತನ್ನ ಗುರಿ ಎಂಬಂತೆ ತಾಯಿ–ಮಗನನ್ನು ಮಹಿಷಾಸುರನ ಕಡೆಗೆ ನಿರ್ದೇಶಿಸುತ್ತಾನೆ.

ಪರುಶರಾಮ ಇಲ್ಲಿ ತಾಯಿಯನ್ನು ಮಹಿಷಾಸುರ ಸಂಹಾರಕ್ಕೆ ಪ್ರಚೋಧಿಸುವ ಶಕ್ತಿಯಾಗಿ ಕಂಡು ಬರುತ್ತಾನೆ. ತಾನು ನಿಂತು ಯುದ್ದ ಮಾಡದಿದ್ದರೂ ತನ್ನ ತಾಯಿಯ ಮಹಾಶಕ್ತಿಯನ್ನು ಅರಿತಿದ್ದ ಚಾಣಾಕ್ಷನಾಗಿ ಕಾಣಿಸಿಕೊಳ್ಳುತ್ತಾನೆ. ಉತ್ಸಾಹದಿಂದ ಲವಲವಿಕೆಯಿಂದ ಮಹಾಶಕ್ತಿಯನ್ನು ಮಿಂಚಿನ ವೇಗದಲ್ಲಿ ಶತೃವಿನ ಸಮೀಪಕ್ಕೆ ಕೊಂಡೆಯ್ಯುತ್ತಾನೆ. ಯಾವ ಹಂತದಲ್ಲಿ ಶತೃವನ್ನು ಯಾವ ರೀತಿಯಲ್ಲಿ ಎದುರಿಸಬೇಕು ಯಾವ ತಂತ್ರವನ್ನು ಬಳಸಬೇಕು ಎಂಬ ವಿಷಯಗಳೆಲ್ಲ ಅವನಿಗೆ ಕರತಲಾಮಲಕವಾಗಿರುತ್ತದೆ. ಮಹಿಷಾಸುರನ ಅಮೃತ ತೋಟಕ್ಕೆ ತಾಯಿಯನ್ನು ಅವನು ಕರೆತಂದ ಪ್ರಸಂಗ ಇದನ್ನು ಸ್ಪಷ್ಟಪಡಿಸುತ್ತದೆ. ಏಳು ಹೆಡೆ ಸರ್ಪವನ್ನು ಬಾರಕೋಲು ಮಾಡಿಕೊಂಡು ಉಕ್ಕಿನ ರಥದಲ್ಲಿ ಕುಳಿತು ಹನ್ನೆರಡು ಗಾವುದ ಬಂದಾಗ ಪರುಶರಾಮ

'ಬಾಯಿ ಒಣಗ್ಯಾವೆ ಅವ್ವ ಜಿ ಜೀ

ನೀರು ಕುಡಿಯಬೇಕವ್ವ ಹರೇ ರಾಮ ದೀ ಜಿ ದೀ ಜಿ '

ಎಂದು ರಥವನ್ನು ನಿಲ್ಲಿಸುತ್ತಾನೆ. ಮಹಿಷಾಸುರನ ಅಮೃತ ತೋಟ ಅಲ್ಲಿದೆ ಯಾರಾದರೂ ಅದರ ಒಂದು ಎಲೆಯನ್ನೋ ಹಣ್ಣನ್ನೋ ನೆಲಕ್ಕೆ ಬೀಳಿಸಿದರೆ, ಒಂದೊಂದಕ್ಕೆ ಒಂದೊಂದು ಕೋಟಿ ರಾಕ್ಷಸರ ಜನನವಾಗುತ್ತದೆ. ಎಲ್ಲಮ್ಮ ದೇವಿಯ ವೀರಾವೇಶವನ್ನು ಕೋಪಾಗ್ನಿಯನ್ನು ಕೆರಳಿಸಲು ಆ ಮೂಲಕ ರಕ್ಕಸ ಕುಲವನ್ನು ನಿರ್ನಾಮ ಮಾಡಲು ಪರುಶುರಾಮ ತೊಡಗುವುದು ಇಲ್ಲಿ ಕಂಡು ಬರುತ್ತದೆ.

'ಬ್ಯಾಡಪ್ಪ ಮಗನೇ ಇದು

ರಾಕ್ಷಸರ ವನವೋ ಮಗನೇ ಹರೆ ರಾಮ ದಾಜಿ ದೀಜಿ'

ತಾಯಿ ಮಗನಿಗೆ ಬೇಡವೆಂದು ಹೇಳಿದರೂ ರಥದಿಂದ ಧುಮುಕಿ ಕೊಳದ ನೀರನ್ನು ಕಲಕಿ ಅಲ್ಲಿದ್ದ ಮರಗಳನ್ನೆಲ್ಲ ತನ್ನ ಸುಧಾಮ ಚಕ್ರದಿಂದ ಕೆಳಗುರುಳಿಸುತ್ತಾನೆ. ಕೂಡಲೆ ಕೋಟಿ ಕೋಟಿ ರಾಕ್ಷಸರು ಕಾಣಿಸಿಕೊಳ್ಳುತ್ತಾರೆ. ಅವರೆಲ್ಲರನ್ನು ಪರುಶುರಾಮ ಕ್ಷಣಾರ್ಧದಲ್ಲಿ ತನ್ನ ಚಕ್ರದಿಂದ ಕಡಿದುರುಳಿಸುತ್ತಾನೆ. ಅವರ ಒಂದೊಂದು ತೊಟ್ಟು ರಕ್ತ ನೆಲಕ್ಕೆ ಬೀಳುತ್ತಿದ್ದಂತೆಯೇ ಮತ್ತೆ ಕೋಟಿ ರಾಕ್ಷಸರು ಹುಟ್ಟಿಕೊಳ್ಳುತ್ತಾರೆ. ರಥದ ಮೇಲೆ ಕುಳಿತ ಎಲ್ಲಮ್ಮ ಇವೆಲ್ಲವನ್ನು ನೋಡಿ ತಟ್ಟನೆ ತನ್ನ ಭಂಡಾರದ ಚೀಲವನ್ನು ತೆಗೆದು, ನೆಲಕ್ಕೆ ಅಪ್ಪಳಿಸುತ್ತಾಳೆ. ಏಳು ಜನ ನಾಲಿಗೆಯ ದುರ್ಗಿಯರು ಕಾಣಿಸಿಕೊಳ್ಳುತ್ತಾರೆ. ಅವರೆಲ್ಲ ರಾಕ್ಷಸರ ನೆತ್ತರು ನೆಲಕ್ಕೆ ಬೀಳದಂತೆ ತಮ್ಮ ನೀಳ ನಾಲಿಗೆಗಳಿಂದ ನೆಕ್ಕಿಕೊಳ್ಳುತ್ತಾರೆ. ಅಮೃತವನ ನೆಲಸಮವಾಗುತ್ತದೆ. ರಥದಲ್ಲಿ ಕುಳಿತುಕೊಂಡೆ ಎಲ್ಲಮ್ಮ ತನ್ನ ಶಕ್ತಿಯನ್ನು ಪ್ರದರ್ಶಿಸಿ ಮಹಿಷಾಸುರನ ಮೂಲ ಬಲವನ್ನು ಮರಿಯುವ ಅಪೂರ್ವ ಸನ್ನಿವೇಶ ರೋಮಾಂಚಕಾರಕವಾದುದು.

ಮಹಿಷಾಸುರ ಮತ್ತು ಮೋಟಾಸುರರ ಪ್ರಸಂಗವೂ ಅಷ್ಟೇ ಸ್ವಾರಸ್ಯ ಪೂರ್ಣವಾಗಿ ಗೊಂದಲಿಗರ ಕಥನಗಳಲ್ಲಿ ಚಿತ್ರಿತವಾಗಿದೆ. ಮಹಿಷಾಸುರ ತಮ್ಮ ಮೋಟಾಸುರ ಅಣ್ಣ, ಮಹಿಷಾಸುರನಿಗೆ ಆರು ತಿಂಗಳು ನಿದ್ದೆ ಆರು ತಿಂಗಳು ಎಚ್ಚರ, ತಮ್ಮನನ್ನು ಎಚ್ಚರಿಸಬೇಕಾದರೆ, ಮೋಟಾಸುರ ಗಾಡಿಯ ಕಬ್ಬಿಣದ 'ಸಬಳ'ವನ್ನು ಕೆಂಪಗೆ ಕಾಯಿಸಿ ಅವನ ಮೂಗಿನಲ್ಲಿಡಬೇಕಾಯಿತು. ಆಗ ಮಹಿಷಾಸುರನಿಗೆ ಒಂದು ಸೀನು ಬಂತು ಆ ಸೀನಿನ ರಭಸಕ್ಕೆ ಕಾದಕಬ್ಬಿಣದ ಅಚ್ಚು ಮಾರುಗಾವುದ ದೂರ ಹೋಗಿ ಬಿದ್ದಿತು. ಮಹಿಷಾಸುರ ನಿದ್ದೆ ಹರಿದು ಮೇಲೆದ್ದ ತನ್ನ ಮೇಲೆ ಯುದ್ಧಕ್ಕೆ ಬಂದವಳು ಯಾರೋ ಹೆಂಗಸು ಎಂದು ಹಂಗಿಸುತ್ತಾನೆ.

"ಬಂದವಳು ಯಾರೀ ನೀನು ಜೀ

ಮೂರುಕಾಸಿನ ಹೆಂಗ್ಸು ನೀನು ಶಿವರಾಮರಾಜ ದೀಜಿ

ಲಿಂಗ ಮುಂದೆ ಅಡಿಗೆ ಮಾಡೊಳು ಜೀ
ಯುದ್ಧನಿನಗಲ್ಲ ವಾಪಸು ತಿರಗು ಶಿವರಾಮರಾಜ ದೀಜಿ.
ದೇವಿ ದೈತ್ಯನ ನುಡಿಗಳನ್ನು ಕೇಳಿ ಕುಪಿತಳಾಗುತ್ತಾಳೆ.
ನೀನು ಗಂಡುಸೆ ಆದ್ರೆ ಕೇಳು ಜೀ
ನನ್ನ ಮೇಲೆ ಯುದ್ದಕ್ಕೆ ಬಾ ಶಿವರಾಮು ದಾಜಿದೀಜಿ.

ಮಹಿಷಾಸುರ ಮೊದಲಕೆಗೆ ಮುನಿದೆದ್ದ ಎಳುತಾಳೆಯ್ಯ ಎತ್ತರಕ್ಕೆ. ಆರು ತಾಳೆಯ ಅಗಲಕ್ಕೆ ಬೆಳೆದು ನಿಂತ, ಗುಡ್ಡದಷ್ಟು ದಪ್ಪತಲೆ, ಗಾಡಿಯ ಚಕ್ರದಷ್ಟು ಅಗಲವಾದ ಕಣ್ಣುಗಳು ದಿಡ್ಡಿ ಬಾಗಿಲಿನಂಥ ಬಾಯಿಬಿಟ್ಟುಕೊಂಡು ಒಂದೊಂದು ರೊಮಕ್ಕೂ ಒಂದೊಂದು ಆಯುಧ ಕಟ್ಟಿಕೊಂಡು ಯುದ್ಧಕ್ಕೆ ಬಂದು ನಿಂತ ಅವನ ಘೋರ ರೂಪವನ್ನು ಪರುಶುರಾಮ ನೋಡಿ ಬೆರಗಾದ. ಎಲ್ಲಮ್ಮ ದೇವಿ ಏಳು ಹೆಡೆ ಸರ್ಪದ ಬಾರುಕೋಲಿನಿಂದ ದೈತ್ಯನಿಗೆ ಹೊಡೆದಳು.

"ದೇವಿ ಹೊಡೆದ ಹೊಡೆತ ಹಂಗ
ಅವರಿಗೆ ಇರುವೆ ಕಡಿದಾಂಗೆ, ಶಿವನೇ ಎನ್ನ ಮಾದೇವ
ಎಲ್ಲಮ್ಮ ಹೊಡೆದ ಹೊಡೆತ ಹಂಗ
ಅವಂಗ ನೊಣ ಕಡಿದಾಂಗ ಶಿವನೇ ಎನ್ನ ಮಾದೇವ."

ದೇವಿಯ ಏಟಿಗೆ ಜಗ್ಗಲಿಲ್ಲ ದೈತ್ಯ. ಅವನ ಹೊಡೆತಕ್ಕೆ ದೇವಿ ಹನ್ನೆರಡು ಗಾವುದಕ್ಕೆ ಹೋಗಿ ಬಿದ್ದಳು. ತಟ್ಟನೆ ಎದ್ದು ಮತ್ತೆ ದೈತ್ಯನ ಎದುರು ಕಾಣಿಸಿಕೊಂಡಳು, ಪಾತಾಳಕ್ಕೂ ಆಕಾಶಕ್ಕೂ ಒಂದು ಬಾಯಿ ಮಾಡಿ, ದೇವಿ ಕಾಣಿಸಿಕೊಂಡಳು. ಆ ಭಯಂಕರ ರೂಪನ್ನು ನೋಡಿ ಮಹಿಷಾಸುರ ಹೆದರಿ ತತ್‌ಕ್ಷಣವೇ ಒಂದು ಕೋಣವಾಗಿ ಓಡತೊಡಗಿದನು. ವೀರ ಪರುಶುರಾಮ ಛಂಗನೆ ಹಾರಿ ಕೋಣದ ಮೇಲೆ ಕುಳಿತನು. ಎಲ್ಲಮ್ಮ ಅಟ್ಟಿಸಿಕೊಂಡು ಓಡಿದಳು ಕೋಣವನ್ನು. ರಾಯಚೂರು ಬೆಟ್ಟದ ಮೇಲೆ ಪರುಶುರಾಮನನ್ನು ಕೋಣ ಕೆಡವಿ ಕೆರೆಯ ಕೆಸರಿನಲ್ಲಿ ಅಡಗಿಕೊಂಡಿತು. ದೇವಿ ಅಲ್ಲಿಗೂ ಹುಡುಕಿಕೊಂಡು ಬಂದಳು. ಕೆಸರಿನಲ್ಲಿ ಕಣ್ಣುಗಳನ್ನು ಪಿಳಿ ಪಿಳನೆ ಬಿಡುತ್ತ ಶರೀರವನ್ನೆಲ್ಲ ಕೆಸರಿನಲ್ಲಿ ಮುಚ್ಚಿ ಮಹಿಷಾಸುರ ಅಡಗಿದ್ದು ದೇವಿಯ ಕಣ್ಣಿಗೆ ಬೀಳುವುದು ತಡವಾಗಲಿಲ್ಲ. ಅವನನ್ನು ಕೆರೆಯಿಂದ ಹೊರಕ್ಕೆ ಎಳೆದು ಸಂಹಾರ ಮಾಡಿದಳು.

"ಅವನ ಹೊಟ್ಟೆ ಬಗೆದಾಳೊ
ರುಂಡಾ ಚೌಡಿಕೆ ಮಾಡ್ಯಾಳೊ ಶಿವನೇ ಮಾದೇವ
ಅವನ ಬೆರಳಿಂದ ದೇವ
ತಿರುವಳಿ ಕೋಲ ಮಾಡ್ಯಾಳೋ ಎನ್ನ ಮಾದೇವ

ಕರುಳನು ತೆಗೆದು ದೇವಿ
ತಂತಿಯ ಮಾಡ್ಯಾಳೋ ಶಿವನೇ ಎನ್ನ ಮಾದೇವ
ಹದಿನಾರು ಹಲ್ಲ ತೆಗೆದು
ಕವಡಿ ಸರವ ಮಾಡ್ಯಾಳೊ ಶಿವನೇ ಎನ್ನ ಮಾದೇವ "[೫೧]

ಮಹಿಷಾಸುರನನ್ನು ಕೊಂದು ಚೌಡಿಕೆಯನ್ನು ನುಡಿಸುತ್ತ ದೇವಿ ಶಿವನ ಸನ್ನಿದಿಗೆ ಹೋಗಿ ಮಹಿಷಾಸುರ ವಧೆಯ ಕತೆಯನ್ನೆಲ್ಲ ಸವಿಸ್ತಾರವಾಗಿ ಹೇಳಿದಳು.

ಗೊಂದಲಿಗರ ಈ ಕಥೆಯ ಉತ್ತರಾರ್ಧದ ಯುದ್ಧದ ವರ್ಣನೆಗಳಲ್ಲಿ ಗೊಂದಲಿಗರ ಕವಿ ಹೊಸ ಕಲ್ಪನೆಗಳ ವೈವಿಧ್ಯಮಯ ಸನ್ನಿವೇಶಗಳನ್ನು ತಂದಿದ್ದಾನೆ. ಶರೀರದ ರೋಮ ರೋಮಕ್ಕೂ ಆಯುಧಗಳನ್ನು ಕಟ್ಟಿಕೊಂಡು ಯುದ್ಧ ರಂಗಕ್ಕಿಳಿದ ದೈತ್ಯನ ಚಿತ್ರ ಅತಿಶಯವಾದುದು. ವರ್ಣನೆಯ ಅನುಭವಗಳು ತಟ್ಟನೆ ಹೃದಯವನ್ನು ಮುಟ್ಟುವಂತೆ ಪರಿಚಿತ ವಸ್ತುಗಳನ್ನು ಆರಿಸಿ ದೈತ್ಯನ ಘೋರ ರೂಪವನ್ನು ಅತ್ಯಂತ ಸಹಜವಾಗಿ ಕವಿ ಕಣ್ಣಿಗೆ ಕಟ್ಟಿಸುತ್ತಾನೆ. ಆರು ತಾಳೆಯಮರದ ಉತ್ತರಕ್ಕೆ ಅವನ ಬೆಳೆದು ನಿಂತು ಆ ಎತ್ತರಕ್ಕೆ ತಕ್ಕಂತೆ ಮೂರು ತಾಳೆಯ ಮರದ ಗಾತ್ರಕ್ಕೆ ಅವನ ಶರೀರ ತೋರಿತು. ಇಂಥ ರಕ್ಕಸ ದೇವಿಯ ವಿರಾಟ ರೂಪವನ್ನು ಕಾಣುತ್ತಿದ್ದಂತೆಯೇ ಕೋಣನಾಗಿ ಓಡತೊಡಗಿ ರಾಯಚೂರು ಕೆರೆಯ ಕೆಸರಿನಲ್ಲಿ ಶರೀರವನ್ನೆಲ್ಲ ಮುಚ್ಚಿ ಪಿಳಿ ಪಿಳನೆ ಕಣ್ಣು ಬಿಡುತ್ತಿದ್ದ ಎಂಬ ಅದ್ಭುತವಾದ ದೃಶ್ಯ ರಣಹೇಡಿ ಮಹಿಷಾಸುರನ ಸ್ವಭಾವವನ್ನು ಅಂಜುಕುಳಿತನವನ್ನು ಅತ್ಯಂತ ಸಮರ್ಥವಾದ ರೀತಿಯಲ್ಲಿ ಚಿತ್ರಿಸುತ್ತದೆ. ಎಲ್ಲಮ್ಮನ ಕಥೆ ಹೀಗೆ ಒಂದು ವೀರಕಾವ್ಯವಾಗಿ ಚಿತ್ರಿತಗೊಂಡಿದೆ ಎಂದು ಹೇಳಿದರೆ ಅತಿಶೋಕ್ತಿಯಲ್ಲ.

**ಗಾಳಿದೇವತೆ / ಗಾಳೆಮ್ಮ**

ವೇದ ಪುರಾಣೋಕ್ತ ಪುರುಷ ದೇವತೆಯಾದ ಗಾಳಿಯನ್ನು ಜನಪದರು ವೇದಕಾಲದ ಸಾಮಾನ್ಯ ಜನ ಪೂಜಿಸುತ್ತಿದ್ದರಂತೆ. ಮೊದಮೊದಲಿಗೆ ನಿರಾಕಾರದಲ್ಲಿಯೇ ಪೂಜಿಸತೊಡಗಿದರು. ಗಾಳಿ ಎಂಬ ದೇವರಿದ್ದಾನೆಂಬ ನಂಬಿಕೆಗಳನ್ನು ಇರಿಸಿಕೊಂಡಿದ್ದಾರೆ. ಗಾಳಿಯನ್ನು ಎಂದಿನಿಂದಲೂ ದೇವತೆಯೆಂದೆ ಕಾಡಿದೆ ಜನಪದ ಸಮಾಜ "ಗಾಳಿ ದೇವರಗೂಡ ಘಳಿದೇವರ ಬಂದಾ" ಎಂಬ ಜನಪದ ತ್ರಿಪದಿಯ ಸಾಲಿನಲ್ಲಿ ಗಾಳಿಯನ್ನು ದೇವರೆಂದೇ ಸಂಬೋಧಿಸಿದ್ದು ವಿಧಿತವಾಗುತ್ತದೆ. "ಗಾಳಿ ಪೂಜೆ ಎಂದರೆ ಶಕ್ತಿ ದೇವತೆಯ ಪೂಜೆ" ಎಂದು ಕನ್ನಡ ನಿಘಂಟುವಿನಲ್ಲಿ ಹೇಳಲಾಗಿದೆ. ಹಾಗಾಗಿ ದುರ್ಗಿ, ಕಾಳಿ, ಮಾರಿಗಳಂತೆ ಗಾಳಿಯೂ ಒಂದು ಶಕ್ತಿ ದೇವತೆಯೆಂದು ಹೇಳಬಹುದು. ಜನಪದ ಸಂಸ್ಕೃತಿಯಲ್ಲಿ ಗಾಳಿ ದೇವತೆಯನ್ನು ಪುರುಷದೇವತೆಯಾಗಿಯೂ ಸ್ತ್ರೀ ದೇವತೆಯಾಗಿಯೂ ಪೂಜಿಸಿದ್ದು ಗಮನಾರ್ಹ.

ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ನೇಸರಗಿಯಲ್ಲಿ ಗಾಳೆಪ್ಪ ಎಂಬ

ದೇವತೆ ಇದೆ. ಈ ದೇವತೆಗೆ ಗುಡಿಯೂ ಇದೆ. ಇದನ್ನು ಗಾಳೆಪ್ಪಮಠ ಎಂದು ಕರೆಯುವ ವಾಡಿಕೆ. ಇಲ್ಲಿಯ ಗಾಳೆಪ್ಪನ ಮೂರ್ತಿಯನ್ನು ಮಣ್ಣಿನಿಂದ ಸಿದ್ದಪಡಿಸಲಾಗಿದೆ. ಪ್ರತಿ ವರ್ಷ ಬಸವ ಜಯಂತಿಗೆ ಈ ದೇವರ ಜಾತ್ರೆ ನಡೆಯುತ್ತದೆ. ಗಾಳೆಪ್ಪದೇವರು ನೇಸರಗಿಯಲ್ಲಿ ಬಹಳ ಹಿಂದಿನಿಂದಲೇ ನೆಲೆಸಿರಬೇಕೆಂದು ಕಾಣುತ್ತದೆ.

ಇಲ್ಲಿಯ ಜನ ಉಳಿದ ಗ್ರಾಮದೇವತೆಗಳಿಗಿಂತಲೂ ಈ ಗಾಳೆಪ್ಪದೇವನ ಬಗೆಗೆ ಹೆಚ್ಚು ಭಯ ಭಕ್ತಿಯನ್ನು ತೋರಿಸುತ್ತ ಬಂದಿದ್ದಾರೆ. ಈ ದೇವತೆಯಿಂದ ಕೇಡು, ಅಪಾಯ ಹೆಚ್ಚು ಎನ್ನುವ ಪಾರಂಪರಿಕ ನಂಬಿಕೆ. ಇಲ್ಲಿಯ ಜನರಲ್ಲಿ ಮನೆಮಾಡಿಕೊಂಡಿರುವುದರಿಂದ ಅದು ತಮಗೆ ತೊಂದರೆಯನ್ನುಂಟು ಮಾಡದಿರಲಿ ಎಂಬ ಭಾವನೆಯಿಂದ ಈ ದೇವನಿಗೆ ಹೆಚ್ಚು ನಡೆದುಕೊಳ್ಳುತ್ತಾರೆಂಬ ಪ್ರತೀತಿ ಇದೆ. ಪ್ರಾದೇಶಿಕ ಹಿನ್ನೆಲೆಯಲ್ಲಿ ಗಾಳೆಮ್ಮ ಮತ್ತು ಗಾಳೆಪ್ಪ ದೇವರುಗಳು ಉದ್ಭವಿಸುತ್ತಾರೆ. ಪುರುಷ ಪ್ರಕೃತಿ ಒಂದೆ ಎಂಬ ಬಾವ ಮೂಡುವುದು ಸಹಜ. ಇನ್ನು ಶಕ್ತಿ ದೇವತೆಯಾದ ಗಾಳಿಯನ್ನು ಗಾಳಿಯಮ್ಮ, ಗಾಳೆಮ್ಮ, ಗಾಳಿಮಾರೆವ್ವ, ಗಾಳಿಮಾರಮ್ಮ, ಗಾಳಿದುರಗಮ್ಮ ಮೊದಲಾದ ಹೆಸರುಗಳಿಂದ ಜನಪದರು ಮೂರ್ತಿ ರೂಪ ಮತ್ತು ಅಮೂರ್ತಿರೂಪದಲ್ಲಿ ಪೂಜಿಸುತ್ತ ಬಂದಿದ್ದಾರೆ. ಬೈಲಹೊಂಗಲ ತಾಲೂಕಿನ 'ಸುನಕುಪ್ಪಿ' ಗ್ರಾಮದಲ್ಲಿ 'ಗಾಳಿಯಮ್ಮ'ನ ಪೂಜೆ ಸುಮಾರು ೬೦ ವರ್ಷಗಳಿಂದ ನಡೆಯುತ್ತ ಬಂದಿದೆ. ಇಲ್ಲಿ ಗಾಳಿಯಮ್ಮನ ಯಾವುದೇ ಮೂರ್ತಿಯಿಲ್ಲ. ಆದರೆ ಗಾಳಿದೇವತೆಯ ಗುಡ್ಡ ಇದೆ. ಮನುಷ್ಯರಿಗೆ, ದನಕರುಗಳಿಗೆ ಮತ್ತು ಅವರ ಬೆಳೆಗಳಿಗೆ ಯಾವುದೇ ರೋಗದ ಬಾಧೆಯನ್ನುಂಟು ಮಾಡದಿರಲಿ ಎಂಬ ಭಾವನೆಯಿಂದಲೇ ಇಲ್ಲಿಯ ಜನ ಗಾಳೆಮ್ಮನನ್ನು ಪೂಜಿಸುತ್ತ ಅವಳ ಜಾತ್ರೆ ಏರ್ಪಡಿಸುತ್ತ ಬಂದಿದ್ದಾರೆ. ಅವಳಿಗೆ ಪೂಜೆ ಪುರಸ್ಕಾರ, ಜಾತ್ರೆ ಉತ್ಸವಗಳನ್ನು ಏರ್ಪಡಿಸುವುದರ ಮೂಲಕ ಅವಳನ್ನು ಸಂತೃಪ್ತಿಯಲ್ಲಿಡಬೇಕು. ಇಲ್ಲವಾದರೆ ಗಾಳೆಮ್ಮ ಸಿಟ್ಟಿಗೆ ಬಂದು ನಾನಾ ರೋಗಗಳನ್ನು ಹರಡುವಳೆಂಬ ಸನಾತನ ನಂಬುಗೆ ಗ್ರಾಮೀಣರದು. ಗಾಳಿ ದೈವವೆನ್ನುವ ಭಾವ ಇತರ ಕಥೆಗಳಂತೆ ಧಾರವಾಡ ಜಿಲ್ಲೆಯಲ್ಲಿಯೂ ಇದೆ. ಈ ಜಿಲ್ಲೆಯ ಕುಂದಗೊಳ ದಲ್ಲಿ 'ಗಾಳಿಮಾರೆವ್ವ' ಎಂಬ ಹೆಸರಿನಲ್ಲಿ ಗಾಳಿದೇವತೆ ಪೂಜೆಗೊಳ್ಳುತ್ತಿದ್ದಾಳೆ. ಈ ದೇವಸ್ತಾನ ಊರ ಹೊರಗಿನ ಬಯಲಲ್ಲಿ ಇಲ್ಲಿಯ ಮೂರ್ತಿಗೆ ಸ್ತ್ರೀ ದೇವತೆಯ ಸ್ವರೂಪವಿದೆ. ಸುಮಾರು ೭೦-೮೦ ವರ್ಷಗಳಷ್ಟು ಹಿಂದಿನ ದೈವ ಇರಬೇಕೆಂದು ಅಲ್ಲಿಯ ಜನಗಳ ತರ್ಕ, ಚಿಕ್ಕಮಕ್ಕಳಿಗೆ ರೋಗ ರುಜಿನಗಳು ತಗುಲಬಾರದೆನ್ನುವ ಭಾವನೆಯಿಂದ ಈ ಗಾಳಿಮಾರೆವ್ವನನ್ನು ಪೂಜಿಸುತ್ತಾರೆ. ಚಿಕ್ಕ ಮಕ್ಕಳಿಗೆ ರೋಗದ ಬಾದೆಯನ್ನುಂಟು ಮಾಡಿ ಗಾಳಿಮಾರೆಮ್ಮ ನಲೆಯುವಳೆಂಬ ನಂಬಿಕೆ ಬಹುಜನರಲ್ಲಿದೆ. ನೀರು, ಎಣ್ಣೆ, ಸುಣ್ಣ, ಕುಂಕುಮಾದಿಗಳಿಂದ ಈ ದೈವವನ್ನು ಎಲ್ಲ ಜಾತಿಯವರೂ ಪೂಜಿಸುತ್ತಾರೆ. ಗಾಳಿ ಮಾರೆವ್ವನ ಪ್ರಭಾವ ಊರಲ್ಲಿ ಅಲೆಯಾದುದರಿಂದ, ನಿತ್ಯ ಪೂಜಾರಿಯೊಬ್ಬ ಇಂದು ಪೂಜಿಸುತ್ತಿದ್ದಾನೆ.

ಪೂಜೆಯ ಮೂಲಕ ಅವಳನ್ನು ಸಮಾಧಾನಗೊಳಿಸಿದರೆ, ಮಕ್ಕಳಿಗೆ ಯಾವುದೇ ತೊಂದರೆಯನ್ನು ಅವಳು ಕೊಡುವುದಿಲ್ಲವೆಂಬುದು ಗ್ರಾಮೀಣರ ಬಲವಾದ ನಂಬುಗೆ. ಈ ದೇವರು ಜನಗಳ ಮೈಯಲ್ಲಿ ಹೊಕ್ಕು ಒಡನುಡಿಸುತ್ತದೆಂದೂ ಕುಂದಗೋಳದ ಜನತೆಯ ನಂಬಿಕೆ.

ಮನುಷ್ಯರಿಗೆ ಬರುವ ಕಾಲರಾ ಪ್ಲೇಗು, ಸಿಡುಬು, ದಡಾರ, ಚಳಿಜ್ವರ ಮೊದಲಾದ ಕಾಯಿಲೆಗಳಿಗೆ ಹಾಗೂ ದನಕರುಗಳಿಗೆ ಬರುವ 'ಕಾಲುಬ್ಯಾನಿ' 'ಬಾಯಿಬ್ಯಾನಿ' ಯಂಥ ರೋಗಗಳಿಗೆ ಗಾಳಿಯಮ್ಮಳ ಮುನಿಸೇ ಕಾರಣವೆಂಬುದು ಕರ್ನಾಟಕದ ಎಲ್ಲ ಜನಪದರರ ನಂಬಿಕೆ.

"ಗಾಳಿಯ ಉತ್ಪತ್ತಿಯನ್ನು ಕುರಿತ ಅನೇಕ ನಂಬಿಕೆಗಳು ಬುಡಕಟ್ಟು ಜನಾಂಗಗಳಲ್ಲಿ ಮತ್ತು ಜನಪದರಲ್ಲಿ ಸಿಗುತ್ತವೆ. ಈ ವಿಷಯದಲ್ಲಿ ಒಂದು ಬುಡಕಟ್ಟಿನವರ ನಂಬಿಕೆ ಹೀಗಿದೆ. ಸೂರ್ಯ ತನ್ನ ಹೆಂಡತಿ ಚಂದ್ರಳ ಹತ್ತಿರ ಶೃಂಗರಿಸಿಕೊಂಡು ಕಾಮದಾಸೆಯಿಂದ ಹೋಗುವನೆಂಬ ಸವೋರ ಜನರ ನಂಬುಗೆ ಆಗ ಕಾಮದಿಂದ ಕೆಂಪಾದ ಸೂರ್ಯನಿಂದ ಜಗತ್ತು ಬಿಸಿಯಾಗುತ್ತದಂತೆ ಶಾಖದಿಂದ ಸೂರ್ಯನಲ್ಲಿ ಬೆವರು ಸುರಿಯುತ್ತಿದೆ. ಆಗ ಅವನು ಗಾಳಿ ಹಾಕಿಕೊಳ್ಳುತ್ತಾನೆ ಇದೆ. ನಮಗೆ ಗಾಳಿಯಾಗಿ ಬರುತ್ತದೆಂದು ಸವೋರ ಜನಾಂಗದ ನಂಬುಗೆ."[೫೨]

ಗೊಂದಲಿಗರ ಕಥೆಗಳಲ್ಲಿಯು ಗಾಳೆಮ್ಮ ದೇವತೆಯ ಬಗ್ಗೆ ಪ್ರಸ್ತಾಪವಿದೆ. ಮಹಾಸತಿ ಶಿವಲೋಚನ ಕಥೆಯಲ್ಲಿ "ಸತ್ತ ಶಿವಲೋಚನಗಳನ್ನು ಸಿಂಗಾರಗೊಳಿಸಿ ರೇಶ್ಮೆ ಸೀರೆ ಉಡಿಸಿ ತಲೆಗೆ ಮುತ್ತಿನ ದಂಡೆಯನ್ನು ಹಾಕಿ ಚಟ್ಟದಲ್ಲಿ ಕುಂದ್ರಿಸ್ಕೊಂಡು ಹೊರಟದ್ದನ್ನು ರಾಜಕುಮಾರನಾದ ನೀಲಕುಮಾರ ನೋಡುತ್ತಾನೆ. ಆಗ ಲೇಶಿ ರಂಭಾ ಅದು ಗಾಳೆಮ್ಮ, ಬಾಳ್ದೊತ್ತು ನೋಡಬಾರ್ದು ಆಯಮ್ಮನ ಸೊಗಡು ನಮಗೆ ಬಡದ್ರೆ ವೃತಾ ಸತ್ತು ಹೋದೇವು, ಒಳಗ ಹೋಗಾನು ನಡ್ರಿ ಅಂದ್ಲು ಆಕಿ."[೫೩] ಇಲ್ಲಿ ಗಾಳೆಮ್ಮ ಎಂಬ ಊರದೇವತೆಯಾಗಿದ್ದು ಅವಳನ್ನು ನೋಡುವುದರಿಂದ ಕೆಟ್ಟ ದೃಷ್ಟಿಗೆ ಬಲಿಯಾಗುತ್ತೇವೆ ಎಂಬ ನಂಬಿಕೆ ಜನಪದರಲ್ಲಿರುವುದನ್ನು ಪ್ರಸ್ತಾಪಿಸಲಾಗಿದೆ.

ಪಂಚ ಭೂತಗಳಲ್ಲಿ ಒಂದಾದ ಗಾಳಿಯು ಸಹ ಸಾಂಸ್ಕೃತಿಕರಣಗೊಂಡು ಜನಪದರಲ್ಲಿ ಒಬ್ಬ ದೇವತೆಯಾಗಿ ನೆಲೆವೂರಿದ್ದಾಳೆ. ಯಾವ ದುಷ್ಪರಿಣಾಮಗಳು ಆಗದಿರಲೆಂದು ಗಾಳೆಮ್ಮ ದೇವಿಗೆ ಆರಾಧಿಸುತ್ತಾರೆ.

**ದುರಗಮ್ಮ**

"ಶಕ್ತಿಯ ಸ್ವರೂಪ ಕೇಳಿರೆ
ತಂದಾನಾನಾ ತಂದಲ್ಲೆ
ದುರ್ಗೆಯ ಮಹಾತ್ಮಾ ತಿಳಿದಿರೆ
ತಂದನಾನಾ ತಂದಲ್ಲೆ

ಶಾಂತಾ ದುರ್ಗೆಯ ಮಹಾತ್ಮಾ ತಿಳಿದಿರೆ

ತಂದನಾನಾ ತಂದಲ್ಲೆ ”[೫೪]

ಗೊಂದಲಿಗರು ಶಕ್ತಿಸ್ವರೂಪಿಣಿಯಾದ ದುರ್ಗಾದೇವಿಯ ಸ್ತುತಿ ಪದ್ಯಗಳಲ್ಲಿ ಸ್ಮರಣೆ ಮಾಡುವುದನ್ನು ಕಾಣುತ್ತೇವೆ. ಇವಳು “ಬ್ರಹ್ಮಾಂಡದ ಒಬ್ಬ ದೇವತೆ. ದುರ್ಗೆಯು ವಿವಿಧ ರೂಪ ಹಾಗೂ ಲಕ್ಷಣಗಳನ್ನು ಹೊಂದಿರುವವಳು. ಶಿವನ ಹೆಂಡತಿಯಾದ ಪಾರ್ವತಿಯು ದುರ್ಗೆಯ ಒಂದು ಅವತಾರ. ಭಕ್ತರ ಪ್ರಾರ್ಥನೆಯಂತೆ ಈ ದೇವಿಯು ನಾನಾ ಅವತಾರಗಳನ್ನು ತಾಳುತ್ತಾಳೆ. ಆಕೆಯನ್ನು ಆರ್ಯಾದುರ್ಗಾ, ವೇದಗರ್ಭಾ, ಅಂಬಿಕಾ ಭದ್ರಕಾಳಿ ಮುಂತಾದ ಅರವತ್ತ ನಾಲ್ಕು ರೂಪಗಳಲ್ಲಿ ಪೂಜಿಸಲಾಗುತ್ತದೆ. ದಕ್ಷಿಣ ಭಾರತದಲ್ಲಿ ಈಕೆಯನ್ನು ಭಯಂಕರವಾದ ರೌದ್ರ ಆಕಾರಗಳಲ್ಲೇ ಪೂಜಿಸಲಾಗುತ್ತದೆ. ದೇವಿ ತನ್ನ ಉತ್ತಮವಾದ ಲಕ್ಷಣಗಳಿಂದ ಕನ್ಯಾ, ಕಾಮಾಕ್ಷಿ, ಮಾಕಾಂಬಾ ಎಂಬ ಆಕಾರಗಳನ್ನು ತಳೆದಿದ್ದಾಳೆ. ಕೇರಳದಲ್ಲಿ ಇವಳಿಗೆ ಭಗವತಿ ಎಂದು ಆರಾಧಿಸಲಾಗುತ್ತಿದೆ.”[೫೫]

ಹೀಗೆ ಹಲವಾರೂ ರೂಪಗಳನ್ನು ಪಡೆದ ಶಕ್ತಿಸ್ವರೂಪಳು ಒಬ್ಬಳೇ ಆಗಿದ್ದಾಳೆ. ಕಾಲಾನುಸಾರವಾಗಿ ಆಯಾ ಪ್ರದೇಶಗಳಲ್ಲಿ ದುಷ್ಟ ಶಕ್ತಿಗಳನ್ನು ಮರ್ಧನ ಮಾಡಲು ಅವತಾರವನ್ನು ತಾಳುತ್ತಾಳೆ.

### ಲಕ್ಷ್ಮಿದೇವಿ

ಗೊಂದಲಿಗರು ಆರಾಧಿಸುವ ಶಕ್ತಿ ಅವತಾರಗಳಲ್ಲಿ ಲಕ್ಷ್ಮಿ ದೇವಿಗೆ ವಿಶೇಷ ಸ್ಥಾನ ಮಾನ ನೀಡಿದ್ದಾರೆ. ದೀಪಾವಳಿ ಅಮವಾಸ್ಯೆ ಮತ್ತು ಪಾಡ್ಯದ ದಿನ ಲಕ್ಷ್ಮಿಯ ಪೂಜೆಯನ್ನು ಗೊಂದಲಿಗರು ನಡೆಸುತ್ತಾರೆ. ಗುಲಬುರ್ಗಾದ ಸುತ್ತಮುತ್ತಲಿನ ಗೊಂದಲಿಗರು ಮದುವೆಯ ಮುಂಚಿನ ದಿನ ಕರಿಲಕ್ಷ್ಮಿ ಹಾಗೂ ಕೆಂಪು ಲಕ್ಷ್ಮಿ ಎಂದು ಪೂಜೆಕಾರ್ಯ ಕ್ರಮವನ್ನು ಮಾಡುತ್ತಾರೆ.

### ಮಾರಮ್ಮ

ವಿಪತ್ತರಂಪರೆಗೆ ಇನ್ನೊಂದು ಹೆಸರೆ ಮಾರಿ, "ಮಾರಿ ಒಲಿದರೆ ನಾರಿ ಮುನಿದರೆ ಮಾರಿ’ ಎಂಬ ಗಾದೆಯ ಜನನಿ. ಶಕ್ತಿ ದೇವಿಯಾದ ದುರ್ಗಾದೇವಿಯ ಗ್ರಾಮ್ಯಾರಾಧನೆಯ ರೂಪವೇ ಮಾರಿ, ಕನ್ನಡ ನಾಡಿನ ಗ್ರಾಮಗಳಲ್ಲಿ ಮಾರಿಯಷ್ಟು ಜನಪ್ರಿಯವಾಗಿರುವ ಪೂಜೆ ಹರಕೆ, ಬಲಿ ನೈವೇದ್ಯೆಗಳನ್ನು ಪಡೆದುಕೊಂಡು ಜಾತ್ರೆ ಉತ್ಸವಗಳನ್ನು ಮಾಡಿಸಿಕೊಳ್ಳುತ್ತಿರುವ ದೇವತೆ ಮತ್ತೊಂದಿಲ್ಲ. ಸೀತಾಳೆ, ದಡಾರ, ಗದ್ದಕಟ್ಟು ಸಿಡುಬು ಕಾಲರಾ ಪ್ಲೇಗು ಮುಂತಾದ ಕಠಿಣ ರೋಗಗಳು ಒಡತಿ ಈ ಮಾರಿ. ಇವಳಿಂದ ಪಾರಾಗಲು ಮಾರಿಗೆ ತಂಪನ್ನೆರೆದು ನೈವೇದ್ಯವನ್ನು ಮಾಡುತ್ತಾರೆ. ಇಂತಹ ಮಾರಿಯನ್ನು ಗೊಂದಲಿಗರು ತಮ್ಮ ಕಥನಗಳಲ್ಲಿ ಆರಾಧಿಸುವುದು ಕಂಡುಬರುತ್ತದೆ.

ತಮಿಳನಾಡಿನಲ್ಲಿಯೂ ಮಾರಿಗೆ ವಿಶೇಷವಾದ ಸ್ಥಾನವುಂಟು. ಅವಳನ್ನು ಕುರಿತು ಹಲವಾರು ಕಥೆಗಳು ಪ್ರಚಲಿತವಿದ್ದರೂ ನಾಡಿನ ವಿವಿಧ ಕಡೆ ಒಂದೇ ರೀತಿಯಾಗಿರದೆ ವಿವಿಧತೆಯನ್ನು ಹೊಂದಿದೆ ಮತ್ತು ವಸ್ತುವಿನಲ್ಲಿ ಏಕರೂಪತೆಯಿಲ್ಲ.

ಬ್ರಾಹ್ಮಣ ಕನ್ಯೆಯೊಬ್ಬಳು ಅರಿಯದೇ ಸಮಗಾರ ಯುವಕನನ್ನು ಮದುವೆಯಾಗಿ ನಿಜ ವಿಷಯ ತಿಳಿದಾಗ ಸಿಟ್ಟಿನಿಂದ ಗಂಡನನ್ನು ಕೊಂದು ತಾನೂ ಪ್ರಾಣಾರ್ಪಣೆ ಮಾಡಿಕೊಂಡು ಮಾರಮ್ಮನಾದಳು ಎಂಬುದು ವಿವಿಧ ಕಥೆಗಳಲ್ಲಿಯ ಮೂಡಿಬಂದಿರುವ ಒಳತಿರುಳಾಗಿದೆ. "ಬ್ರಾಹ್ಮಣ ಕನ್ಯೆಯೊಬ್ಬಳು (ಮಾರಮ್ಮ) ಬ್ರಹ್ಮದೇವನ ಬಳಿಗೆ ಹೋಗಿ ನನ್ನ ಹಣೆಯಲ್ಲಿ ಏನು ಬರೆದಿದ್ದಿಯಾ ತಂದೆ ಎಂದು ಕೊಂಚ ಜಬರ್ದಸ್ತಿನಿಂದಲೇ ಪ್ರಶ್ನಿಸಿದಳು. ಅವಳ ಮಾತು ಕೇಳಿ ಬ್ರಹ್ಮದೇವನಿಗೆ ಕೋಪಬಂದಿತು. ನಿನಗೆ ಸಮಗಾರನೇ ಗಂಡನಾಗಲಿ, ಮಗನೇ ಮಿಂಡನಾಗಲಿ ಎಂದು ಬರೆದಿದ್ದೇನೆ ಹೋಗು ಎಂದು ಗುಡುಗಿದನು. ಮಾರಿಯಮ್ಮ ಸಮಗಾರ ಕುಲದ ಸುಂದರ ತರುಣನೊಬ್ಬನನ್ನು ಬ್ರಾಹ್ಮಣನೆಂದು ನಂಬಿ ಮದುವೆಯಾದಳು ಒಂದು ಗಂಡು ಮಗು ಹುಟ್ಟಿತು. ಅವಳ ಗಂಡ ಪಕ್ಕದ ಗ್ರಾಮದಲ್ಲಿ ಗುಟ್ಟಾಗಿ ಪಾದರಕ್ಷೆ ಹೊಲಿಯುವ ಕೆಲಸ ಮಾಡುತ್ತಿದ್ದ. ಅವನ ಮಗ ತಂದೆಯ ಹಿಂದೆ ಹೋಗಿ ಅದನ್ನು ನೋಡುತ್ತಿದ್ದನು. ಒಂದು ದಿನ ತನ್ನ ಮನೆಯಲ್ಲಿಯೇ ಹಲಸಿನ ಎಲೆ, ಹುಲ್ಲೆಸಳು ತೆಂಗಿನಕಡ್ಡಿಗಳಿಂದ ತಾನು ಮೆಟ್ಟು ಹೊಲಿಯುವ ಆಟದಲ್ಲಿದ್ದಾಗ ತಾಯಿ ಇದೇನು ಮಾಡುತ್ತಿದ್ದಿಯೋ ಎಂದು ಸಿಡಿಮಿಡಿಗೊಂಡು ಪ್ರಶ್ನಿಸಿದಳು. ಅಪ್ಪ ಮಾಡುವ ಕೆಲಸವನ್ನೆ ನಾನು ಮಾಡುತ್ತಿದ್ದೇನೆ ಎಂದು ಅರಿಯದೆ ಮುಗ್ಧಭಾವದಿಂದ ಉತ್ತರಿಸಿದನು. ಉಗ್ರಳಾದ ತಾಯಿ, ತರಕಾರಿ ಹೆಚ್ಚುತ್ತಿದ್ದ ಪುಟ್ಟ ಕತ್ತಿಯಿಂದ ಅವನ ತಲೆಗೆ ಹೊಡೆದಳು, ತೀರ್ವಗಾಯಗೊಂಡ ಬಾಲಕನು ಎಲ್ಲಿಗೋ ಓಡಿ ಹೋದನು. ಆಗ ಮಾರಿಯ ಸಿಟ್ಟು ಗಂಡನತ್ತ ತಿರುಗಿತು. ಅವನನ್ನು ಹುಡುಕಿ ಬೆನ್ನಟ್ಟಿಕೊಂಡು ಓಡಿದಳು. ಅವನು ಭಯದಿಂದ ನಡುಗಿ ಕೋಣಗಳ ಗುಂಪಿನಲ್ಲಿ ನುಗ್ಗಿ ಗುದದ್ವಾರದ ಮೂಲಕ ಕೋಣವೊಂದರ ಶರೀರದಲ್ಲಿ ಅಡಗಿ ಕುಳಿತನು. ಮಾರಿಯು ಕೋಣನ ತಲೆ ಕಡಿದಳು ಗಂಡನು ತೀರಿಕೊಂಡನು. ಅವಳ ಮೂಗುತಿ ಮಾಂಗಲ್ಯಗಳು ಕಡಿದು ಬಿದ್ದವು. ದು:ಖಿತಳಾದ ಮಾರಮ್ಮ ಸೂಳಿಗೇರಿಯನ್ನು ಸೇರಿಬಿಟ್ಟಳು. ಹಲವು ವರ್ಷಗಳು ಉರುಳಿದವು, ಒಂದು ದಿನ ಮಾರಿಯಮ್ಮ ವಾಸವಾಗಿದ್ದ ಮನೆಗೆ ಸುಂದರನಾದ ತರುಣನೊಬ್ಬನು ಹೂವು ಮಾರುತ್ತ ಬಂದನು. ಮಾರಿ ಅವನಲ್ಲಿ ಮೋಹಗೊಂಡು ಒಂದು ರಾತ್ರಿಯ ಮಟ್ಟಿಗೆ ತನ್ನ ಮನೆಯಲ್ಲಿಯೇ ಅವನನ್ನು ಒತ್ತಾಯಮಾಡಿ ಇರಿಸಿಕೊಂಡಳು. ಅವನೊಡನೆ ರಾತ್ರಿಯನ್ನು ಕಳೆದಳು. ಮರುದಿನ ಆ ಯುವಕ ಹೊರಟು ನಿಂತಾಗ ಮಾರಿಯು ಅವನ ತಲೆಗೆ ಎಣ್ಣೆಹಾಕಿ ಶಿಕ್ಕಿ ಅಲಂಕರಿಸುವಾಗ ಅಲ್ಲಿ ಮಾಯ್ದುಗಾಯದ ಕುಳಿಯೊಂದು ಕೈಗೆ ಎಡವಿತು ಇದೇನು ತಲೆಯಲ್ಲಿ ಇಂತಹ ಕುಳಿ ಎಂದು ಕೇಳಿದಳು ಅವನು ಕೊಟ್ಟ ಉತ್ತರದಿಂದ ಇವನು ನನ್ನ

ಮಗನೇ ಎಂದು ಮಾರಿಗೆ ತಿಳಿದು ಹೋಯಿತು. ಕೊನೆಗೂ ಬ್ರಹ್ಮನು ಹೇಳಿದ ಹಾಗೆಯೇ ಆಗಿಹೋಯಿತಲ್ಲ ಎಂದು ದು:ಖಿತಳಾಗಿ ಅವಳು ಅಗ್ನಿ ಪ್ರವೇಶ ಮಾಡಿ ದೇಹಬಿಟ್ಟಳು. ಶಿವನ ಬಳಿ ಹೋಗಿ ವರಪಡೆದು ದೇವತೆಯಾದಳು."[೫೬]

**ಬನಶಂಕರಿ**

ಜಗತ್ತಿನ ಅನೇಕ ಪುಣ್ಯಕ್ಷೇತ್ರಗಳಲ್ಲಿ ಬದಾಮಿಯು ಒಂದು. ಇದರ ಸುತ್ತ ಮಹಾಕೂಟ, ಐಹೊಳೆ ಮೊದಲಾದ ಕ್ಷೇತ್ರಗಳಿಂದಲೂ ಕುಲಾಚಲ ಮೊದಲಾದ ಪರ್ವತಗಳಿಂದಲೂ ಸರಸ್ವತಿ, ಮಲಪ್ರಭಾ ಮೊದಲಾದ ಜಲಗಂಗೆಯಿಂದಲೂ ಅಗಸ್ತ್ಯ, ಅಶ್ವತ್ಥ ಮೊದಲಾದ ತೀರ್ಥಗಳಿಂದಲೂ ನಾರೀಕೇಶ ಬನ, ಕೇತಕಿ ಬನಗಳಿಂದಲೂ, ಹರಿದ್ರಾ ಮೊದಲಾದ ಸುಂದರ ಸರೋವರಗಳಿಂದಲೂ, ಅನೇಕ ಆಧುನಿಕ ಹಾಗೂ ಪುರಾತನ ಕಟ್ಟಡಗಳಿಂದಲೂ ಒಪ್ಪುವಂತ ಸುಂದರವಾದ ವನದಲ್ಲಿ ವಾಸಿಸಿದವಳೇ ಶ್ರೀ ಬನಶಂಕರಿ ಮಾತೆ. ಇಂದ್ರ ಸಮೇತರಾಗಿ ದೇವಾನು ದೇವತೆಗಳು ಬಂದು ಸಕಲ ಋಷಿಮುನಿಗಳು ಯಜ್ಞ ಯಾಗಾದಿಗಳನ್ನು ಮಾಡಿದಂಥ ಪವಿತ್ರ ಸ್ಥಳ ಎಂದು ಅನೇಕರ ಅಭಿಪ್ರಾಯ.

ಹಿಂದೆ ನಮ್ಮ ದೇಶವು ಭಯಂಕರವಾದ ಕಾಡುಗಳಿಂದ ಕೂಡಿದ್ದಾಗಿತ್ತು ಎತ್ತ ನೋಡಿದರತ್ತ ದಟ್ಟವಾದ ಗಿಡಗಳ ಗುಂಪು, ಬಿದಿರು ಮೆಳೆಗಳ ಕಂಪು ಕಾಡು ಪಶುಗಳ ಸೊಂಪು ಕಿಕ್ಕಿರಿದು ತುಂಬಿಕೊಂಡು ಘನಘೋರ ರೂಪವಾಗಿ ಕಂಗೊಳಿಸುತ್ತಿತ್ತು. ಇಂಥದರಲ್ಲಿ ಕಳ್ಳಕಾರರು ಬೀಡು ಮಾಡಿಕೊಂಡು ಸಿಕ್ಕವರನ್ನು ಸುಲಿಗೆ ಮಾಡುವದೇ ಅವರ ಮುಖ್ಯ ಉದ್ಯೋಗವಾಗಿತ್ತು. ಈ ಕಾಡಿನಲ್ಲಿ ದುರ್ಗರಕ್ತ ಮತ್ತು ಧೂಮ್ರಾಕ್ಷರೆಂಬ ಹೆಸರಿನ ಕ್ರೂರ ರಾಕ್ಷಸರ ನೆಲೆಸಿದ್ದರು. ಇವರು ಸರ್ವರಿಗೂ ಬಾಧೆ ಕೊಡುತ್ತ ದೇವಲೋಕಕ್ಕೂ ದಾಳಿಯನ್ನಿಟ್ಟರು. ದೇವತೆಗಳನ್ನು ಹಿಂಸಿಸಿ ಉಪದ್ರವ ಕೊಟ್ಟರು. ಆಗ ದೇವತೆಗಳು ದಿಕ್ಕಾಪಾಲಾಗಿ ಓಡಿ ಆದಿಶಕ್ತಿಯನ್ನು ಮೊರೆಹೊಕ್ಕರು. ನಡೆದ ಸಂಗತಿಯನ್ನು ತಿಳಿಸಿದರು ದಯಾಸಾಗರಳಾದ ದೇವಿಯು ಅವರೆಲ್ಲರನ್ನು ಸಂತೈಸಿ ಬೀಳ್ಕೊಟ್ಟಳು. ಸಮೂಲಾಗ್ರವಾಗಿ ಅವರನ್ನು ನಾಶಪಡಿಸಲು ಒಂದು ಉಪಾಯವನ್ನು ಹುಡುಕಿದಳು ತಕ್ಷಣವೇ ಕ್ರೂರ ರಕ್ಕಸರ ರೂಪಕ್ಕಿಂತ ಭಯಂಕರ ಕ್ರೂರ ರೂಪವನ್ನು ಧಾರಣ ಮಾಡಿದಳು ಸಕಲ ಆಯುಧ ಪಾಣಿಯಾಗಿ ರಕ್ಕಸರು ವಾಸಿಸುವ ನಿಬಿಡವಾದ ಅರಣ್ಯಕ್ಕೆ ಹೋಗಿ ಪರುಶುವಿನಿಂದ ಹೊಡೆದಳು. ಆಗ ರಾಕ್ಷಸರು ಕೂಡ ಮರಣವನ್ನಪ್ಪಿದರು. ದೇವತೆಗಳು ಸಂತೋಷಭರಿತರಾಗಿ ಏಕ ಕಂಠದಿಂದ ಜಯಬನಶಂಕರಿ ಜಯ ಲೋಕ ಸುಖಶಂಕರಿ ಎಂದು ಹೊಗಳಿದರು ದೇವಿಯು ಅದೇ ಘೋರ ರೂಪದಿಂದ ಅರಣ್ಯದಲ್ಲಿ ನಿವಾಸಿನಿಯಾದಳು ಭಯಂಕರ ರೂಪಧಾರಣದ ಸಲುವಾಗಿ ದೇವತೆಗಳಲೆಲ್ಲ ಅವಳ ದರುಶನದಿಂದ ಹೆದರಿದರು ದರ್ಶನ ಲಾಭದ ವಿಚಾರವನ್ನೇ ಮರೆತರು ನೋಡಿದವರೆಲ್ಲರೂ ಮೂರ್ಛೆ ಹೊಂದುವವರಾದರು. ದೇವತೆಗಳಿಗೆ ಇದೊಂದು ಚಿಂತೆಯೇ ಪ್ರಾರಂಭವಾಯಿತು. ಇದಕ್ಕೆ ತಕ್ಕ ಉಪಾಯವನ್ನು

ಹುಡುಕಿ ಭಯಂಕರ ರೂಪವನ್ನು ಬಿಡಿಸಿ ಶಾಂತ ರೂಪವನ್ನು ತರಬೇಕೆಂದು ದೇವಿಯು ಪ್ರಸನ್ನಳಾಗಬೇಕೆಂದು ಮನದಲ್ಲಿ ಆಲೋಚಿಸ ತೊಡಗಿದರು. ದೇವಿಯ ಪರಮ ಭಕ್ತನಾದವನಿಗೆ ಈ ಕಾರ್ಯವು ಸಾಧಿಸುದೆಂದು ತಿಳಿದು ಅರಸುತಿ ಹಲತೆ ಕಾಲ ತೊಡರೆಸು ಎಂಬ ಉಕ್ತಿಯಂತೆ ತ್ರಿದಂಡಿ ಎಂಬ ಮುನಿಯು ದೇವಿಯ ಅತ್ಯಂತ ಪರಮ ಭಕ್ತನಾಗಿದ್ದನ್ನು. ಆತನ ನೆರವು ಪಡೆಯಲು ಅನುವಾದರು. ತ್ರಿದಂಡಿಗೆ ಈ ವಿಷಯವನ್ನು ತಿಳಿಸಿದರು. ದೇವತೆಗಳ ಮಾತಿನಂತೆ ತ್ರಿದಂಡಿಯು ದೇವಿಯನ್ನು ಕುರಿತು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದನು. ಭಕ್ತ ಪಾರಾಯಣಗಳಾದ ದೇವಿಯು ಭಕ್ತನಾದ ತ್ರಿದಂಡಿಯ ಕೋರಿಕೆಯನ್ನು ಮನ್ನಿಸಿ ಉಗ್ರರೂಪವನ್ನು ಬಿಟ್ಟು ಶಾಂತ ರೂಪಳಾಗಿ, ಹಸನ್ಮೂಖಿಯಾಗಿ ಸರ್ವರಿಗೂ ಕಲ್ಯಾಣವನ್ನು ಬಯಸುತ್ತ ವರದ ಹಸ್ತವನ್ನು ಅನುಗ್ರಹಿಸಿದಳು. ಆಗ ದೇವತೆಗಳು ಹಾಗೂ ತ್ರಿದಂಡಿ ಮುನಿಯು ದೇವಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತ ಜಯಜಯಕಾರ ಮಾಡಿದರು.”[೫೭] ಹೀಗೆ ಬದಾಮಿಯ ಬನಶಂಕರಿ ಮಹಿಮೆಯನ್ನು ತಿಳಿಯಬಹುದು ಈ ಬನಶಂಕರಿ ದೇವಿಗೆ ಬನದಬ್ಬೆ ಎಂಬ ಹೆಸರಿದೆ ಒಂದು ರೀತಿಯಲ್ಲಿ ಬದಾಮಿಯ ಅಧಿದೇವತೆ ಇವಳೇ ಆಗಿದ್ದಾಳೆ. ಬಾದುಬ್ಬೆಯು ಸಸ್ಯದೇವತೆ ಎಂದು ಬ್ರಹ್ಮಶಿವನು ಸೂಚಿಸಿದ್ದಾನೆ. ಇಂತಹ ಶಕ್ತಿ ದೇವತೆಯನ್ನು ಗೊಂದಲಿಗರು ತಮ್ಮ ಕಥನಗಳ ಸ್ತುತಿ ಪದ್ಯಗಳಲ್ಲಿ ಈ ದೇವತೆಯ ಮಹಿಮೆಯನ್ನು ಕೊಂಡಾಡುವುದನ್ನು ಕಾಣುತ್ತೇವೆ.

### ೫.೮ ಪಿತೃ ದೇವತೆಗಳು

#### ಗಣಪತಿ

‘ಕಾರ್ಯಕ್ಕೆ ಮೊದಲು ಕಾರ್ಯಸಿದ್ಧಿ ವಿನಾಯಕನನ್ನು ನೆನೆ’ ಎಂಬ ವಾಡಿಕೆ ಜನಪದರಲ್ಲಿದೆ. ಇದನ್ನು ಶಿಷ್ಟರೂ ಪಾಲಿಸುತ್ತಾ ಬಂದಿದ್ದಾರೆ. ಗೊಂದಲಿಗರು ತಮ್ಮ ಗೊಂದಲದ ಪೂಜಾ ಸ್ತುತಿಯಲ್ಲಿ ಗಣಪತಿಯನ್ನು ಮೊದಲು ಸ್ಮರಿಸುತ್ತಾರೆ. ದೇವಾನುದೇವತೆಗಳಿಗೆ ಅದಿಪತಿಯಾದ ಗಣಪನು ಮಂಗಳ ಮೂರ್ತಿಯಾಗಿದ್ದಾನೆ. “ಮಾರಿದೇವತೆಯಂತೆ ಹೇಗೆ ಶಿಷ್ಟ ರೂಪಿಣಿಯಾದ ದುರ್ಗಾದೇವಿ ಗ್ರಾಮಸ್ವರೂಪಿನಿಯೋ ಹಾಗೆಯೇ ಬೆನಕನು ಸಹ ಶಿಷ್ಟರೂಪಿಣಿಯಾದ ವಿನಾಯಕನು ಗ್ರಾಮ್ಯರೂಪವೇ ಆಗಿದ್ದಾನೆ. ಬೆನಕ ಇದು ವಿನಾಯಕ ಎಂಬ ಪದದ ತದ್ಭವರೂಪವೇ ಆಗಿದೆ. ಬೆನಕನನ್ನು ಹಲವಾರು ರೂಪಗಳಲ್ಲಿ ನೋಡಬಹುದು. ಪಿರಮಿಡ್ಡಿನ ಆಕೃತಿಗೆ ಸಗಣಿಯನ್ನು ಉಂಡೆಮಾಡಿ ಅದರ ತುದಿಗೆ ನಾಲ್ಕಾರು ಗರಿಕೆಯ ಎಸಳುಗಳನ್ನು ಸಿಕ್ಕಿಸಿದರೆ ಗಣಪತಿ ರೂಪಗೊಂಡಂತೆಯೇ, ಯಾವುದೇ ಕಾರ್ಯದಲ್ಲಿ ಮೊದಲು ಬೆನಕನನ್ನು ಸ್ಥಾಪಿಸಿ ಪೂಜಿಸಿ ಮುಂದುವರೆಯುತ್ತಾರೆ. ಬೆಲ್ಲದ ಉಂಡೆ, ಅಕ್ಷತೆಕಾಳು ಅಥವಾ ಒಂದು ಗುಂಡಕಲ್ಲು ಇಟ್ಟುಕೊಂಡು ಬೆನಕನಂತೆ ಪೂಜಿಸುತ್ತಾರೆ. ಅದಕ್ಕಾಗಿಯೇ ಬ್ರಹ್ಮಶಿವ ತನ್ನ ‘ಸಮಯ ಪರೀಕ್ಷೆ’ ಯಲ್ಲಿ ಕಿವುಡು ಬೆನಕ ಎಂದು ಹಾಸ್ಯಮಾಡಿದ್ದಾನೆ.

ದೀಪಾವಳಿಯ ಹಬ್ಬದಲ್ಲಿ ಬೆನಕನನ್ನು ಒಡ್ಡುವುದು ಎಂಬ ವಿಶೇಷ ಕಾರ್ಯಕ್ರಮವನ್ನು ಉತ್ತರ ಕರ್ನಾಟಕದ ಅನೇಕ ಸಮುಆಯಗಳು ಆಚರಿಸುತ್ತಾರೆ. ಸಗಣಿಯಲ್ಲಿ ಬೆನಕನನ್ನು ಮಾಡಿ ಅವುಗಳ ತಲೆಯ ಮೇಲೆ ಚಂಡು ಹೂ ಸಿಕ್ಕಿಸಿ ಪೂಜಿಸಿ ತರುವಾಯ ಮನೆಯ ಎಲ್ಲ ಹೊಸ್ತಿಲಗಳ ಎಡಬಲ ತುದಿಗಳಲ್ಲಿ ಇಡುತ್ತಾರೆ. ಈ ಬೆನಕನನ್ನು 'ಕೆರಕ' ಎಂದು ಕರೆಯುವುದು ವಾಡಿಕೆಯಿದೆ.

"ಬಲಿಚಕ್ರವರ್ತಿಯು ಬಲಿಪಾಡ್ಯಮಿಯೆಂದು ಭೂಲೋಕವನ್ನು ಸಂಪರ್ಕಿಸಿದ ಸನ್ನಿವೇಶದಲ್ಲಿ ಅವನ ಬರುವಿಕೆಯನ್ನು ಸಾಕುವ ನೆಚ್ಚಿನ ಕಿಂಕರರು ಈ 'ಕೆರಕರು' ಎಂದು ನಂಬಲಾಗಿದೆ."[೫೮] ರಾಕ್ಷಸರು ಹಗೆವುಗಳನ್ನು ಪ್ರವೇಶಿಸದಂತೆ ತಡೆಯಲು ನೂಲುಸುತ್ತಿದ್ದ ಬೆನಕನನ್ನು ಇರಿಸಿ ಅದರ ಯಶಸ್ವಿಗಾಗಿ ಆರಾಧನೆ ನಡೆದುದ ಉಲ್ಲೇಖ ಹೀಗೆ ಹೊಲಗದ್ದೆಗಳ ಪೈರು ಯಾವ ಕಾರಣಕ್ಕೂ ಹಾಳಾಗದಿರಲೆಂದು ಅಲ್ಲಲ್ಲಿ ಬೆನಕನನ್ನು ಸ್ಥಾಪಿಸಿ ಆರಾಧಿಸುತ್ತಿದಾಗಿ ತಿಳಿದು ಬರುತ್ತದೆ. ಹೀಗೆ ಬೆನಕನ ಆರಾಧನೆಯೊಂದು ನಂಬಿಕೆಯಾಗಿ, ಸಂಪ್ರದಾಯವಾಗಿ, ಆಚರಣೆಯಾಗಿ ದೇಸಿ ಬದುಕಿನಲ್ಲಿ ಉಳಿದುಕೊಂಡಿದೆ. ಗೊಂದಲಿಗರು ಸಹ ತಮ್ಮ ಗೊಂದಲ ಕಾರ್ಯಗಳಲ್ಲಿ ಗಣಪನ ಅಥವಾ ಬೆನಕನ ನೆನೆದು ಆರಾಧಿಸುವ ಹಲವಾರು ಸ್ತುತಿಪದಗಳನ್ನು ಕಾಣುತ್ತೇವೆ.

**ಜೋಕುಮಾರ**

ಜೋಕುಮಾರ ಫಲವಂತಿಕೆಯನ್ನು ನೀಡುವ ದೈವ ಎಂದು ಅವನನ್ನು ಆರಾಧಿಸುವುದು ಗ್ರಾಮೀಣ ಪರಿಸರದಲ್ಲಿ ಕಂಡು ಬರುತ್ತದೆ. ಜೋಕುಮಾರನ ಹುಟ್ಟಿನ ಬಗ್ಗೆ ಹಲವಾರು ಕಥೆಗಳು ಇವೆ. ಹಲವಾರು ಜನರಿಂದ ಪೂಜಿಸಲ್ಪಡುವ ಈತನ ಬಗ್ಗೆ ನರಸಿಂಹಕವಿಯು(೧೭೬೮) ತಮ್ಮ ಅನುಭವ ಖಾಮಣಿಯಲ್ಲಿ ನಿರೂಪಿಸಿರುವ ಕಥೆಗಳನ್ನು ಕಾಣಬಹುದು. ಎಂ. ಚಿದಾನಂದ ಮೂರ್ತಿಯವರು ಅದನ್ನು ಸಂಗ್ರಹಿಸಿದ್ದಾರೆ. ಫಲವಂತಿಕೆಯನ್ನು ನೀಡುವ ಮತ್ತು ಕೃಷಿಯ ಪ್ರಮುಖ ದೈವವಾದ ಜೋಕುಮಾರಸ್ವಾಮಿಯನ್ನು ಗೊಂದಲಿಗರು ತಮ್ಮ ಕಥನಗಳಲ್ಲಿ ಸ್ತುತಿಸುವುದು ಕಂಡು ಬರುತ್ತದೆ.

"ಜೋಕ ಎಂಬಾತನು ಸಪ್ತಋಷಿಗಳ ಮೆಚ್ಚಿನ ಸೇವಕನಾಗಿದ್ದನು. ಒಮ್ಮೆ ಅವನಿಗೆ ಭೂಲೋಕದ ಚಂದಾಟವನ್ನು ಕಣ್ಣಾರೆ ಕಂಡು ಬರಬೇಕೆನ್ನಿಸಿ, ಋಷಿಗಳ ಅಪ್ಪಣೆ ಪಡೆದು ಭೂಮಿಗಿಳಿದನು. ಆಗ ಕತ್ತಲಾಗಿತ್ತು. ಎಲ್ಲಿ ಇರಬೇಕು ಎಂಬ ಸಮಸ್ಯೆಯಿಂದ ಅಲ್ಲಿಯೇ ಸಮೀಪದ ಮಾರಿಗುಡಿಯಲ್ಲಿ ತಂಗಿದನು. ತನ್ನ ಪಾಡಿಗೆ ತಾನು ಹಾಡುತ್ತಾ ಗಾಯನ ಸಾಗರದಲ್ಲಿ ಮುಳುಗಿ ಹೋದನು. ಅವನ ಗಾನಮಾಧುರ್ಯಕ್ಕೆ ಮನಸೋತ ಮಾರಿಯು ಅವನ ಮುಂದೆ ರುಚಿ ರುಚಿಯಾದ ತಿಂಡಿ ತೀರ್ಥಗಳನ್ನು ಅಣಿಗೊಳಿಸಿಟ್ಟಳು. ಭೂಲೋಕದ ಉಟೋಪಚಾರಗಳ ರುಚಿಗೆ ಮಾರುಹೋಗಬಾರದೆಂದು ಹಾಗೂ ಅಲ್ಲಿನ ಬಾಲೆಯರ ಬೆಡಗಿಗೂ

ಮರುಳಾಗಬಾರದು ಎಂದು ಸಪ್ತರ್ಷಿಗಳು ಹೇಳಿದರೂ ಆ ಕ್ಷಣದಲ್ಲಿ ಅದನ್ನೆಲ್ಲ ಮರೆತನು. ಊಟದ ರುಚಿಯ ಜೊತೆಗೆ ಮಾರಿಯೊಡನೆ ಕೂಟವು ಆಯಿತು. ಆ ಗಳಿಗೆಯಲ್ಲಿ ತನ್ನ ತಪ್ಪಿನ ಅರಿವಾದಾಗ ಜೋಕನು ಋಷಿಗಳ ಆಜ್ಞೆ ಮೀರಿದೆನಲ್ಲ ಎಂಬುದು ತಲ್ಲಣದಿಂದಲೇ ಋಷಿಗಳ ಪಾದದ ಅಡಿಯಲ್ಲಿ ಬಿದ್ದನು. ಇತ್ತ ಜೋಕ ಮತ್ತು ಮಾರಿಯ ಮಿಲನದಿಂದ ಜೋಕುಮಾರನ ಜನನವಾಯಿತು. ಆ ಕುಮಾರನು ಹುಟ್ಟಿದೊಡನೆಯೇ ನನ್ನ ತಂದೆ ಎಲ್ಲಿ ಎಂದು ಕೇಳಿದನು. ಯಾರೋ ಸತ್ಯ ಸ್ವರ್ಗದ ಪುರುಷನಪ್ಪ ನಿನ್ನ ತಂದೆ ಎಲ್ಲಿ ಹೋದನೋ ತಿಳಿಯಲಿಲ್ಲಾ ಎಂದಳು. ಈಗಲೇ ತಂದೆಯನ್ನು ಹುಡುಕಿ ತರುತ್ತೇನೆ ಎಂದು ಹೊರಟ ಜೋಕುಮಾರನು ಅಲೆದಾಡಿ ಅತ್ತಿಕಾಯಾಗಿ ಕೊನೆಗೆ ತಾನು ಹುಟ್ಟಿದ ಏಳನೇ ದಿನಕ್ಕೆ ಸರಿಯಾಗಿ ಅಗಸರೆಲ್ಲ ಸೇರಿ ಹಬ್ಬದೂಟವನ್ನು ಸವಿಯುತ್ತಿದ್ದ ತಾನಕ್ಕೆ ಬಂದನು. ಅಲ್ಲಿ ಜೋಕುಮಾರನು ಸುಕರ್ಣಿಕೆ ಎಂಬ ಚಂದದ ಬಾಲೆಯನ್ನು ಕಂಡನು. ಅವಳು ಹಿರಿಯರ ಆಜ್ಞೆಯಂತೆ ತಮ್ಮದೇ ಹೊಲಗಳಿಗೆ ಕತ್ತೆಗಳು ನುಗ್ಗಬಾರದೆಂದು ಕೈಯಲ್ಲಿ ಕೋಲು ಹಿಡಿದು ಪೈರು ಕಾಯುತ್ತಿದ್ದಳು. ತಂದೆಯನ್ನು ಹುಡುಕುವುದನ್ನು ಮರೆತ ಬಾಲಕನು ಆ ಬಾಲೆಯನ್ನು ಬಲಾತ್ಕರಿಸಿದನು. ಅವಳು ಅಂಜಿ ಅರಚಿಕೊಂಡಳು. ಒಡನೆಯೇ ಅಗಸರು ಬಡಿಗೆಗಳನ್ನು ಹಿಡಿದು ಬಂದು ಹಿಂದುಮುಂದು ನೋಡದೆ ನಿಷ್ಕರುಣೆಯಿಂದ ಜೋಕುಮಾರನನ್ನು ಬಡಿದು ಕೊಂದರು. ಈ ಎಲ್ಲ ಅನಾಚಾರಗಳ ನಡುವೆಯು ಮಾರಿದೇವತೆಯ ಮಗನಾದ್ದರಿಂದ ಆತನು ಪೂಜಾರ್ಹನಾಗಿ ಗ್ರಾಮದೈವಗಳಲ್ಲಿ ಒಬ್ಬನಾಗಿದ್ದಾನೆ.'[೯] ಉತ್ತರ ಕರ್ನಾಟಕದ ಕೆಲ ಭಾಗದಲ್ಲಿ 'ಜೋಕುಮಾರನ ಹುಣ್ಣಿಮೆ' ಯನ್ನು ಈಗಲು ಆಚರಿಸುತ್ತಾ ಬರುತ್ತಿದ್ದಾರೆ. ಈತನನ್ನು ಆರಾಧಿಸುವುದು ಒಂದು ಸಂಪ್ರದಾಯಕವಾಗಿ ಬೆಳೆದು ಬಂದಿದೆ.

**ಅಡಿಟಿಪ್ಪಣಿಗಳು**

೧. ತಿಪ್ಪೆರುದ್ರಸ್ವಾಮಿ, ಎಚ್, ಕರ್ನಾಟಕ ಸಂಸ್ಕೃತ ಸಮೀಕ್ಷೆ, ೨೦೦೭, ಪುಟ ಸಂ. ೪೭೯.

೨. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩. ಪುಟ ಸಂ. ೧೦೭.

೩. ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರು ಒಂದು ಅಧ್ಯಯನ, ೧೯೮೨ ಪುಟ ಸಂ.೪೪.

೪. ಅದೇ ಪುಟ ಸಂ. ೪೫.

೫. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩. ಪುಟ ಸಂ. ೧೦೯.

೬. ಶಾಂತಪ್ಪ. ದ್ಯಾಮಣ್ಣ ಗುಡಕರ, ಕುಂದಗೋಳ ಗ್ರಾಮದ ಕಲಾವಿದರು.

೭. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩, ಪುಟ ಸಂ. ೧೧೦.

೮. ವಿಠ್ಠಲ ಗಣಪತಿ ಗೊಂದಳಿ, ವಿಜಯಪೂರ ಕಲಾವಿದರು.

೯. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩, ಪುಟ ಸಂ. ೧೧೨.

೧೦. ಅದೇ ಪುಟ ಸಂ. ೧೧೪.

೧೧. ವೆಂಕಣ್ಣ ಸುಗತೇಕರ ಬಾಗಲಕೋಟದ. ಕಲಾವಿದರು.

೧೨. ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರು ಒಂದು ಅಧ್ಯಯನ, ೧೯೮೨, ಪುಟ ಸಂ.೧೨.

೧೩. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩, ಪುಟ ಸಂ. ೧೧೪.

೧೪. ಅದೇ ಪುಟ ಸಂ. ೧೦೨.

೧೫. ವೆಂಕಪ್ಪ ಸುಗತೇಕರ ಬಾಗಲಕೋಟದ ಕಲಾವಿದರು.

೧೬. ನೀತಿಶಾಸ್ತ್ರ, ಎಚ್. ರಂಗಾಚಾರ್, ಮುನ್ನುಡಿ

೧೭. ದೇವಪ್ಪ ಗುಡಕರ ಕುಂದಗೊಳ ಗ್ರಾಮದ ಕಲಾವಿದರು.

೧೮. ರಾಮು ಇಂಗಳೆ ರಾಮಪೂರ ಕಲಾವಿದರು.

೧೯. ದೇವಪ್ಪ ಗುಡಕರ ಕುಂದಗೋಳ ಗ್ರಾಮದ ಕಲಾವಿದರು.

೨೦. ಕೀರ್ತಿನಾಥ ಕುರ್ತಕೋಟಿ, ಕನ್ನಡ ಸಾಹಿತ್ಯ ಸಂಗಾತಿ, ೨೦೧೦, ಪುಟ ಸಂ. ೨೦೭

೨೧. ನಾಗರತ್ನ, ಟಿ.ಎಸ್, ಮಂದಾಕಿನಿ, ಹರಿದಾಸರ ಜನಪ್ರಿಯ ಹಾಡುಗಳು,(ಸಂ) ೧೯೯೬. ಪು.ಸಂ.೩೧೨.

೨೨. ವೀರೇಶ.ಶೇ. ಬಡಿಗೇರ, ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು, ೧೯೯೯, ಪು.ಸಂ.೧೪೩.

೨೩. ವೆಂಕಪ್ಪ ಸುಗತೇಕರ, ಬಾಗಲಕೊಟದ ಕಲಾವಿದರು.

೨೪. ಪಾಂಡುರಂಗ ಸುಗತೇಕರ, ಬಾಗಲಕೊಟದ ಕಲಾವಿದರು.

೨೫. ವಿಠ್ಠಲ, ಗಣಪತಿ, ಗೊಂದಳಿ, ವಿಜಯಪೂರ ಕಲಾವಿದರು.

೨೬. ಮುದೇನೂರ ಸಂಗಣ್ಣ, ಗೊದಲಿಗರ ದೇವೆಂದ್ರಪ್ಪನ ಆಟಗಳು ೧೯೯೩, ಪುಟ. ಸಂ ೬೨,

೨೭. ಅದೇ ಪುಟ ಸಂ ೫೦ .

೨೮. ಅದೇ.ಪುಟ ಸಂ ೬೪.

೨೯. ಅದೇ. ಪುಟ ಸಂ ೫೧

೩೦. ವೀರೇಶ. ಶೇ. ಬಡಿಗೇರ, ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು,೧೯೯೯, ಪುಟ ಸಂ. ೧೪೧.

೩೧. ಶಾಂತಪ್ಪ ಗುಡಕರ ಕುಂದಗೋಳ ಗ್ರಾಮದ ಕಲಾವಿದರಿಂದ ಸಂಗ್ರಹ.

೩೨. ದ್ಯಾಮಪ್ಪ ಮತ್ತು ಶಾಂತಪ್ಪ ಗುಡಕರ ಅವರಿಂದ ಸಂಗ್ರಹ.

೩೩. ವಿರೇಶ.ಶೇ.ಬಡಿಗೇರ, ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು, ೧೯೯೯, ಪುಟ ಸಂ. ೧೪೨.

೩೪. ಕನಕಪ್ಪ ದ್ಯಾಮಪ್ಪ ಗುಡಕರ ಕುಂದಗೋಳ ಗ್ರಾಮದ ಕಲಾವಿದರು.

೩೫. ಕನಕಪ್ಪ ದ್ಯಾಮಪ್ಪ ಗುಡಕರ ಕುಂದಗೋಳ ಗ್ರಾಮದ ಕಲಾವಿದರು.

೩೬. ಕನಕಪ್ಪ ದ್ಯಾಮಪ್ಪ ಗುಡಕರ ಕುಂದಗೋಳ ಗ್ರಾಮದ ಕಲಾವಿದರು.

೩೭. ವಿರೇಶ. ಶೇ. ಬಡಿಗೇರ. ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು, ೧೯೯೯, ಪುಟ ಸಂ. ೧೪೪.

೩೮. ಅದೇ ಪುಟ ಸಂ ೧೪೩

೩೯. ಬೋರಲಿಂಗಯ್ಯ, ಹಿ. ಚಿ. ಉಜ್ಜನಿ ಚೌಡಮ್ಮ ಗ್ರಾಮದೇವತೆ ಅಧ್ಯಯನ, ೨೦೦೧, ಪುಟ ಸಂ.೪.

೪೦. ಅದೇ ಪುಟ ಸಂ. ೫

೪೧. ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩,ಪುಟ ಸಂ.೧೯.

೪೨. ಅದೇ ಪುಟ ಸಂ. ೨೧.

೪೩. ಬೋರಲಿಂಗಯ್ಯ, ಹಿ.ಚಿ. ಉಜ್ಜನಿ ಚೌಡಮ್ಮ ಗ್ರಾಮದೇವತೆ ಅಧ್ಯಯನ, ೨೦೦೧, ಪುಟ ಸಂ.೫.

೪೪. ಅದೇ ಪುಟ ಸಂ. ೧೨.

೪೫. ಚಂದ್ರಕಾಂತ ಪೋಕಳೆ, ತುಳಜಾಭವಾನಿ, ೨೦೦೮. ಪುಟ ಸಂ. ೩೫.

೪೬. ಅದೇ ಪುಟ ಸಂ. ೩.

೪೭. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ೧೯೯೩, ಪುಟ ಸಂ.೧೧೩.

೪೮. ಚಂದ್ರಕಾಂತ ಪೋಕಳೆ, ತುಳಜಾಭವಾನಿ ೨೦೦೮. ಪುಟ ಸಂ. ೨೧೦.

೪೯. ಹಾಡಿದವರು. ಭೋಜರಾಜ. ಗೊಂದಳಿ. ಕೊಡಿಹಾಳ. ತಾ. ಹುನಗುಂದ.

೫೦. ಜಿ. ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ೧೯೭೯, ಪುಟ ಸಂ. ೧೮೩.

೫೧. ಅದೇ ಪುಟ ಸಂ. ೧೮೫.

೫೨. ಪಾಟೀಲ,ಬಿ.ಪಿ. ಜಾನಪದ ಸಾಹಿತ್ಯ ದರ್ಶನ, ಭಾಗ–೨೩, ಜನಪದ ನಂಬಿಕೆಗಳು, (ಸಂ)೧೯೯೯, ಪುಟ ಸಂ.೯೩.

೫೩. ಮುದೇನೂರ ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩, ಪುಟ ಸಂ. ೬೪.

೫೪. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ ೧೯೯೩, ಪುಟ ಸಂ. ೧೦೮.

೫೫. ಮಂಜುನಾಥ ಬೇವಿನಕಟ್ಟಿ, ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ, ೨೦೦೯, ಪುಟ ಸಂ. ೧೦೯.

೫೬. ಕುಂದಾಪುರದ ಕೃಷ್ಣಮೂರ್ತಿ ಕಾವ್ರಾಡಿ ಅವರಿಂದ ಸಂಗ್ರಹಣೆ.

೫೭. ತೋಂಡಿಹಾಳ, ಎಸ್. ಬಿ. ಶ್ರೀ ಬನಶಂಕರಿ ದೇವಿ ಮಹಾತ್ಮೆ, ೨೦೧೨, ಪುಟ ಸಂ ೧೪,

೫೮. ರಾಮಚಂದ್ರ, ಸಿ.ಎಂ ಸಂಕೇತ ಜನಾಂಗ ಸಂಸ್ಕೃತಿ ಮತ್ತು ಬಾಷೆ, ೧೯೯೧. ಪುಟ ಸಂ.೧೦೮..

೫೯. ಜೋಕುಮಾರ ' ಗ್ರಾಮೀಣ ' ಬೆಂಗಳೂರು, ೧೯೭೭, ಪುಟ ಸಂ. ೧೩೫–೧೫೨.

## ಅಧ್ಯಾಯ ೬

# ಗೊಂದಲಿಗರ ಕಥನ ಪ್ರದರ್ಶನ

### ೬.೧ ಪೀಠಿಕೆ

ಧಾರ್ಮಿಕ ಆಚರಣೆಗಳಲ್ಲಿ ಒಂದಾದ ಗೊಂದಲವು ನೀತಿ, ಸಂಸ್ಕಾರ, ಸಂಪ್ರದಾಯಗಳ ಪ್ರತಿರೂಪವಾಗಿದೆ. ವೃತ್ತಿಗಾಯಕರಾದ ಗೊಂದಲಿಗರು ನಡೆಸಿಕೊಡುವ ಕಾರ್ಯಕ್ರಮವೇ ಈ ಗೊಂದಲ. ಮುಖ್ಯವಾಗಿ ಗೊಂದಲವು ಅಂಬಾಭವಾನಿಯ ಆರಾಧನೆಯಾಗಿದ್ದು, ಉಗ್ರ ಹಾಗೂ ಸೌಮ್ಯ ದೇವಿಯ ಆರಾಧನೆಯನ್ನು ಮಾಡುತ್ತಾರೆ. ಗೊಂದಲ ಕಾರ್ಯವನ್ನು ಮಾಡುವಲ್ಲಿ ಧಾರವಾಡದ ಕುಂದಗೋಳ ಗ್ರಾಮದ ಗುಡಕರ ಬಂಧುಗಳು, ಪ್ರಸ್ತುತ ಬಾಗಲಕೋಟೆಯ ವೆಂಕಪ್ಪ. ಅಂಬಾಜಿ. ಸುಗತೇಕರ ಗೊಂದಲ ಮೇಳ ಮಾಡುವಲ್ಲಿ ಪ್ರಸಿದ್ಧರಾಗಿದ್ದಾರೆ ಮತ್ತು ಇವರು ರಾಜ್ಯ ಪ್ರಶಸ್ತಿಯನ್ನು ಪಡೆದಿದ್ದಾರೆ.

'ಮಾತೃದೇವತೆಗಳ ಆರಾಧಕರಾದ ಗೊಂದಲಿಗರು ಶಕ್ತಿದೇವತೆಗಳ ಹೆಸರಿನಿಂದ ಪ್ರತಿಷ್ಠಾಪಿಸುವ ಶಿಷ್ಟ ಹಾಗೂ ಜನಪದ ದೇವತೆಗಳನ್ನು ಪೂಜಿಸದವರಿಗೆಲ್ಲ ಅವಳ ಮಹಿಮೆಯಿಂದ ಭಕ್ತರು ಯಾವ ಯಾವ ಸ್ಥಾನಮಾನಗಳನ್ನು ಪಡೆದುಕೊಂಡಿದ್ದಾರೆಂಬುದನ್ನು ಕುರಿತು ಗೊಂದಲಿಗರು ಹಾಡು ಕೀರ್ತನೆ, ಹಾಗೂ ಕಥೆಗಳ ಮೂಲಕ ವಿವರಿಸುತ್ತಾರೆ. ಮೈಸೂರಿನ ಒಡೆಯರಿಗೆ ಚಾಮುಂಡಿ ದೇವಿ ಒಲಿದಿರುವ ಬಗ್ಗೆ, ಶಿವಾಜಿ ಮಹಾರಾಜನಿಗೆ ಅಂಬಾಭವಾನಿ ವರನೀಡಿರುವ ಬಗ್ಗೆ, ಪಂಡಿತರಿಗೆ ಸರಸ್ವತಿ ಒಲಿದಿರುವ ಬಗ್ಗೆ, ದುಷ್ಟರನ್ನೆಲ್ಲಾ ದುರ್ಗಿ ಸಂಹರಿಸಿದ್ದು ಹೇಗೆ ಎಂಬುದರ ಬಗ್ಗೆ ತಿಳಿಸುತ್ತಾ ಅಂಬಾಭವಾನಿಯ ಮಹಿಮೆಗಳನ್ನು ಜನರಿಗೆ ಆವೇಶಭರಿತರಾಗಿ ತಿಳಿಸುತ್ತಾರೆ. ಅಲ್ಲದೇ ದೇವಿ ಪುರಾಣ, ದೇವಿ ಸಹಸ್ರ ನಾಮಾವಳಿ, ದೇವಿ ಚರಿತ್ರೆ, ಎಲ್ಲಮ್ಮನ ಚರಿತ್ರೆ, ಬನಶಂಕರಿ ಚರಿತ್ರೆ, ಚಾಮುಂಡಿ ಚರಿತ್ರೆಗಳನ್ನು ಈ ಸಂದರ್ಭದಲ್ಲಿ ಭಾವಾವೇಶದಿಂದ ಹೇಳುವುದರ ಮೂಲಕ ಕೇಳುಗರಲ್ಲಿ ಶಕ್ತಿ ದೇವತೆಗಳ ಬಗ್ಗೆ ಭಯ-ಭಕ್ತಿ ಹುಟ್ಟುವಂತೆ ಮಾಡುತ್ತಾರೆ. ಗೊಂದಲಿಗರ ಈ ಗೊಂದಲಿ ಪೂಜೆಯಿಂದ ಪ್ರಭಾವಿತರಾದ ಜನ ಇತರರಂತೆ ನಮಗೂ ದೇವಿಯ ಅನುಗ್ರಹವಾಗಲಿ ಎಂದು ಆಶಿಸಿ ಗೊಂದಲಿಗರಿಂದ ಆದಿಶಕ್ತಿಯನ್ನು ತಮ್ಮ ಮನೆಯಲ್ಲಿ ಪೂಜಿಸುವ ಆರಾಧಿಸುವ ಪರಂಪರೆಯನ್ನು ಅನೇಕ ಸಮುದಾಯದವರು ಬೆಳೆಸಿಕೊಂಡು

ಬಂದರು.'[7] ಗೊಂದಲ ಕಾರ್ಯದಲ್ಲಿ ಮಾತೃದೇವತೆ ಅಂಬಾಭವಾನಿಯ ಆರಾಧನೆ ಪ್ರಮುಖ ವಾಗಿರುತ್ತಿದೆ. ಮೂಲಶಕ್ತಿಗಿಂತ ದುಷ್ಟರ ಸಂಹಾರಕ್ಕಾಗಿ ಅವತರಿಸಿ, ಸಾಂಸ್ಕೃತಿಕರಣಗೊಂಡ ಶಕ್ತಿಯನ್ನೇ ಹೆಚ್ಚು ಆರಾಧಿಸುತ್ತಾರೆ. ಸಾಮಾನ್ಯವಾಗಿ ಜಾತ್ರೆ, ಮದುವೆ, ಉಪನಯನ ನವರಾತ್ರಿ ಮುಂತಾದ ಸಂದರ್ಭದಲ್ಲಿ ಗೊಂದಲದ ಆಚರಣೆ ನಡೆಯುತ್ತದೆ. ಈ ಗೊಂದಲದ ಮೂಲ ಆರಾಧನೆಯಲ್ಲಿ ಅಂಬಾಭವಾನಿಯ ಪೂಜೆಯನ್ನು ಕಾಣುತ್ತೇವೆ. ಗೊಂದಲವನ್ನು ದೇವಸ್ಥಾನ, ಹಾಗೂ ಊರಾಡುವಾಗ, ಬಯಲು ಪ್ರದೇಶದಲ್ಲಿ ಏರ್ಪಡಿಸುತ್ತಾರೆ. ಗೊಂದಲ ಹಾಕುವ ಮೂಲಕ ಗೊಂದಲಿಗರಾಟವು ನಡೆಯುತ್ತದೆ. ಗೊಂದಲವನ್ನು ಏಕೆ ಹಾಕಬೇಕು ? ಎಂಬ ಪ್ರಶ್ನೆಗೆ ತುಳಜಾಪೂರದ ಗೊಂದಲಿಗರು ಹಾಕಿದ ಗೊಂದಲದ ಪ್ರದರ್ಶನದಲ್ಲಿ ಅಭಿವ್ಯಕ್ತ ಪಡಿಸಿದ್ದು ಹೀಗೆ.

" ಕ: ಏನಪ್ಪಾ ಗೊಂದಲಿಗ್ಯಾ ಛತ್ತಿಸಕೋಟಿ ದೇವ್ರು ಗೊಂದಲಿಗ ಬಂದ್ರು

ಹಿ: ಗೊಂದಲಿಗ ಬಂದ್ರು

ಕ: ಆ ವ್ಯಾಳಿ ಈ ವ್ಯಾಳಿ ಒಂದಾಯಿತು

ಹಿ: ಒಂದಾಯಿತು

ಕ: ಐದು ತತ್ವಿನ ಐದು ಹೆಸರಿನ ಪಂಚರಕ್ಷಿ ಪೂಜಾ ಕಟ್ಟಿ ಐದು ಕಬ್ಬಿನ ದಂಡ ಹಚ್ಚಿ ಮದು ಮಗಾ ಮದು ಮಗಳು ಇಬ್ಬರಿಗು ಜೋಡಿಲಿ ಕುಂಡ್ರಸಿದ್ರು

ಹಿ: ಜೋಡಿಲಿ ಕಂಡ್ರಿಸಿದ್ರು

ಕ: ಗೊಂದಲಿಗ್ಯಾನ ದೀವಟಗಿ ಹಚ್ಚಿಸಿದ್ರು ದೀವಟಗಿ ಹಚ್ಚಿ ಎಣ್ಣಿ ಉರದ್ರ

ಹಿ: ಏನಾಗ್ತದ ?

ಕ: ದೀವಟಗಿ ಹಚ್ಚಿ ಎಣ್ಣಿ ಉರದ್ರ ಬಂದಂತ ಸಂಕಟ ಬಯಲಾಗ್ತದ ಭಕ್ತರ ಸಂಕಟ ಬಯಲಾಗ್ತದ ನಾವು ಗೊಂದಲಾ ಯಾಕ ಹಾಕ್ತೇವ ?

ಹಿ: ಯಾಕ ಹಾಕ್ತೇವ ?

ಕ: ಮೊದಲ ಮನ್ಯಾಗ ಗಂಡಸ ಮಗನ ಮದುವಿಯಾದ್ರ ಗೊಂದ್ಲಹಾಕಬೇಕಪ್ಪ ಇಲ್ಲಾಂದ್ರ ಏನಾಗ್ತದ ಸಂಸಾರದಾಗ ಗೊಂದ್ಲ ಮನ್ಯಾಗ ಗೊಂದ್ಲ ಹಾದ್ಯಾಗ ಗೊಂದ್ಲ ಎಲ್ಲಾ ಕಡೆಗೂ ಗೊಂದ್ಲ ಗೊಂದ್ಲ ಗೊಂದ್ಲ ಹಿಂದಕಿನ ಹಿರ್‍ಯಾರು ಮಾಡಿಟ್ಟರಪಾ ಗೊಂದ್ಲ"

ಈ ರೀತಿಯಾಗಿ ಗೊಂದಲದ ಮಹತ್ವವನ್ನು ತಿಳಿಸುತ್ತಾರೆ. "ಇಲ್ಲಿ ಹಿಂದಕಿನ ಹಿರ್‍ಯಾರು ಮಾಡಿಟ್ಟಾರಪಾ ಗೊಂದಲ' ಎನ್ನುವಲ್ಲಿ ಹಿರಿಯರು ಪರಂಪರಾಗತವಾಗಿ ನಡೆಸಿಕೊಂಡು

ಬಂದ ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೋಗಬೇಕು ಇಲ್ಲದಿದ್ದರೆ ತೊಂದರೆಗಳು ಕಟ್ಟಿಟ್ಟ ಬುತ್ತಿ ಎಂಬ ನಂಬಿಕೆ ಅವರಲ್ಲಿ ಬೇರೂರಿವುದು ಕಂಡು ಬರುತ್ತದೆ. ಜೊತೆಗೆ ಗೊಂದಲದ ಪ್ರಮುಖ ಉದ್ದೇಶ ಮಾತೃದೇವತೆಗಳನ್ನು ಸಂತೃಪ್ತಿಪಡಿಸಿ, ಅವರ ಸಾಕ್ಷಾತ್ಕಾರ ಪಡೆಯುವುದಾಗಿದೆ. ಗೊಂದಲದಲ್ಲಿ ದೇವಿಯ ಸ್ತುತಿಗೆ ಈ ಕಥನ ಕ್ರಿಯೆಯ ಬಹು ಮುಖ್ಯ ಅಂಗ ಎಂದು ಹೇಳಬಹುದು. ನಂತರದ ಗದ್ಯಪದ್ಯಗಳಲ್ಲಿ ಧರ್ಮ, ನೀತಿ, ಹಾಸ್ಯ, ಶೃಂಗಾರ ಮುಂತಾದವು ಅನಾವರಣಗೊಳ್ಳುತ್ತ ಹೋಗುತ್ತದೆ. ಎಲ್ಲಮ್ಮ, ಜಗದಂಬೆ, ಆದಿಶಕ್ತಿ, ಸತಿಸುಲೋಚನ, ಹೇಮರಡ್ಡಿ ಮಲ್ಲಮ್ಮ ಮುಂತಾದ ಪೌರಾಣಿಕ ಹಾಗೂ ಐತಿಹಾಸಿಕ ಕಥೆಗಳನ್ನು ಹೇಳಲಾಗುತ್ತದೆ. ರಾತ್ರಿಯಿಂದ ಬೆಳಗಿನವರೆಗೂ ಇದರ ಪ್ರದರ್ಶನದ ನಡೆಯುತ್ತದೆ. ಸಂಕೀರ್ಣತೆಯಿಂದ ಕೂಡಿದ ಇವರ ಕಥೆಗಳು ವಿಶಾಲತೆಯತ್ತ ಸಾಗುವುದು. ಗೊಂದಲಿಗರ ಕಥೆಗಳ ಲಕ್ಷಣವಾಗಿದೆ. ಶಿವಶರಣರ ಕಥೆಗಳು, ರಾಜರ ಕಥೆಗಳು, ಪತಿ ಪತ್ನಿಯರ ಕಥೆಗಳು, ಪತಿವ್ರತಾ ಧರ್ಮವನ್ನು ಸಾರುವ ಕಥೆಗಳು, ಮನರಂಜನಾ ಕಥೆಗಳು, ಮತ್ತು ಆಧುನಿಕತೆಗೆ ಸಂಬಂಧಿಸಿದ ವಿಜ್ಞಾನ, ರಾಜಕೀಯ ಮುಂತಾದವುಗಳಿಂದಾಗುವ ಪ್ರಯೋಜನ ಹಾಗೂ ದುಷ್ಪರಿಣಾಮಗಳನ್ನು ಕುರಿತು ಹಾಡುಗಳನ್ನು ಹೇಳುತ್ತಾರೆ. ವೆಂಕಪ್ಪ. ಸುಗತೇಕರರವರು ಇಂಥ ಪದ್ಯಗಳನ್ನು ಹಾಡುವುದರಲ್ಲಿ ನಿಸ್ಸೀಮರು ಎಂದು ಹೇಳಬಹುದು. ಗೊಂದಲಿಗರ ಗೊಂದಲ ಪ್ರದರ್ಶನದ ಕ್ರಮವನ್ನು ವ್ಹಿ.ಎಸ್.ಬಡಿಗೇರ. ಅವರು 'ಆಮಂತ್ರಣ ಗೊಂದಲ, ಬಯಲು ಗೊಂದಲ, ಗುಡಿ ಗೊಂದಲ, ಹರಕೆ ಗೊಂದಲ"[೨] ಎಂದು ವಿಭಾಗ ಮಾಡಿದ್ದಾರೆ. ಗೊಂದಲ ಕಥನ ಪ್ರದರ್ಶನವನ್ನು ಗಮನದಲ್ಲಿಟ್ಟುಕೊಂಡು ಈ ಕೆಳಗಿನಂತೆ ವಿಭಾಗಿಸಬಹುದು.

೧. ಪ್ರಧಾನ ಗೊಂದಲಗಳು ೨. ಮದುವೆಯ ಗೊಂದಲ

೩. ಜಾತ್ರೆಯ ಗೊಂದಲ ೪. ಗೌಣ ಗೊಂದಲ.

ಗೌಣಗೊಂದಲದಲ್ಲಿ ಬಯಲು ಗೊಂದಲ ಮತ್ತು ಭಾಗ್ಯದ ಗೊಂದಲ ಎಂದು ವಿಭಾಗಿಸಿಕೊಳ್ಳಬಹುದಾಗಿದೆ. ಗೊಂದಲಿಗದ ಪ್ರದರ್ಶನವು ಸಾಮಾಜಿಕ, ಧಾರ್ಮಿಕ, ಹಿತ ಚಿಂತನೆಯಲ್ಲಿ ನಡೆಯುತ್ತದೆ. ಗೊಂದಲದ ಮೂಲಕ ಸಾಮಾಜಿಕ ಸ್ವಾಸ್ಥವನ್ನು ತರಲು ಇವರು ಪ್ರಯತ್ನಿಸುತ್ತಿರುವುದು ಕಂಡು ಬರುತ್ತವೆ. ಗೊಂದಲದಲ್ಲಿ ಸಾಮಾಜಿಕ ಕಳಕಳಿ, ನೀತಿ, ಧರ್ಮ, ಪವಿತ್ರತೆ, ಅತೀಮಾನುಷ, ಪವಾಡ, ಸ್ನೇಹತ್ವ, ಸಂಬಂಧಗಳು ಪಾತಿವೃತ್ಯ ಮುಂತಾದ ಅಂಶಗಳನ್ನು ಸಮಾಜಕ್ಕೆ ತೋರಿಸುವ ಕಾರ್ಯವನ್ನು ಮಾಡುತ್ತದೆಂದು ಹೇಳಬಹುದು. ಇಂತಹ ಗೊಂದಲದ ಕಥನಗಳನ್ನು ಪ್ರಧಾನ ಗೊಂದಲಗಳು ಹಾಗೂ ಗೌಣ ಗೊಂದಲಗಳು ಎಂದು ವಿಂಗಡಿಸಿ ಹೇಳಲಾಗುತ್ತದೆ.

## ೬.೨ ಪ್ರಧಾನ ಗೊಂದಲಗಳು

ಪ್ರಧಾನ ಗೊಂದಲಗಳೆಂದರೆ ಪ್ರಮುಖವಾಗಿ ಕೆಲವು ಸಂದರ್ಭಗಳಲ್ಲಿ ಗೊಂದಲಗಳನ್ನು ಏರ್ಪಡಿಸಲೇಬೇಕಾಗುತ್ತದೆ. ಗೊಂದಲವನ್ನು ಮದುವೆ, ಉಪನಯನ, ನವರಾತ್ರಿ ಮುಂತಾದ ನಿರ್ಧಿಷ್ಟವಾದ ಕಾಲದಲ್ಲಿ ಹಾಕಲಾಗುತ್ತದೆ. ಇಂತಹ ಗೊಂದಲಗಳನ್ನು ಪ್ರಧಾನ ಗೊಂದಲಗಳು ಎನ್ನುವರು. ಪ್ರಧಾನ ಗೊಂದಲದಲ್ಲಿ ೧. ಮದುವೆಯಲ್ಲಿ ನಡೆಸುವ ಗೊಂದಲಗಳು೨. ಜಾತ್ರೆಯಲ್ಲಿ ನಡೆಸುವ ಗೊಂದಲಗಳು ಎಂದು ವಿಂಗಡಿಸಿಕೊಳ್ಳಬಹುದು.

### ೬.೨.೧ ಮದುವೆ ಗೊಂದಲ

ಕೆಲವು ಕುಟುಂಬಗಳಲ್ಲಿ ಮದುವೆಯ ಹಿಂದಿನ ದಿನ ಅಥವಾ ಮದುವೆಯ ನಂತರದ ದಿನದಲ್ಲಿ ಗೊಂದಲ ಹಾಕಿಸುವ ಪದ್ಧತಿಯನ್ನು ರೂಢಿಸಿಕೊಂಡಿರುತ್ತಾರೆ. (ಬ್ರಾಹ್ಮಣರು,) ಗೊಂದಲಿಗರು, ಲಂಬಾಣಿಗರು, ವಿಶ್ವಕರ್ಮರು, ಲಿಂಗಾಯತರು, ಮರಾಠರು, ಕುರುಬರು, ಹಾಗೂ ಕೆಲ ಹರಿಜನರು ಸಹ ಗೊಂದಲ ಹಾಕಿಸುವುದರ ಬಗ್ಗೆ ನಿಂಗಣ್ಣ ಸಣ್ಣಕ್ಕಿಯವರು ಉಲ್ಲೇಖಿಸಿದ್ದಾರೆ. ರಾಂಪೂರದ ರಾಮು ಗೊಂದಳಿಯವರು ಹೇಳುವಂತೆ, ಯಾರ ಮನೆಯಲ್ಲಿ ಅಂಬಾಭವಾನಿ ಇರುವಳೋ ಅವರೆಲ್ಲರೂ ಗೊಂದಲ ಹಾಕಿಸುತ್ತಾರೆ ಎಂದು ಹೇಳುತ್ತಾರೆ.

ಮದುಮಕ್ಕಳಿಗೆ ಸುರಿಗೆ ನೀರು ಹಾಕಿದ ನಂತರ ಈ ಗೊಂದಲ ಕಾರ್ಯ ಇಟ್ಟುಕೊಂಡಿರುತ್ತಾರೆ. ಮದು ಮಕ್ಕಳು ಮಡಿ ಉಟ್ಟು ಪೂಜೆಗೆ ಸಿದ್ದರಾಗುತ್ತಾರೆ. ಅಂದು ಅವರು ಉಪವಾಸ ವೃತವನ್ನು ಕೈಗೊಂಡಿರುತ್ತಾರೆ. ಹಾಗೆಯೇ ಆ ಮನೆಯಲ್ಲಿ ಕೆಲವು ಹಿರಿಯರು ಉಪವಾಸ ವ್ರತದಲ್ಲಿರುತ್ತಾರೆ. ಕೆಲವರು ತಮ್ಮ ಮನೆಗಳಲ್ಲಿ ಗೊಂದಲ ಕಾರ್ಯ ನಡೆಯುವುದಕ್ಕಿಂತ ಪೂರ್ವ ಊಟ ಹಾಕಿಸುತ್ತಾರೆ.

" ಬಂಧು ಬಳಗದ ಊಟವಾದ ನಂತರ ಗೊಂದಲಿಗರು ಗೊಂದಲದ ಪೂಜೆಯ ಸಿದ್ಧತೆ ಮಾಡಿಕೊಳ್ಳುತ್ತಾರೆ. ಗೊಂದಲದ ಕಲಾವಿದರಿಗೆ ಹಿಂದಿನ ದಿನ ಅವರ ಮನೆಗೆ ಹೋಗಿ ವೀಳ್ಯೆ ಕೊಟ್ಟು ಆಮಂತ್ರಿಸುವ ಪದ್ಧತಿ ರೂಢಿಯಲ್ಲಿದೆ. ಇದರಲ್ಲಿ ಇನ್ನೊಂದು ಆಚರಣೆ ಇದೆ. ವೀಳ್ಯೆ ಕೊಟ್ಟ ನಂತರ ಭಕ್ತರು ಗೊಂದಲಿಗರ ಮನೆಯಿಂದ ಕವಡಿ ಸರ ತರಿಸಿಕೊಂಡು ಅದನ್ನು ಗೊಂದಲ ಹಾಕಿಸುವವರ ಮನೆಯ ದೇವರ ಜಗಲಿಯ ಮೇಲೆ ಇಟ್ಟು ಪೂಜಿಸುತ್ತಾರೆ. ನಡುಮನೆಯಲ್ಲಿ ನೆಲಸಾರಿಸಿದ ನಂತರ ಕುಳಿತುಕೊಳ್ಳಲು ಉಪಯೋಗಿಸುವ ಹಸೆಮಣೆ (ಚೌರಂಗ) ಹಾಕುತ್ತಾರೆ. ಅಷ್ಟದಿಕ್ಕುಗಳಿಗೂ ಅಕ್ಕಿ ಹರಡಿ ಅಲ್ಲಿ ಒಂದು ನೀರು ತುಂಬಿದ ಕಳಸ ಅಥವಾ ತಂಬಿಗೆ ಇಟ್ಟು ಅದರ ಸುತ್ತ ಬಾಳೆ ಅಥವಾ ಕಬ್ಬಿನ ಗಳಗಳನ್ನು ಬಳಸಿ ಮಂಟಪ ತಯಾರಿಸುತ್ತಾರೆ. ಕಳಸದಲ್ಲಿ ಮೀಸಲು ನೀರು ತುಂಬಿ ಅದಕ್ಕೆ ವೀಳ್ಯೆದೆಲೆ ಅಥವಾ ಮಾವಿನ ಎಲೆಗಳನ್ನು ಇಟ್ಟು ಅದರ ಮೇಲೆ ತೆಂಗಿನಕಾಯಿ ಇಡುತ್ತಾರೆ. ಕಳಸಕ್ಕೆ ಖಣ, ಕುಬ್ಬಸ ಹೊದಿಸುವರು. ಅರಿಷಿಣ ಕುಂಕುಮ ಹಚ್ಚಿ ಬಂಗಾರದ ಒಡವೆಗಳನ್ನು ಹಾಕುವರು. ಐದು ತರಹದ ವಸ್ತುಗಳಾದ

ಅರಿಷಿಣ. ಉತ್ತತ್ತಿ, ಕೊಬ್ಬರಿ, ಬದಾಮಿ, ಅಡಿಕೆಗಳನ್ನು ವೀಳ್ಯದೆಲೆಯಲ್ಲಿಟ್ಟು ಉಡಿ ತುಂಬುತ್ತಾರೆ. ಕೆಲವು ಕಡೆ ನೆಲಗಡಲೆಯ ಉಡಿ ತುಂಬುತ್ತಾರೆ. ಮುಂದೆ ಹೂವಿನ ಕಂಠಮಾಲೆ (ತೊಟ್ಟಿಲು) ಕಟ್ಟುತ್ತಾರೆ. ಹೀಗೆ ಗೊಂದಲ ಪೂಜೆಗೆ ಅಂಬಾಭವಾನಿಯನ್ನು ಪ್ರತಿಷ್ಠಾಪನೆ ಮಾಡುತ್ತಾರೆ. ಬ್ರಾಹ್ಮಣರ ಮನೆಗಳಲ್ಲಿ ನಡೆಯುವ ಗೊಂದಲ ಪೂಜೆಯಲ್ಲಿ ಅಂಬಾಭವಾನಿಯನ್ನು ಪ್ರತಿಷ್ಠಾಪಿಸುವ ಸಂದರ್ಭದಲ್ಲಿ ಬ್ರಾಹ್ಮಣರ ಮನೆಯ ದೇವರ ಜಗಲಿಯಲ್ಲಿರುವ ಮೂರ್ತಿಯನ್ನು ಗೊಂದಲಿಗರು ಬಲಗೈಯಲ್ಲಿ ಹಿಡಿದುಕೊಂಡು ದೀವಟಿಗೆ ಮತ್ತು ಮಂಗಳ ವಾದ್ಯಗಳ ಮೂಲಕ ತಂದು ನಿರ್ಧಿಷ್ಟ ಪಡಿಸಿದ ಸ್ಥಳದಲ್ಲಿ ಪ್ರತಿಷ್ಠಾಪನೆ ಮಾಡುತ್ತಾರೆ. ಎಂದು ರಾಮಪುರದ ರಾಮು ಇಂಗಳೆ ಗೊಂದಲಿ ಹೇಳುತ್ತಾರೆ. ಗೊಂದಲದ ಆರಾಧನೆ ರಾತ್ರಿ ೧೦.೦೦ ಘಂಟೆಯ ನಂತರ ಪ್ರಾರಂಭವಾಗುತ್ತದೆ. ಮುಖ್ಯ ಗೊಂದಲಿಗ ಬಂದು ದೇವಿ ಪ್ರತಿಷ್ಠಾಪಿಸಿ, ಪೂಜಿಸಿ ಧೂಪ, ದೀಪಗಳಿಂದ ಆರತಿ ಮಾಡುತ್ತಾನೆ. ನಂತರ ದೇವಿಯ ಸ್ತುತಿ ಮಾಡುತ್ತಾರೆ. 'ಅಂಬಗಾರುತಿ ರಂಬೆರು ಬೆಳಗಿರೆ ಶುಂಭ ನಿಶುಂಭನ ಸಂಹಾರಿಗೆ"[೩] ಎಂದು ಹಾಡುತ್ತಾರೆ. ದೇವಿ ಪ್ರತಿಷ್ಠಾಪನೆ ಬಲಗಡೆ ವರನ ಸೋದರಮಾವ ಉರಿಯುವ ಕಕ್ಕಡವನ್ನು ಹಿಡಿದುಕೊಂಡು ಅದಕ್ಕೆ ಎಣ್ಣೆ ಹಾಕುತ್ತಾ ಕುಳಿತಿರುತ್ತಾನೆ. ಇದು ಗೊಂದಲ ಕಾರ್ಯ ಮುಗಿಯುವರೆಗೂ ಮುಂದುವರೆಯುವುದು ಇವನಿಗೆ 'ಪೈಂತ್ ಮಾಮಾ' ಅಥವಾ 'ದೀವಟಿಗೆ ಮಾಮಾ' ಎಂದು ಕರೆಯುತ್ತಾರೆ. ಈತನು ಸಂದರ್ಭಕ್ಕೆ ತಕ್ಕಂತೆ ಕುಣಿತ ಮಾಡುವುದರ ಜೊತೆಗೆ ಅಲ್ಲಿ ಭಕ್ತಿ, ಭಾವವೇಶ ತುಂಬಲು ಕಾರಣನಾಗುತ್ತಾನೆ. ಗೊದಲಿಗರು ತಮ್ಮ ಕತೆಗಳಲ್ಲಿ ದೀವಟಗಿ ಮಾಮಾನ ಹೆಸರನ್ನು ಹಾಸ್ಯಕ್ಕಾಗಿ ಬಳಸಿಕೊಳ್ಳುತ್ತಾರೆ. ಗೊಂದಲದಲ್ಲಿ ಪೂರ್ವರಂಗ ಹಾಗೂ ಉತ್ತರರಂಗ ಎಂದು ಭಾಗ ಮಾಡಿರುತ್ತಾರೆ. ಪೂರ್ವರಂಗದಲ್ಲಿ ಕಳಶ ಪ್ರತಿಷ್ಠಾಪಿಸಿ ದೇವಿಯನ್ನು ಆಹ್ವಾನಿಸಿ ಸ್ತುತಿಪದ್ಯಗಳನ್ನು ದೇವಿ ಮಹಿಮೆ ಪವಾಡಗಳನ್ನು ಸ್ತುತಿಸುತ್ತಾರೆ. ಸಂಬಾಳ, ಶೃತಿ, ತಾಳದ ಜೊತೆಗೆ ಹಿಮ್ಮೇಳ ಮತ್ತು ಮುಮ್ಮೇಳದವರು ಹಾಡುತ್ತಾರೆ.

'ಶಾಂಭವಿ ದಯಾ ಮಾಡ್ಯೆ
ಬಾ ದೇವಿ ಮನೆಗೆ
ಶಾಂಭವಿ ದಯಾ ಮಾಡ್ಯೆ
ಜಗದಂಬಾ ದೇವಿ ಶಾಂಭವಿ ದಯಾ ಮಾಡ್ಯೆ"[೪]

'ಉದೋ ಎನ್ನಿ ಉದೋ ಎನ್ನಿ
ಭವಾನಿಗೆ ಉದೋ ಎನ್ನಿರಿ
ನಾನೆಂಬುದನ್ನು ನಿಗೀ
ಅಹಂಕಾರ ಸಕಲವು ಹೋಗಿ

ವಿನಯದಿ ಸದಾ ಭಜಿಸು

ರಾಮವಂದಾ ಭವಾನಿ'[೫]

ಈ ಸ್ತುತಿ ಪದ್ಯಗಳಲ್ಲಿ ಪ್ರಾದೇಶಿಕವಾಗಿ ಭಿನ್ನತೆ ಇರುವುದು ಕಂಡು ಬರುತ್ತದೆ. ಮಹಾರಾಷ್ಟ್ರದ ತುಳಜಾಪೂರದ ಗೊಂದಲಿಗರು ದೇವಿಯ ಸ್ತುತಿ ಪದ್ಯವನ್ನು ಈ ಕೆಳಗಿನಂತೆ ಹಾಡುತ್ತಾರೆ.

"ತಾಯಿ ಅಂಬಾಬಾಯಿ ಉದೋss ಉದೋss

ಅಂಬಾ ಜಗದಂಬಾ ತಾಯಿ ಉದೋss ಉದೋss

ಗಜನನ ಗಣಪತಿ ಗೊಂದಲಿಕ ಬಾ ದೇವ್ರೆ ಗೊಂದಲಿಕ ಬಾ ।

ತುಳಜಾಪೂರ ಭವಾನಿ ಗೊಂದಲಿಕ ಬಾ ಗೊಂದಲಕ ಬಾ ।

ಸವದತ್ತಿ ಎಲ್ಲಮ್ಮ ಗೊದಲಿಕ ಬಾ ತಾಯಿ ಗೊಂದಲಿಕ ಬಾ ।

ಕೊಲ್ಲಾಪೂರ ಲಕ್ಷ್ಮಿ ಗೊಂದಲಕ ಬಾ ।

ಗುಡ್ಡಾಪೂರ ದಾನಮ್ಮ ಗೊಂದಲಕ ಬಾ ।

ದತ್ತರಬಾಗಮ್ಮ ಗೊಂದಲಕ ಬಾ ।

ಮಾವುರ ತಾಯಮ್ಮ ಗೊಂದಲಕ ಬಾ ।

ಗಜಾನನ ಗಣಪತಿ ದೇವ್ರೇ ಗೊಂದಲಕ ಬಾ ।

ದೇವ್ರೇ ಗೊಂದಲಕ ಬಾ " ।

ತುಳಾಜಾಪುರದ ಗೊಂದಲಿಗರು ದೇವಿಯ ವಿವಿಧ ಅವತಾರಗಳನ್ನು ಸ್ಮರಿಸುತ್ತಾ ಗೊಂದಲಕ್ಕೆ ಆಹ್ವಾನಿಸುವುದು ಕಂಡು ಬರುತ್ತದೆ. ನಂತರ ಉತ್ತರರಂಗ ರಾತ್ರಿ ೧೨–೩೦ ಘಂಟೆಗೆ ಆರಂಭವಾಗುತ್ತದೆ. ಇಲ್ಲಿ ಗೊಂದಲಿಗರು ನೈತಿಕ ಮೌಲ್ಯಗಳನ್ನು ಬಿಂಬಿಸುವ ಕಥೆಗಳನ್ನು ಹೇಳುತ್ತಾರೆ. ಅಲ್ಲಿ ಕುಳಿತ ಜನ ಸೂಚಿಸಿದ ಕಥೆಯನ್ನು ಹೇಳಲು ಪ್ರಾರಂಭಿಸುತ್ತಾರೆ. ರಾಜರ ಕಥೆಗಳು, ಸತಿಸುಲೊಚನಾ, ಪತಿವ್ರತಾ ಪದ್ಮಾವತಿ, ಎಲ್ಲಮ್ಮ, ಹೆಮರಡ್ಡಿ ಮಲ್ಲಮ್ಮ, ನೀಲಮ್ಮ, ಶಂಖಿನಿಕುಮಾರ, ಪದ್ಮಾವತಿ ಕಥೆ, ನಳನಿಳ, ಮುಂತಾದ ಕಥೆಗಳನ್ನು ಹೇಳುತ್ತಾರೆ. ಸುದೀರ್ಘವಾದ ಒಂದೇ ಕಥೆಯನ್ನು ಬೆಳತನಕ ಯಾರಿಗೂ ಬೇಸರವಾಗದಂತೆ ಹೇಳುತ್ತಾರೆ. ಕಥೆಯ ನಡುವೆ ನೀತಿಯನ್ನು ಹೇಳುವ ಅಡ್ಡ ಹಾಗೂ ಹಾಸ್ಯ ಕಥೆಗಳನ್ನು ಹೇಳುತ್ತಾರೆ. ಈ ಕಥೆಗಳು ಜನರನ್ನು ಭಾವನಾತ್ಮಕ ಹಾಗೂ ಮಾನಸಿಕವಾಗಿ ಎಚ್ಚರಗೊಳ್ಳುವಂತೆ ಮಾಡುತ್ತವೆ. ಕಥೆಯಲ್ಲಿ ಪೈಂತ ಮಾಮಾನ ಹೆಸರನ್ನು ಸಂದರ್ಭಕ್ಕನುಗುಣವಾಗಿ ತೆಗೆದುಕೊಂಡು ನವಿರಾದ ಹಾಸ್ಯ ವ್ಯಕ್ತಪಡಿಸುತ್ತಾರೆ. ಇವರು ಹಾಸ್ಯ ಕವಿಗಳೂ ಹೌದು ಗೊಂದಲದ ವಾದ್ಯಗಳು, ಉದ್ಘೋಷಗಳ ಅಲ್ಲಿ ನೆರೆದ ಜನರೆಲ್ಲರ ಮೈಯಲ್ಲಿ ಭಾವುಕತೆ ತುಂಬುವಂತೆ ಮಾಡುತ್ತವೆ. ಭಕ್ತಿಯ

ಭಾವಾವೇಶ ತುಟ್ಟ ತುದಿಗೆ ಮುಟ್ಟಿ ಹಾಗೆ ಎಲ್ಲರು ಕುಣಿಯುತ್ತಾರೆ. ಮಾಹಾರಾಷ್ಟ್ರ ಕೆಲವು ಭಾಗದಲ್ಲಿ ಉರಿಯುವ ಪತ್ತಾ ಹಿಡಿದು ಮೈಗೆ ಹಚ್ಚಿಕೊಳ್ಳುವ ಕ್ರಿಯೆ ಜರುಗುತ್ತದೆ. ಕುಣಿದು ಕುಪ್ಪಳಿಸಿ ಮೂರ್ಚೆ ಬಂದು ಬೀಳುವವರಿಗೆ ಭಂಡಾರ ಹಚ್ಚಿ ಎಬ್ಬಿಸುತ್ತಾರೆ. "ಮುಂಜಾನೆಯ ವೇಳಗೆ ಮಂಗಲದ ಸಮಯದಿ ಹೆಣ್ಣು ಗಂಡು ಎಂಬ ಭೇದ ಭಾವವಿರದೆ ಕುಣಿಕುಣಿದು ರಾತ್ರಿಯೆಲ್ಲ ಧ್ಯಾನಿಸಿದ ಭಕ್ತನಿಗೆ ಜಗದಂಬೆ ಪ್ರತ್ಯಕ್ಷಳಾದಳು ಎಂಬ ಮಾನಸಿಕ ಸ್ಥಿತಿಗೆ ಅವರು ಮುಟ್ಟಿರುತ್ತಾರೆ. ಈ ತಾಳ, ಸಂಬಾಳ, ಶೃತಿಗಳ ಜೋರಾದ ಬಡಿತ, ಹಾಡಿನ ಏರಿಳಿತವು ಇದಕ್ಕೆಲ್ಲ ಸಾಥ್ ಕೊಡುವುದು. ಇಂಥ 'ವಾತಾವರಣದಲ್ಲಿ ಒಂದಾಗುವುದರೊಂದಿಗೆ ಭಕ್ತರು ಮೊದಲಿನ ಸ್ಥಿತಿಯನ್ನು ಮರೆತು ತಾತ್ಕಾಲಿಕವಾಗಿ ದೇವರ ಮಟ್ಟಕ್ಕೇರುವುದು ಹೀಗೆ (ಅಮಲೇರಿದಾಗ) ಸುಡುವ ಕ್ರಿಯೆಯಾಗಲಿ ಕುಣಿಯುವ ಕ್ರಿಯೆಯಾಗಲಿ, ಅಸಹಜವೆನಿಸದು, ಇದು ತೀರ ಸಹಜವಾಗಿ ಬಿಡುತ್ತದೆ. ಎಲ್ಲಿಯವರೆಗೆ ಅಂದರೆ ಇನ್ನೊಬ್ಬರ ಸ್ಪರ್ಶ ಆಗುವವರೆಗೆ ಭಂಡಾರ ಇಲ್ಲಿ ಆ ಕೆಲಸ ಮಾಡುತ್ತದೆ."[೬] ಆ ಸಂದರ್ಭದಲ್ಲಿ ಭಕ್ತರು ಕುಣಿದು ತಮ್ಮ ಭಕ್ತಿ, ಭಾವ, ನೋವು ಸಂಕಟಗಳನ್ನು ಆ ಮೂಲಕ ಹೊರ ಹಾಕಿ, ದೇವಿಗೆ ಸಮರ್ಪಿಸುವುದು ಕಂಡುಬರುತ್ತದೆ.

ಮಹಾರಾಷ್ಟ್ರದಲ್ಲಿ ಮೂರು ಜನ ಗೊಂದಲಿಗರು ಗೊಂದಳ ಪೂಜೆಯಲ್ಲಿ ಭಾಗವಹಿಸಿರುತ್ತಾರೆ. ಅವರು ಬಳಸುವ ವಾದ್ಯಗಳು ಚೌಡಿಕಿ, ತಾಳಗಳು ದೇವಿಯ ಸ್ತುತಿಯೊಂದಿಗೆ ಗೊಂದಳದ ಪೂಜೆ, ಹಾಡು ಕಥೆ ಮುಗಿದ ನಂತರ ಮನೆಯ ಅಂಗಳದಲ್ಲಿ ಎಲ್ಲ ಗಂಡು ಮಕ್ಕಳು ಪತ್ತಾ ಆಡುತ್ತಾರೆ. ಕೈಯಲ್ಲಿ ದೀವಟಿಗೆ ಹಿಡಿದು ಏಳೆಂಟು ಜನರು ಗುಂಪಾಗಿ ಕುಣಿಯುತ್ತಾರೆ. ವಿವಿಧ ತೆರನಾದ ಕುಣಿತಗಳು ಅಲ್ಲಿ ಮೂಡಿಬರುವುದನ್ನು ಗಮನಿಸಬಹುದು. ಅತೀ ಜೋರಾದ ತಾಳಮೇಳಗಳೊಂದಿಗೆ ಕುಣಿಯುವ ಆವೇಶ ಭರಿತ ಕುಣಿತವು ನೋಡುಗಳನ್ನು ಮಂತ್ರಮುಗ್ಧರನ್ನಾಗಿಸಿರುತ್ತದೆ. ಇಲ್ಲಿ ಪ್ರತಿಯೊಬ್ಬ ಭಕ್ತರು ತಲೆ ಮೇಲೆ ಬಿಳಿ ಟೋಪಿ ಹಾಕಿಕೊಂಡು, ಕೈಯಲ್ಲಿ ಪತ್ತಾ (ಉರಿಯುವ ದೀವಟಗಿ) ಹಿಡಿದು ವೃತ್ತಾಕಾರದಲ್ಲಿ ಕುಣಿಯುತ್ತಾರೆ. ಇಲ್ಲಿಯ ಕುಣಿತ ಸ್ಪರ್ಧೆ ಏರ್ಪಡಿಸಿದಂತಿರುತ್ತದೆ.

**ಗೊಂದಲ ಮತ್ತು ಗುಗ್ಗಳ:**

ಈ ಗೊಂದಲದಂತೆ ವೀರಶೈವರಲ್ಲಿ ಗುಗ್ಗಳವೂ ಒಂದು ವಿಶಿಷ್ಟವಾದ ಆಚರಣೆ-ಯಾಗಿದೆ. ಸಾಮಾನ್ಯವಾಗಿ ವೀರಭದ್ರ ಯಾರ ಮನೆಯಲ್ಲಿ ಪೂಜೆಗೊಳ್ಳುತ್ತಿರುತ್ತಾನೋ ಅವರ ಮನೆಗಳಲ್ಲಿ ಗುಗ್ಗಳದ ಆರಾಧನೆ ಇರುವುದು ಕಂಡು ಬರುತ್ತದೆ. ಮಕ್ಕಳ ಮದುವೆ ಅಥವಾ ಸೀಮಂತ ಕಾರ್ಯದಲ್ಲಿ ಈ ಗುಗ್ಗಳ ಹಾಕುವ ಸಂಪ್ರದಾಯವಿದೆ. ಗೊಂದಲ ಹಾಗು ಗುಗ್ಗಳ ಒಂದೇ ಉದ್ದೇಶ ಹೊಂದಿವೆ ಎನ್ನಬಹುದು. ಆದರೆ ಇವುಗಳ ಆಚರಣೆಯ ಕ್ರಮಗಳು

ಭಿನ್ನವಾಗಿದೆ. ಇಲ್ಲಿ ಗೊಂದಲಿಗರು ಅಂಭಾಭವಾನಿಯ ಪೂಜೆಯನ್ನು ಮಾಡುವುದರ ಜೊತೆಗೆ, ಕಥೆಗಳ ಹಾಗೂ ವಾದ್ಯಗಳ ಮೂಲಕ ಭಕ್ತಿ ಭಾವಾವೇಶಕ್ಕೆ ಜನರನ್ನು ಕರೆದೊಯ್ದರೆ, ಗುಗ್ಗಳದಲ್ಲಿ ಪುರವಂತರು ರುದ್ರನ ಒಡಪುಗಳನ್ನು ಹೇಳುವುದರ ಮೂಲಕ ಭಕ್ತಿಯ ಪರಾಕಾಷ್ಠೆಯನ್ನು ಮುಟ್ಟುತ್ತಾರೆ. ಈ ಎರಡೂ ಧಾರ್ಮಿಕ ಕಾರ್ಯದಲ್ಲಿ ಮಡಿವಂತಿಕೆ ಪ್ರಮುಖವಾಗಿದೆ. ಗೊಂದಳದಲ್ಲಿ ಉರಿಯುವ ದೀವಟಿಗೆಯನ್ನು ಮೈಮೇಲೆ ಎಳೆದುಕೊಂಡು ಭಕ್ತಿಯನ್ನು ಪ್ರದರ್ಶಿಸಿದರೆ, ಗುಗ್ಗಳದಲ್ಲಿ ಪುರವಂತರು ಶಸ್ತ್ರಗಳನ್ನು ತಮ್ಮ ಶರೀರಕ್ಕೆ ಚುಚ್ಚಿಕೊಳ್ಳುವುದರ ಮೂಲಕ ರೌದ್ರಶಕ್ತಿಯನ್ನು ತಣಿಸುತ್ತಾನೆ. ಇಲ್ಲಿ ವಿಭೂತಿಯನ್ನು ಲೇಪಿಸಲಾ ಗುವುದು. ಗೊಂದಲದಲ್ಲಿ ಭಂಡಾರ ಉಪಯೋಗಿಸುತ್ತಾರೆ. ವಿಭೂತಿ ಮತ್ತು ಭಂಡಾರವು ಇವು ನೋವು ಶಮನಕಾರಕಗಳಾಗಿವೆ. ಗೊಂದಲದಲ್ಲಿ ದೀವಟಗಿ ಮತ್ತು ಪತ್ತಾ ಎರಡನ್ನು ದಿವ್ಯ ಜ್ಯೋತಿಯಾಗಿ ಉಪಯೋಗಿಸುತ್ತಾರೆ. ಗುಗ್ಗಳದಲ್ಲಿ ಗುಗ್ಗಳ ಕೊಡಪಾನದಲ್ಲಿ ಎಣ್ಣೆ ಹಾಕುತ್ತಾ ಜ್ಯೋತಿ ಬೆಳಗುತ್ತಾರೆ. ಎರಡು ಕಾರ್ಯಗಳಲ್ಲಿ ಭಕ್ತರು ದೈವಿಶಕ್ತಿಯ ಬಗ್ಗೆ ತುಂಬಾ ಭಯ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಕೆಲ ಪುರವಂತರು ವೀರಭದ್ರನ ಆಹ್ವಾನವಾದಂತೆ ಅಲ್ಲಿ ನುಡಿ ಹೇಳುತ್ತಾರೆ. ಗೊಂದಲದಲ್ಲಿಯೂ ದೇವಿ ಮೈದುಂಬಿದಂತೆ ಭಾವಾವೇಶಕ್ಕೆ ಒಳಗಾಗುತ್ತಾರೆ. ಇಂಥ ಧಾರ್ಮಿಕ ಸಂಪ್ರದಾಯದ ಆಚರಣೆಗಳು ಇಂದು ಕಲೆಯನ್ನು ಮೈಗೂಡಿಸಿಕೊಂಡು ಜನಪದ ಕಲಾಪ್ರದರ್ಶನಗಳಲ್ಲಿ ಒಂದಾಗಿವೆ. ಒಟ್ಟಿನಲ್ಲಿ ಎರಡೂ ಧಾರ್ಮಿಕ ಕಾರ್ಯಗಳಲ್ಲಿ ಮಡಿವಂತಿಕೆ, ಭಯ ಭಕ್ತಿ, ಭಾವಾವೇಶಗಳು, ಸಂಪ್ರದಾಯ ಆಚರಣೆಗಳು ಪ್ರಮುಖ ಪಾತ್ರವಹಿಸುತ್ತವೆ.

ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕದ ಗಡಿ ಭಾಗಗಳಲ್ಲಿ ಆಚರಿಸುವ ಮದುವೆ ಗೊಂದಲ ಕಾರ್ಯಕ್ರಮದಲ್ಲಿ ಮದುಮಕ್ಕಳಿಗೆ ತೊಟ್ಟಿಲು ತೂಗುವ ಜೋಗಳ ಹಾಡುವ ಕಾರ್ಯಕ್ರಮ ಮಾಡುತ್ತಾರೆ. ಅವರಿಗೆ ಬೇಗ ಸಂತಾನ ಭಾಗ್ಯ ದೊರೆಯಲಿ ಎಂಬ ಮನೋಭಾವವನ್ನು ಇಲ್ಲಿ ಕಾಣುತ್ತೇವೆ. 'ತೂಗಿರಿ ರಂಗನ, ತೂಗಿರಿಕೃಷ್ಣನ, ತೂಗಿರಿ ಮಧುರಾ ಕಂದನ, ತೂಗಿರಿ ಬಾಲಲೋಲನದೇವಕಿ ಕಂದನ', 'ಜೋ ಜೋ ಎನ್ನ ಜ್ಯೋತಿಯ ಕಂದಾ ಜೋ ಜೋ. ಸುಮ್ಮನೆ ಮಲಗೊ ದೇವಕಿಯ ಮಡಿಲ ಕಂದಾ'[2] ಎಂಬ ಜೋಗುಳದ ಹಾಡನ್ನು ಗೊಂದಲಿಗರು ಹೇಳುತ್ತಾರೆ. ಗೊಂದಳದ ಕಾರ್ಯಕ್ರಮದಲ್ಲಿ ಕೆಲವು ಗೊಂದಲಿಗರು ನಡುನಡುವೆ ವಿಶ್ರಾಂತಿ ತೆಗೆದುಕೊಂಡ ನಂತರ ಅಂಬಾಭವಾನಿಯನ್ನು ಪೂಜಿಸಿ, ಮಂಗಳಾರುತಿ ಮಾಡಿ ಗೊಂದಳವನ್ನು ಮುಂದುವರೆಸುತ್ತಾರೆ. ವಿಠ್ಠಲ ಗೊಂದಳಿ ಅವರ ಮಾಹಿತಿಯ ಪ್ರಕಾರ ಗೊಂದಲದ ಕಾರ್ಯವನ್ನು ಒಟ್ಟು ಐದು ಸಂಧಿಗಳಲ್ಲಿ ನಿರ್ವಹಿಸಲಾಗುತ್ತದೆ. ಪ್ರತಿ ಸಂಧಿಯ ಮುಕ್ತಾಯದ ನಂತರ ಗೊಂದಲ ಹಾಕಿಸುವ ಮನೆಯ ಹೆಣ್ಣುಮಗಳು ಭಕ್ತರ ಹಣೆಗೆ ಭಂಡಾರ ಹಚ್ಚುತ್ತಾಳೆ. ಕೆಲವು ಕಡೆ ನೆನಗಡಲೆಯಿಂದ ದೇವಿಗೆ ಪ್ರತಿಯೊಬ್ಬರು ಉಡಿತುಂಬುತ್ತಾರೆ. ಗೊಂದಳದ ಉತ್ತರರಂಗದ ಕೊನೆಗೆ ಸೂರ್ಯೋದಯಕ್ಕೆ ಮಂಗಳಾರುತಿ ಮಾಡಿದ ನಂತರ

ದೀವಟಿಗೆಯನ್ನು ಮನೆಯ ಅಂಗಳದಲ್ಲಿ ಹಾಕಿದ ರಂಗವಲ್ಲಿ ಸುತ್ತಲೂ ಎಲ್ಲರೂ ಐದು ಸುತ್ತುಗಳನ್ನು ಹಾಕಿ ಹಾಲು ತುಪ್ಪದಲ್ಲಿ ದೀವಟಿಗೆಯನ್ನು ಶಾಂತ ಮಾಡುತ್ತಾರೆ. ಇದಕ್ಕೆ 'ಗೊಂದಳ ಘಾಳಣಿ' ಎಂದು ಕರೆಯುತ್ತಾರೆ. ಕೊನೆಗೆ ಎಲ್ಲರೂ ಗೊಂದಲಿಗರಿಗೆ ಹಣ ವಸ್ತ್ರಗಳನ್ನು ನೀಡುವುದರ ಮೂಲಕ ಕಾಣಿಕೆಯನ್ನು ಸಲ್ಲಿಸುತ್ತಾರೆ.

**೬.೨.೨ ಜಾತ್ರೆಯ ಗೊಂದಲ.**

ಗೊಂದಲಿಗರು ಜಾತ್ರೆಯ ಸಂದರ್ಭದಲ್ಲಿ ಗೊಂದಲ ಹಾಕುತ್ತಾರೆ. ಊರ ಜನರ ಆಹ್ವಾನದಂತೆ ದೇವಸ್ಥಾನದ ಪ್ರಾಂಗಣದಲ್ಲಿ ಗೊಂದಲ ಏರ್ಪಡಿಸುತ್ತಾರೆ. ಹಬ್ಬ ಹರಿದಿನ ಅದರಲ್ಲೂ ವಿಶೇಷವಾಗಿ ದೀಪಾವಳಿ, ನವರಾತ್ರಿ, ದುರ್ಗಾಷ್ಟಮಿ, ಗಣೇಶ ಚತುರ್ಥಿ, ಆಷಾಡ ಮಾಸ, ದೇವಿಯ ಜಾತ್ರಾ ಮಹೋತ್ಸವಗಳಲ್ಲಿ ಗೊಂದಲಗಳನ್ನು ನಡೆಸುತ್ತಾರೆ. ಇದಕ್ಕೆ ಅವರು "ಜಾತ್ರೆಯ ಗೊಂದಲ" ಎನ್ನುವರು. ಇದನ್ನು ದೇವಿಯ ಆರಾಧನೆ ಹಾಗೂ ಜಾಗರಣೆಗಾಗಿ ಮಾಡುವ ಗೊಂದಲವೆಂದು ಸದಾಶಿವ ಗೊಂದಳಿ ಯಲ್ಲಾರಟ್ಟಿ ಇವರು ಹೇಳುತ್ತಾರೆ. ಇದನ್ನೇ ಡಾ.ವ್ಹಿ.ಎಸ್.ಬಡಿಗೇರ ಅವರು 'ಗುಡಿ ಗೊಂದಲ' ಎಂದು ಕರೆದಿದ್ದಾರೆ.

ಒಂದು ವಾರ ಅಥವಾ ನಾಲ್ಕು ದಿನದ ಮುಂಚೆಯೇ ಯಾವ ಊರಿನಲ್ಲಿ ಜಾತ್ರೆ, ದೇವತಾ ಮಹೋತ್ಸವ ಇರುವುದೋ ಆ ಊರಿನ ಮುಖ್ಯಸ್ಥರ ಒಪ್ಪಿಗೆಯೊಂದಿಗೆ ಗೊಂದಲಿಗರ ಮನೆಗೆ ಬಂದು ವೀಳ್ಯೆ ಕೊಟ್ಟು ಗೊಂದಲ ಕಾರ್ಯ ನಡೆಸಲು ಆಮಂತ್ರಣ ನೀಡುತ್ತಾರೆ. ಮುಖ್ಯ ಗೊಂದಲಿಗ ಆ ದಿನ ತನ್ನ ಹಿಮ್ಮೇಳ ವೇಷಭೂಷಣ ಮತ್ತು ವಾದ್ಯಗಳನ್ನು ತೆಗೆದುಕೊಂಡು ನಿಗದಿಪಡಿಸಿದ ಸ್ಥಳಕ್ಕೆ ಹೋಗುತ್ತಾರೆ. ಅಂಬಾಭವಾನಿಯ ದೇವಸ್ಥಾನದ ಮುಂದೆ ಗೊಂದಲ ಹಾಕಬೇಕಾದಾಗ ಅವರ ಏರ್ಪಾಡುಗಳು ಸರಳವಾಗಿರುತ್ತವೆ. ಗೊಂದಲಿಗರ ಮುಖ್ಯಸ್ಥ ಅಂಬಾಭವಾನಿಯ ಮುಂದೆ ನಿಲ್ಲುತ್ತಾನೆ. ಅವನ ಬಲಕ್ಕೆ ದೀವಟಿಗೆ ಹಿಡಿದ ಒಬ್ಬ ಸಹಾಯಕ ನಿಲ್ಲುತ್ತಾನೆ. ಇತರರು ಆತನ ಹಿಂದೆ ನಿಲ್ಲುತ್ತಾರೆ. ಒಬ್ಬ ಸಂಬಾಳವನ್ನು ನುಡಿಸಿದರೆ ಮತ್ತೊಬ್ಬ ತುಂತುಣಿ ನುಡಿಸುತ್ತಾನೆ.

ಮುಖ್ಯ ಗೊಂದಲಿಗ ದೀವಟಿಗೆಯನ್ನು ಪೂಜಿಸಿ 'ಓ ದೇವಿ ತುಳಜಾಪುರದ ಭವಾನಿ, ಗೊಂದಲ ನೃತ್ಯವನ್ನು ವೀಕ್ಷಿಸಲು ಬಾ' ಎಂದು ಹೇಳುತ್ತಾನೆ. ನಂತರ ಆ ಊರಿನ ದೇವ ದೇವತೆಗಳನ್ನು ದೇವರುಗಳನ್ನು ಸ್ಮರಿಸುತ್ತಾ ತಾವು ಹಾಕುವ ಗೊಂದಲವನ್ನು ವೀಕ್ಷಿಸಲು ಆಗಮಿಸಬೇಕೆಂದು ಸ್ಮರಿಸುತ್ತಾನೆ. ಜಾತ್ರೆಯಲ್ಲಿ ನಡೆಸುವ ಗೊಂದಲಗಳನ್ನು ಕೆಲ ಊರಿನವರು ರಾತ್ರಿ ನಡೆಸಲು ಇಷ್ಟಪಟ್ಟರೆ ಮತ್ತೆ ಕೆಲವರು ಹಗಲಿನಲ್ಲಿ ಏರ್ಪಡಿಸಲು ಬಯಸುತ್ತಾರೆ. ಎಂದು ಶ್ರೀ.ಎಂ.ಎಂ.ಮದರಿಯವರು ತಮ್ಮ ಅಜ್ಜಿ ಹಾಗೂ ಚಿಕ್ಕಪ್ಪನ ಜೊತೆಗೆ ಊರಾಟಕ್ಕೆ, ಜಾತ್ರಾಮಹೋತ್ಸವಕ್ಕೆ ಹೋಗುತ್ತಿದ್ದುದ್ದನ್ನು ತಮ್ಮ 'ಗೊಂದಲಿಗ್ಯಾ' ಆತ್ಮಕಥನದಲ್ಲಿ ತಿಳಿಸುತ್ತಾರೆ. ಇಂದು ಜಾತ್ರೆಗಳಲ್ಲಿ ಆಧುನಿಕ ಮನರಂಜನ ಮಾಧ್ಯಮಗಳಾದ ಸಿನೇಮಾ ನಾಟಕ ಮುಂತಾದವುಗಳ

ಪ್ರಭಾವದಿಂದ ಗೊಂದಲ ಕಾರ್ಯಕ್ರಮಗಳು ಬಹಳಷ್ಟು ಕಡಿಮೆಯಾಗುತ್ತಿವೆ ಎಂದು ಬಹಳ ವಿಷಾದದಿಂದ ರಾಮಪುರದ ಗೊಂದಳ ಕಲಾವಿದ ರಾಮು ಇಂಗಳೆಯವರು ಅಭಿಪ್ರಾಯ ಪಡುತ್ತಾರೆ. ಗೊಂದಲದ ಕಾರ್ಯ ಈ ಹಿಂದೆ ದೇವಿಯ ಆರಾಧನೆಯ ಜೊತೆಗೆ ಮನರಂಜನೆ, ನೀತಿ ಹೇಳುವ ಕಾರ್ಯವನ್ನೂ ಇದು ನಿರ್ವಹಿಸುತ್ತಿತ್ತು. ಆಧುನಿಕತೆಯ ಬಿರುಗಾಳಿಯ ಮುಂದೆ ನಮ್ಮ ಗೊಂದಲದ ಆಚರಣೆ ಕ್ಷೀಣಿಸುತ್ತಾ ಹೋಗುತ್ತಿದೆ ಎಂದು ತಿಳಿಸುತ್ತಾರೆ. ಕಾಲದಿಂದ ಕಾಲಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಗೊಂದಲ ನೃತ್ಯದ ಸ್ವರೂಪ ಬದಲಾಗುತ್ತ ಬಂದಿರುವುದನ್ನು ನೋಡಬಹುದಾಗಿದೆ. ಒಂದೇ ಕಾಲದಲ್ಲಿ ಭಿನ್ನ ಪ್ರದೇಶಗಳಲ್ಲಿ ಭಿನ್ನ ರೂಪಗಳಲ್ಲಿ ಕಂಡು ಬರುತ್ತವೆ. ಪ್ರಾದೇಶಿಕವಾಗಿ ಜಾತ್ರೆಗಳಲ್ಲಿ ನಡೆಯುವ ಗೊಂದಲದ ಆಚರಣೆಯು ಬೇರೆ ಬೇರೆಯಾಗಿ ಕಂಡುಬರುತ್ತದೆ. ಊರಿನ ದೇವರ ಜಾತ್ರೆಯಲ್ಲಿ ಆ ಊರಿನ ಹಿರಿಯರು ಗೊಂದಲಿಗರ ಮನೆಗೆ ಹೋಗಿ ವಿಳ್ಯ ಕೊಟ್ಟು ಆಹ್ವಾನಿಸಿರುತ್ತಾರೆ. ದೇವರ ರಥ ಸಾಗಿದ ಕೂಡಲೆ ರಾತ್ರಿ ಗೊಂದಳ ಕಥೆ ಪ್ರಾರಂಭವಾಗುತ್ತದೆ. ಕಥೆ ಕೇಳಲು ಊರ ಜನರೆಲ್ಲರು ಅಲ್ಲಿ ಕೂಡಿರುತ್ತಾರೆ.

### ೬.೩. ಗೌಣ ಗೊಂದಲಗಳು

ಗೊಂದಲಿಗರು ಪೂರ್ವಯೋಜಿತವಾದ ಯಾವುದೇ ತಯಾರಿಲ್ಲದೆ ಭಿಕ್ಷಾಟನೆಗೆ ಹೋದಾಗ ಏಕಾಏಕಿಯಾಗಿ ಗೊಂದಲಿಗರು ಊರ ಜನರ ಇಚ್ಚೆಯ ಪ್ರಕಾರ ಅಲ್ಲಿ ಗೊಂದಲ ಆಟ ನಡೆಸುವುದನ್ನೇ 'ಗೌಣ ಗೊಂದಲ' ಎಂದು ಕರೆಯುವರು. ಇದರಲ್ಲಿ ಎರಡು ಪ್ರಕಾರದ ಗೊಂದಲಗಳನ್ನು ಕಾಣುತ್ತೇವೆ.

### ೬.೩.೧ ಬಯಲು ಗೊಂದಲ

ಬಯಲು ಗೊಂದಲವೆಂದರೆ ಅದು ದೇವಸ್ಥಾನದ ಬಯಲು, ಚಾವಡಿ ಕಟ್ಟಿ, ಶಾಲಾ ಆವರಣ ಮುಂತಾದ ಸೂಕ್ತ ಸ್ಥಳಗಳಲ್ಲಿ ಗೊಂದಲ ಕಾರ್ಯ ನಡೆಸಲು ರಂಗವನ್ನು ನಿರ್ಮಿಸಿಕೊಂಡು ಸರಳವಾಗಿ ತಕ್ಷಣ ನಡೆಸುವಂತಹದ್ದು. ಇಲ್ಲಿ ಬೆಳಕಿನ ವ್ಯವಸ್ಥೆಯೊಂದನ್ನು ಬಿಟ್ಟು ಬೇರಾವ ಉಪಕರಣಗಳು ಇರುವುದಿಲ್ಲ. ಇಲ್ಲಿ ದೇವಿ ಆರಾಧನೆ ಪ್ರಮುಖವಾಗಿ ಕಂಡು ಬಂದರೂ ಅದು ಕಾಲಾನುಕ್ರಮೇಣ ಮನರಂಜನಾ ಕಲೆಯಾಗಿ ಬೆಳೆಯುತ್ತ ಬಂದಿರುವುದನ್ನು ಗಮನಿಸಬಹುದಾಗಿದೆ. ಗೊಂದಲಿಗರ ಆಟದಲ್ಲಿ ಹಾಸ್ಯ, ಅಭಿನಯ, ನಾಟಕೀಯತೆ, ಸಂಗೀತ ಅಣಕು ಎಲ್ಲವೂ ಇಲ್ಲಿ ಕಂಡು ಬರುತ್ತದೆ. ಇದೊಂದು ಸಮಾಜದ ನಡುವೆ ನಡೆಯುವ ಗೊಂದಲವಾಗಿದೆ. ವ್ಹಿ.ಎಸ್.ಬಡಿಗೇರ ಅವರು ಗೊಂದಲದ ಬಗ್ಗೆ ಹೀಗೆ ಹೇಳಿದ್ದಾರೆ. "ಗೊಂದಲವು ಸಾಂಪ್ರದಾಯಿಕ ಆರಾಧನಾ ರೂಪವಾದರೂ ಆಟ, ಭಕ್ತಿ ಆರಾಧನೆಯನ್ನು ಒಳಗೊಂಡಿದೆ. ಆದರೂ ಅದು ಒಂದು ರಂಗ ಕಲೆಯಾಗಿ ಮನರಂಜನಾ ಮಾಧ್ಯಮವಾಗಿ ಉಳಿದಿರುವುದನ್ನು

ಗಮನಿಸಬಹುದು. ಅಂದರೆ ಗೊಂದಲಿಗರ ಆಟದಲ್ಲಿ ಭಕ್ತಿಯ ಜೊತೆ, ಮನರಂಜನೆಯು ಸೇರಿದೆ. ಗೊಂದಲಿಗರ ಆಟದಲ್ಲಿ, ಕಥೆ ಹಾಡುಗಳೊಂದಿಗೆ ಇಡೀ ಮೇಳವೇ ಅರ್ಥಗಾರಿಕೆಯ ಕ್ರಿಯೆಯನ್ನು ನಿರ್ವಹಿಸುತ್ತದೆ. ಈ ಕ್ರಿಯೆಯಲ್ಲಿ ಮನುಷ್ಯರು, ಮನುಷ್ಯರಲ್ಲದ ರಂಗ ಪರಿಕರಗಳು ಸಹ ಮನುಷ್ಯನಷ್ಟೇ ಸಮರ್ಥವಾದ ಸಂವಹನ ಮಾಧ್ಯಮಗಳಾಗಿ ಬಳಕೆಯಾಗುತ್ತವೆ."

"ಕೇವಲ ಇಬ್ಬರು ಕಲಾವಿದರು ಮಾತ್ರ ಇರುತ್ತಾರೆ. ಈ ಪ್ರದರ್ಶನ ನಡೆಯುವುದು ತುಂಬ ಅನಿರೀಕ್ಷಿತ. ಭಿಕ್ಷೆಗಾಗಿ ಬಂದ ಗೊಂದಲಿಗರು ವಸತಿ ಮಾಡಿದ ಊರಿನಲ್ಲಿ ಆ ಊರಿನ ಹಿರಿಯರ ಅಪ್ಪಣೆಯ ಮೇರೆಗೆ ಅಂದು ರಾತ್ರಿ ತಮ್ಮ ಆಟವನ್ನು ಆಡಿ ತೋರಿಸುತ್ತಾರೆ. ಖಚಿತ ಸಂಭಾವನೆ ಇರುವುದಿಲ್ಲ. ಗೊಂದಲಿಗರು ಕೂಡ ಅದಕ್ಕೆ ಕಟ್ಟು ಬೀಳುವುದಿಲ್ಲ. ರಾತ್ರಿ ಇಡೀ ಆಟ ನೋಡಿ ಮರುದಿನ ಗೊಂದಲಿಗರು ಮನೆಮನೆಗೆ ಭಿಕ್ಷೆಗೆ ಬಂದಾಗ ಇವರಿಗೆ ತಮಗೆ ನೀಗಿದಷ್ಟು ಸಹಾಯ ಮಾಡುತ್ತಾರೆ. ಅದು ಕಾಳು, ಹಣ, ಅರಿವೆ, ದನಕರುಗಳ ರೂಪದಲ್ಲಿ ಸಹ ತಮಗೆ ತೀರ ಬೇಕಾದ ಭಕ್ತರಲ್ಲಿ ಕಾಡಿಬೇಡಿ ಮಕ್ಕಳಂತೆ ಹಠಮಾಡಿ ಹಣ, ಅರಿವೆ, ಅಥವಾ ದನಕರುಗಳಿಗೆ ಹೊಟ್ಟು ಕಣಕಿಯನ್ನು ಪಡೆದುಕೊಂಡು ಹೋಗುತ್ತಾರೆ. ಯಾರು ಇವರನ್ನು ತಿರಸ್ಕರಿಸುವುದಿಲ್ಲ. ರಾತ್ರಿ ನಡೆದ ಕಥೆ ತಮಗೆ ಹಿಡಿಸಿದ್ದರೆ ಗೊಂದಲಿಗರನ್ನು ಹೊಗಳಿ ಚೆನ್ನಾಗಿತ್ತು ಎಂದು ಬೇಷ್ ಹೇಳುವರು."[೮]

ಗೊಂದಲದ ಪ್ರಾರಂಭದಲ್ಲಿ ದೇವಿಯ ಪ್ರಾರ್ಥನೆ, ಸ್ತುತಿ, ತಮ್ಮ ಮನೆಯ ದೇವರ ಸ್ತುತಿ ಮಾಡುತ್ತಾರೆ. ಹಾಗೆಯೇ ಆ ಊರಿನ ದೇವರನ್ನು ಸ್ಮರಿಸುತ್ತಾರೆ. ಗಣಪತಿಯನ್ನೂ ಸ್ತುತಿಸುತ್ತಾರೆ. ನಂತರ ಅಂದು ಹೇಳುವ ಹಾಡು, ಕಥೆಗಳ, ಬಗೆಗೆ ಪ್ರೇಕ್ಷಕರ ಮುಂದೆ ಹೇಳುತ್ತಾರೆ. ಪ್ರೇಕ್ಷಕರು ಹೇಳಿದ ಕಥೆಯನ್ನು ಎತ್ತಿಕೊಂಡು ಅಭಿನಯಿಸುತ್ತಾ ಹಾಡುತ್ತಾರೆ. ಗೊಂದಲಿಗರ ಹಾಡು, ಕುಣಿತ ಅಭಿನಯ ಮಾತುಗಾರಿಗೆ ಇವೆಲ್ಲವೂ ಇದರಲ್ಲಿ ನಾಟಕೀಯತೆಯ ರೂಪ ಪಡೆದಿರುತ್ತವೆ. ಗೊಂದಲದ ಆಟದಲ್ಲಿ ಕೇವಲ ಎರಡರಿಂದ ಮೂರು ಜನ ಕಲಾವಿದರಿದ್ದರೂ ಅವರು ಅಭಿನಯಿಸುವ ರೀತಿ ಅದೊಂದು ಸಂಪೂರ್ಣ ನಾಟಕದ ರೂಪದಂತೆ ಪ್ರದರ್ಶಿಸಲ್ಪಡುತ್ತಿದೆ.

ಕಥೆಯಲ್ಲಿನ ಪ್ರತಿ ಪಾತ್ರವನ್ನು ಗೊಂದಲಿಗರ ಕಲಾವಿದರು ಅಚ್ಚುಕಟ್ಟಾಗಿ ನಿರ್ವಹಿಸುತ್ತ ನಟನೆ ಮಾಡುತ್ತಾರೆ. ಕಥೆಯಲ್ಲಿ ಬರುವ ಪ್ರಾಣಿ ಪಕ್ಷಿ, ಕುದುರೆ, ರಥ ಎಲ್ಲವೂ ಅವರು ಬಾರಿಸುವ ಸಾಂಬಳ, ತಾಳಗಳಲ್ಲಿ ಮೂಡಿ ಬರುತ್ತವೆ. ಈ ಬಯಲು ಗೊಂದಲದಲ್ಲಿ ಭಕ್ತಿ ರಸವಿದ್ದರೂ ಅಲ್ಲಿ ಹೆಚ್ಚಾಗಿ ಹಾಸ್ಯ, ಶೃಂಗಾರ, ವೀರ, ರೌದ್ರ ವಿಷಯಗಳು ಒಳಗೊಂಡಿರುತ್ತವೆ. ಸಾಮಾನ್ಯವಾಗಿ ಇಲ್ಲಿ ಹೇಳುವ ಕಥೆಗಳು ವಾಸ್ತವವನ್ನು ತಿಳಿಸುವ ವಸ್ತುಗಳೇ ಆಗಿರುತ್ತವೆ. ಇಂದಿನ ಆಧುನಿಕತೆ ವಿಜ್ಞಾನ, ರಾಜಕೀಯದ ಢಂಬಾಚಾರಗಳನ್ನು ಅವರು ನಿರ್ಭೀತಿಯಿಂದ ಹಾಡುತ್ತಾರೆ.

ಬಯಲು ಪ್ರದೇಶದಲ್ಲಿ ನಡೆಯುತ್ತಿದ್ದ ಈ ಗೊಂದಲಗಳು ಅಲ್ಲಿಯ ಜನರಿಗೆ ಅಂದಿನ ಮನರಂಜನೆಯಾಗಿತ್ತು. ಅಲ್ಲಿ ಹಾಸ್ಯ ಪ್ರಚೋದಕ ಮಾತುಗಳನ್ನು ಹೇಳಿ ಅವರನ್ನು ಸಂತೋಷ ಪಡಿಸುವುದರ ಜೊತೆಗೆ ನೀತಿಯ ಬೋಧನೆ ಮಾಡುತ್ತಿದ್ದರು. ಶರೀಫ, ಕನಕದಾಸ, ಪುರಂದರದಾಸರ ಪದಗಳನ್ನು ತಮ್ಮದೇ ಧಾಟಿಯಲ್ಲಿ ಹೇಳುತ್ತಿದ್ದರು. ಗೊಂದಲಿಗರು ಹೇಳುವ ಹಾಡು, ಕಥೆಗಳಲ್ಲಿ ದೈವಿಭಕ್ತಿ ಮತ್ತು ಮನರಂಜನೆ ಇರುವುದನ್ನು ಕಾಣುತ್ತೇವೆ. ಗೊಂದಲಿಗರ ಕಥೆಗಳಲ್ಲಿ ಅಭಿವ್ಯಕ್ತಗೊಂಡಿರುವ ಸ್ವರ್ಗ, ನರಕ, ಪಾತಾಳ ದೇವಲೋಕ, ಅತಿಮಾನುಷ ಶಕ್ತಿಗಳು, ನುಡಿಗಟ್ಟು, ಗಾದೆಗಳು, ಪಾತಿವ್ರತ್ಯ, ತ್ಯಾಗ, ಬಲಿದಾನ, ಬಂಜೆತನ ಮುಂತಾದ ಅಂಶಗಳು ಅವರ ಬದುಕಿನ ಪ್ರತಿಬಿಂಬಗಳೇ ಆಗಿವೆ.

**೬.೩.೨ ಭಾಗ್ಯದ ಗೊಂದಲ:**

ಅನೇಕರು ತಮಗೆ ಕಷ್ಟ ಬಂದಾಗ ತಮ್ಮ ಮಾತೃದೇವತೆಗಳಿಗೆ ಬೇಡಿಕೊಂಡು ಹರಕೆ ಹೊತ್ತಿರುತ್ತಾರೆ. ಅವರ ಕಷ್ಟಗಳು ಪರಿಹಾರವಾದಾಗ, ತಾವು ಅಂದುಕೊಂಡ ಕೆಲಸ ಕೈಗೂಡಿದಾಗ, ತಮಗೆ ಭಾಗ್ಯ ಲಭಿಸಿತು ಎಂದು ತಿಳಿದು ಗೊಂದಲ ಹಾಕಿಸುತ್ತಾರೆ. ಇದಕ್ಕೆ ಭಾಗ್ಯದ ಗೊಂದಲ ಅಥವಾ ಹರಕೆ ಗೊಂದಲ ಎಂದು ಕರೆಯುತ್ತಾರೆ. ಬದುಕಿನಲ್ಲಿ ಬರುವ ಕಷ್ಟಗಳಿಗೆ ಮಾನವ ದೇವರ ಮೊರೆ ಹೋಗುತ್ತಾನೆ. ಮಾತೃ ದೇವತಾ ಆರಾಧಕ ಭಕ್ತರು ತಮ್ಮ ಮನೆಯ ಆರಾಧ್ಯ ದೇವತೆಗಳಿಗೆ ನಮಗೆ ಬಂದಿರುವ ಕಷ್ಟಗಳನ್ನು ದೂರ ಮಾಡು ನಾನು ನಮ್ಮ ಮನೆಯಲ್ಲಿ ಗೊಂದಳ ಹಾಕಿಸುತ್ತೇನೆ.' ಎಂದು ಬೇಡಿಕೊಳ್ಳುತ್ತಾರೆ. ಭಕ್ತರ ಹರಕೆಯಂತೆ ಅವರ ಆಸೆ ಕೈಗೂಡಿದೊಡನೆ ಶುಭ ಮೂಹೂರ್ತದ ಒಂದು ದಿನ ಗೊಂದಲಿಗರಿಂದ ಗೊಂದಲ ಹಾಕಿಸುತ್ತಾರೆ. ಅದು ಅವರ ಮನೆಯಲ್ಲಿ ಅಥವಾ ಅಂಬಾಭವಾನಿಯ ಗುಡಿಯಲ್ಲಿಯಾದರೂ ಆಗಬಹುದು. ಇಂದು ಅನೇಕರು ತುಳಜಾಪುರಕ್ಕೆ ಹೋಗಿ ಅಂಬಾಭವಾನಿ ದೇವಸ್ಥಾನದಲ್ಲಿ ಗೊಂದಲ ಹಾಕಿಸಿ ತಮ್ಮ ಹರಕೆ ತೀರಿಸುತ್ತಿರುವುದು ಕೇಳಿ ಬರುತ್ತದೆ.

ಮನೆಯಲ್ಲಿಯೇ ಗೊಂದಲ ಕಾರ್ಯನಡೆಸುವವರು ತಮ್ಮ ಬಂಧು ಬಳಗದವರನ್ನು ಕರೆಯಿಸಿ ಗೊಂದಲ ಹಾಕಿಸುತ್ತಾರೆ. "ಹರಕೆ ಗೊಂದಲವನ್ನು ಯಾವಾಗ ಬೇಕಾದರೂ ಯಾವ ಕಾಲದಲ್ಲಾದರೂ ಹಾಕಿಸಬಹುದು" ಎಂದು ಯಲ್ಲಾಪುರಟ್ಟಿಯ ಸಂಗಪ್ಪ ದುಂಡಪ್ಪ ಗೋಂಧಳಿಯವರು ಹೇಳುತ್ತಾರೆ.

ಗೊಂದಲ ಹಾಕಿಸುವ ಹಿಂದಿನ ದಿನ ಗೊಂದಲಿಗರ ಮನೆಗೆ ಹೋಗಿ ವೀಳ್ಯೆ ಕೊಟ್ಟು ಆಹ್ವಾನ ನೀಡುತ್ತಾರೆ. ಗೊಂದಲದ ಪೂಜೆ ನಡೆಯುವ ದಿನ ಬೆಳಿಗ್ಗೆ ಮನೆಯನ್ನೆಲ್ಲ ಸಾರಿಸಿ, ಅಂಗಳದಲ್ಲಿ ಸುಂದರವಾದ ರಂಗವಲ್ಲಿ ಹಾಕುತ್ತಾರೆ. ದೇವಿಯನ್ನು ಪ್ರತಿಷ್ಠಾಪಿಸುವ ಸ್ಥಳದಲ್ಲಿ ಸಾರಿಸಿ ರಂಗವಲ್ಲಿ ಬಿಡಿಸುತ್ತಾರೆ. ಅಲ್ಲಿ ಬಾಳೆ ಅಥವಾ ಕಬ್ಬುಗಳಿಂದ ಮಂಟಪ ಕಟ್ಟಿ ನಡುವೆ

ದೇವರ ಮಂಟಪ ಅಥವಾ ಮಣಿಯನ್ನು ಹಾಕುತ್ತಾರೆ. ಮಣೆಯ ಮೇಲೆ ಹೊಸ ಬಟ್ಟೆ ಹಾಸಿ ಅಲ್ಲಿ ಅಕ್ಷತೆ ಹಾಕುತ್ತಾರೆ. ಅಕ್ಷತೆಯ ಮೇಲೆ ಮಡಿನೀರು ತುಂಬಿದ ಹಿತ್ತಾಳೆ ಅಥವಾ ತಾಮ್ರದ ತಂಬಿಗೆ ಅಥವಾ ಕೊಡವನ್ನಿಟ್ಟು ಅದರ ಮೇಲೆ ತೆಂಗಿನ ಕಾಯಿ ಇಟ್ಟು ಅದಕ್ಕೆ ಬಂಗಾರದ ಆಭರಣಗಳನ್ನು ಹಾಕಿ ಸಿಂಗರಿಸುತ್ತಾರೆ. ಕೆಲವರು ತಮ್ಮ ಮನೆಯಲ್ಲಿರುವ ಅಂಬಾಭವಾನಿಯ ಮೂರ್ತಿ ಇಟ್ಟು ಪ್ರತಿಷ್ಠಾಪಿಸುತ್ತಾರೆ. ಹೀಗೆ ಕಲಶ ಸ್ಥಾಪನೆ ಮಾಡಿದ ಮೇಲೆ ಅಂಬಾಭವಾನಿ ನೆಲೆಸಿದ್ದಾಳೆ ಎಂದು ಅವರು ತಿಳಿದುಕೊಳ್ಳುತ್ತಾರೆ. ದೇವಿಗೆ ಸೀರೆ ಅಥವಾ ರವಿಕೆ ಕಣ ಇಟ್ಟು ಉಡಿ ತುಂಬುತ್ತಾರೆ. ಉಡಿಯಕ್ಕಿಯಲ್ಲಿ ೫ ಅರಿಷಿಣ, ೫ ಅಡಿಕೆಬೆಟ್ಟಗಳು, ೫ ಕೊಬ್ಬರಿ ಬಟ್ಟಲು, ನೆನಗಡಲೆ, ಬಾಳೆಹಣ್ಣುಗಳನ್ನು ಹಾಕುತ್ತಾರೆ. ಹೂವಿನಿಂದ ಅಲಂಕರಿಸಿದ ದೇವಿಯ ಕಲಶವನ್ನು ಗೊಂದಲಿಗರು ಪೂಜಿಸಿದ ಮೇಲೆ ದೇವಿಯ ಪರಿಪೂರ್ಣ ಪೂಜೆಯಾಗುತ್ತದೆ. ಗೊಂದಲಿಗರು ಪೂಜೆ ಸಲ್ಲಿಸಿದ ನಂತರ ಅವರಿಗೆ ನಮಸ್ಕರಿಸಿ ಮೊದಲು ಊಟಕ್ಕೆ ಹಾಕುತ್ತಾರೆ. ನಂತರ ಉಳಿದವರೆಲ್ಲ ಊಟ ಮಾಡಿದ ಮೇಲೆ ಗೊಂದಲ ಕಾರ್ಯಪ್ರಾರಂಭವಾಗುತ್ತದೆ. ಈ ಗೊಂದಲದಲ್ಲಿ ಮದುಮಕ್ಕಳು ಮಾತ್ರ ಇರುವುದಿಲ್ಲ. ಮದುವೆ ಗೊಂದಲದಂತೆಯೇ ಇಲ್ಲಿಯ ಗೊಂದಲದ ಆರಾಧನೆ ಪ್ರಾರಂಭವಾಗುತ್ತದೆ. ಗೊಂದಲಿಗರು ಮೊದಲು ಗಣಪತಿ ಶ್ಲೋಕ ಪ್ರಾರಂಭಿಸುತ್ತಾರೆ.

"ಮೊದಲಿಗೆ ನೆನದೇವ್ರಿ ನಾವು ಗಣಪತಿಗೆ
ಗಣಪತಿಗೆ ಶಿವಗೌರಿ ಪುತ್ರನೇ ॥ ಪಲ್ಲವಿ ॥
ಶರಣು ಆದೇವು ನಾವು ಗಣಪತಿಯೇ
ತಲೆಬಾಗಿ ಸಮೀಪೆವು ಗಣಪತಿಯೇ ॥
ವಿಘ್ನ ಪರಿಹರಿಸೋ ಗಣಪತಿಯೋ
ಗೊಂದಳ ಬಾರೋ ಗಣಪತಿಯೇ "

ಗಣಪತಿಯ ಸ್ತುತಿಯ ನಂತರ ಭಕ್ತರ ಇಚ್ಚೆಯಂತೆ ಕಥೆ ಹೇಳಲು ಪ್ರಾರಂಭಿಸುವರು. ಪ್ರಾರಂಭದಲ್ಲಿ ದೇವಿಸ್ತುತಿ ಹೇಳುತ್ತಾರೆ. ನಡು ನಡುವೆ ವಿಶ್ರಾಂತಿಯನ್ನು ಪಡೆಯುತ್ತಾ ಕಥೆ ಮುಂದುವರೆಯುತ್ತದೆ. ಗೊಂದಲಿಗರ ಕಥನದಲ್ಲಿ ಹಾಸ್ಯ, ಅಡ್ಡಕತೆ, ಪದಗಳು ಹಲವಾರು ಪ್ರಮುಖ ಅಂಶಗಳನ್ನು ಕಾಣುತ್ತೇವೆ. ಇವುಗಳ ಮೂಲಕ ಸಮಾಜವನ್ನು ತಿದ್ದುವ, ನೊಂದ ಮನಗಳಿಗೆ ಸಾಂತ್ವನ ನೀಡುವ ಹಾಗೂ ನೀತಿಯನ್ನು ಸಾರುವ ಕೆಲಸವನ್ನು ಮಾಡುತ್ತಾರೆ. ದೈವೀ ಭಕ್ತಿಯನ್ನು ಜನರಲ್ಲಿ ಬಿತ್ತುವ ಕಾರ್ಯದಲ್ಲಿ ಅವರ ವಾದ್ಯಗಳ ಸಂಗೀತದ ಏರಿಳಿತದಿಂದ ಅಲ್ಲಿಯ ಭಕ್ತರು ಭಾವಾವೇಶಕ್ಕೆ ಒಳಗಾಗುತ್ತಾರೆ. ಆಗ ಅಲ್ಲಿದ್ದ ಕೆಲವು ಭಕ್ತರು ಸಹ ಕುಣಿಯಲು ಪ್ರಾರಂಭಿಸುತ್ತಾರೆ. ನಡು ನಡುವೆ ಕುಳಿತವರಿಗೂ ಕುಣಿದವರಿಗೂ ಭಂಡಾರವನ್ನು

ಹಚ್ಚುತ್ತಾರೆ. ಈ ಆರಾಧನೆ ಬೆಳಗಿನವರೆಗೆ ನಡೆಯುತ್ತದೆ. ಬೆಳಿಗ್ಗೆ ಹರಕೆ ಪದ್ಯಗಳನ್ನು ಹಾಡುವುದರೊಂದಿಗೆ ದೀವಟಿಗೆಯನ್ನು ಅಂಗಳದಲ್ಲಿ ಶುದ್ಧ ತುಪ್ಪದಲ್ಲಿ ನಂದಿಸುತ್ತಾರೆ. ಈ ಕಾರ್ಯ ಬೆಳಿಗ್ಗೆ ೫ ಗಂಟೆಗೆ ನಡೆಯುತ್ತದೆ. ಅಲ್ಲಿಗೆ ಭಾಗ್ಯದ ಗೊಂದಳದ ಕಾರ್ಯಕ್ರಮ ಮುಕ್ತಾಯವಾಗುತ್ತದೆ. ಗೊಂದಲದ ಆಟ ವೀಕ್ಷಣೆಗೆ ಬಂದ ಭಕ್ತರು, ಮನೆಯವರು ಗೊಂದಲಿಗರಿಗೆ ಉಡುಗರೆ ಕೊಡುತ್ತಾರೆ.

### ೬.೪ ಅಡ್ಡ ಕಥೆಗಳು

ಗೊಂದಲಿಗರು ಹೇಳುವ ಅಡ್ಡ ಕಥೆಗಳು ಸಾಮಾನ್ಯವಾಗಿ ಹಾಸ್ಯ, ಸಾಮಾಜಿಕ ವಿಡಂಬನೆ ಹಾಗೂ ನೀತಿಯಿಂದ ಕೂಡಿರುತ್ತವೆ. ಮೂಲಕಥೆಯನ್ನು ವಿಸ್ತರಿಸಲು ಅಡ್ಡಕಥೆಗಳನ್ನು ಬಳಸುತ್ತಿರುವುದು ಕಂಡು ಬರುತ್ತದೆ. ಮೂಲ ಕಥೆಗೆ ಯಾವುದೇ ದಕ್ಕೆ ಬರದಂತೆ ಅದಕ್ಕೆ ಪೂರಕವಾದ ಅಡ್ಡಕಥೆಗಳನ್ನೇ ಹೇಳುವುದನ್ನು ಕಾಣುತ್ತೇವೆ. ಸಾವುಕಾರ ಸಂಗವ್ವ, ಗಂಗೆಗೌರಿ, ಕುಳುಪಾನಿ, ಜಿಪುಣ ಗಂಗಮ್ಮ, ಬಡವನಿಗೆ ವರಕೊಟ್ಟಕಥೆ, ಗರತಿ ಸಂಗವ್ವ, ಮೈನಾವತಿ, ಅತ್ತೆಯ ಗೊಂಬೆ, ಗಂಗಮ್ಮ ತಂಗಿ, ಲೆಕ್ಕಾಚಾರದ ಅತ್ತೆ, ತಾಯಿ ಕೊಂದ ಪಾಪ, ಎಲ್ಲಮ್ಮನ ಮುನಿಸು, ಮಿಡಿನಾಗೇಂದ್ರ, ಜೋಗತಿಕಲ್ಲು, ಉತ್ತರಿ ಮಳೆ, ಸತಿ ಅನಸೂಯಾ, ಪಾರ್ವತಿ ಪರಮೇಶ್ವರ, ಪರುಶರಾಮನ ಕಥೆ, ಮುಂತಾದ ಪೌರಾಣಿಕ, ರಮ್ಯ ವಿನೋದ ನೀತಿ, ಅತಿಮಾನುಷ ಕಥೆಗಳನ್ನು ಹೇಳುತ್ತಾರೆ.

ಗೊಂದಲಿಗರು ಹೇಳುವ ಮೂಲ ಕಥೆಗೆ ಸಂದರ್ಭಕ್ಕನುಗುಣವಾಗಿ ವ್ಯಕ್ತಪಡಿಸುವ ಉಪಕಥೆಗಳನ್ನು ಗಮನಿಸಿದಾಗ ವಡ್ಡಾರಾಧನೆಯ ಕಥನ ಕ್ರಮವು ನೆನಪಿಗೆ ಬರುತ್ತದೆ. ವಡ್ಡಾರಾಧನೆಯ ರಚನೆಕಾರ ಶಿವಕೋಟ್ಯಾಚಾರ್ಯರು ಮುಖ್ಯಕಥೆಯನ್ನು ಹೇಳಲು ಪ್ರಾರಂಭಿಸಿ ಮಧ್ಯದಲ್ಲಿ ಅನೇಕ ಉಪಕಥೆಗಳನ್ನು ಹೇಳುತ್ತಾನೆ. ವಡ್ಡಾರಾಧನೆಯು ಕಂಡು ಬರುವ ಉಪಕಥೆಗಳು ಸಹ ನೀತಿ, ಪಾಪ, ಪುಣ್ಯ, ಪುನರ್ಜನ್ಮ ಮುಂತಾದ ಅಂಶಗಳನ್ನು ಒಳಗೊಂಡಿದ್ದರೂ ಧರ್ಮದ ಆರಾಧನೆಯೇ ಅಲ್ಲಿ ಮುಖ್ಯವಾಗಿರುವುದು ಗೋಚರಿಸುತ್ತದೆ.

ಗೊಂದಲಿಗರ ಕಥೆಗಳು ಸಹ ಧರ್ಮ, ಮಾತೃದೇವತಾರಾಧನೆಯ ಜೊತೆಗೆ ಪಾಪ ಪುಣ್ಯ, ನ್ಯಾಯ ನೀತಿ, ತಿಳಿಸುವ ಕಥೆಗಳೇ ಆಗಿವೆ. ಗೊಂದಲಿಗರು ಮೂಲ ಕಥೆಯ ನಡುವೆ ಜನಪದ, ಪೌರಾಣಿಕ, ವಿಡಂಬನಾತ್ಮಕ, ಹಾಗೂ ಹಾಸ್ಯ ಕಥೆಗಳನ್ನು ಹೇಳುತ್ತಾರೆ. ಜನಪದ ಕಥೆಯೊಳಗೆ ಸಂದರ್ಭಕ್ಕನುಸಾರವಾಗಿ ಬಂದು ಹೋಗುವ ಮತ್ತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಹೆಣ್ಣುಮಕ್ಕಳು ಬುದ್ಧಿವಂತರು, ಧೈರ್ಯವಂತರು ಜಾಣೆಯರು, ಸಾಹಸಿಗಳು, ಸ್ವಾಭಿಮಾನಿಗಳು, ತನ್ನ ಬುದ್ದಿವಂತಿಕೆಯಿಂದಲೇ ರಾಕ್ಷಸರನ್ನು ಪ್ರತಿನಾಯಕರನ್ನು ಮಣ್ಣು ಮುಕ್ಕಿಸುವ ತನಗೆ ಒಲ್ಲದವರನ್ನು ತಂತ್ರ ಹೂಡಿ ಮೋಸಗೊಳಿಸುವ ಮೂಲಕ ಗೆಲವು ಸಾಧಿಸುವಂತಹ ಅನೇಕ ಚಿತ್ರಣಗಳು ಕಂಡು ಬರುತ್ತವೆ. ಜೊತೆಗೆ ಮುಂದಾಗುವ ಘಟನೆಯನ್ನು

ತಿಳಿಯಬಲ್ಲ ಅತೀಂದ್ರಿಯ ಶಕ್ತಿಯಂತೆ, ಗಂಡಿಗೆ ಸಾಧ್ಯವಾಗದ ಒಗಟನ್ನು ಬಿಡಿಸುವ ಜಾಣೆಯಾಗಿ ಮೂಡಿರುತ್ತಾಳೆ.

ಜನಪದ ಕಥೆಗಳಲ್ಲಿ ಕಂಡು ಬರುವ ಹಲವಾರು ಪೌರಾಣಿಕ ಪಾತ್ರಗಳು ಸಹ ಸಾಮಾನ್ಯ ಮಾನವರಂತೆ ತಮ್ಮ ಬದುಕಿಗೆ ಹತ್ತಿರವಾಗಿರುವುದನ್ನು ಕಾಣುತ್ತೇವೆ. ನೋವು–ನಲಿವು, ಸೋಲು–ಗೆಲುವು, ಅವಮಾನ, ಹಾಸ್ಯ, ಸವತಿ ಮತ್ಸರ, ಮುಂತಾದ ಸಹಜ ಗುಣಗಳನ್ನು ಜನಪದ ಕಥೆಗಳಲ್ಲಿ ಕಾಣುತ್ತೇವೆ. ಗಂಗೆ ಗೌರಿ ಕಥನದಲ್ಲಿ ಹೆಂಡತಿಗೆ ಹೆದರುವಂತ ಶಿವ ಒಬ್ಬ ರೈತನಾಗಿ, ಗಂಗೆ ಗೌರಿ ಸಾಮಾನ್ಯ ಸ್ತ್ರೀಯರಂತೆ, ಸಣ್ಣಪುಟ್ಟ ವಿಷಯಗಳಿಗೆ ಜಡೆ ಹಿಡಿದುಕೊಂಡು ಬೈಯ್ದಾಡುವ ಹೆಂಗಸರಂತೆ ಕಂಡು ಬರುವ ಚಿತ್ರಣವಿದೆ. ಶಿವನ ತೋಟದಲ್ಲಿ ಬೆಳೆದ ಮಲ್ಲಿಗೆ ಹೂಗಳನ್ನು ಬಿಡಿಸಿ ತಂದ ಗೌರಿ ಉತ್ತಮವಾದವುಗಳನ್ನು ತಾನಿಟ್ಟುಕೊಂಡು ಬಾಡಿದವುಗಳನ್ನು ಗಂಗೆಗೆ ಕಳುಹಿಸುತ್ತಾಳೆ. ಗಂಗೆಗೆ ಕೋಪ ಬಂದು ಹೂವುಗಳನ್ನು ಬೀದಿಗೆಸೆಯುತ್ತಾಳೆ. ಆವೇಶ ಭರಿತಳಾಗಿದ್ದ ಗೌರಿ ಇದಕ್ಕೆ ಕಾರಣ ಕೇಳಿದಾಗ ಜಗಳ ಆರಂಭವಾಗುತ್ತದೆ. ಜಡೆ ಹಿಡಿದು ಜಗ್ಗಾಡುವುದರ ಜೊತೆಗೆ ಗಂಗೆಯನ್ನು ಕುರಿತು ಗೌರಿ.

> "ಮೀನು ಮಾರುವರಲ್ಲೇ ನಿಮ್ಮಪ್ಪಂದೀರು
> ಮೀನು ಮಾರುವರಲ್ಲೇ ನಿಮ್ಮಣ್ಣಂದೀರು
> ತೆಪ್ಪ ಹೆತ್ತುವರಲ್ಲೇ ನಿಮ್ಮಪ್ಪಂದೀರು"[೧೦]

ಎಂದು ಛೇಡಿಸುತ್ತಾಳೆ. ಈ ಘಟನೆ ನಡೆದ ನಂತರಗೌರಿ ಮುಟ್ಟಾಗುತ್ತಾಳೆ. ಮೈಲಿಗೆಯನ್ನು ಕಳೆದುಕೊಳ್ಳಲು ಮಗನ ಮೂಲಕ ನೀರು ಬೇಕೆಂದು ಹೇಳಿ ಕಳುಹಿಸುತ್ತಾಳೆ. ನಕಾರಾತ್ಮಕ ಉತ್ತರ ಬಂದಾಗ ತಾನೇ ಬಂದು ಕೈಂಯೊಡ್ಡುತ್ತಾಳೆ ಆಗ ಗಂಗೆ

> "ನೀವು ಉತ್ತಮರಲ್ಲೆ ನಾವು ಬೆಸ್ತಾರು ಬೆಸ್ತರ ಮನೆಗೆ ನೀ ಬರಬಹುದೆ ಗೆಳತಿ
> ಬೆಸ್ತರ ಮನೆ ನೀರು ಬೇಡೋದೆ ನಿನಗೆ"[೧೧]

ಹೀಗೆ ಪ್ರತ್ಯುತ್ತರ ನೀಡುತ್ತಾಳೆ. ಗೌರಿ ಕೊನೆಗೆ ತನ್ನ ಭಾಗದ ಶಿವನನ್ನೇ ನಿನಗೆ ಒಪ್ಪಿಸುವೆ ಎಂದು ಮಾತು ಕೊಟ್ಟು ನೀರನ್ನು ಪಡೆಯುತ್ತಾಳೆ. ಇಲ್ಲಿ ಮೈಲಿಗೆ ಕಳೆದುಕೊಳ್ಳಲು ನೀರು ಬೇಕು. ನೀರು ಪಡೆದುಕೊಳ್ಳುವಲ್ಲಿ ಉಂಟಾದ ಸವತಿ ಮತ್ಸರ, ಜಗಳ ಇವೆಲ್ಲ ಸಾಮಾನ್ಯ ಹೆಂಗಸರ ಬದುಕಿನ ರೀತಿ ನೀತಿಗಳಾಗಿ ಕಂಗೊಳಿಸಿವೆ. ಗೊಂದಲಿಗರ ಕಥೆಗಳಲ್ಲಿಯೂ ಸವತಿ ಮತ್ಸರ, ಜಗಳ, ಮಾಯದಾಟ. ಮುಂತಾದ ಅನೇಕ ವಿಷಯಗಳನ್ನು ಕಾಣುತ್ತೇವೆ. ಅವು ಜನಸಾಮಾನ್ಯರ ಜೀವನದಲ್ಲಿ ನಡೆಯುವ ಸಹಜ ಗುಣಗಳು ಇವುಗಳನ್ನು ಗೊಂದಲಿಗರು ತಮ್ಮ ಮೂಲ ಕಥೆಗೆ ಹೊಂದಿಸಿಕೊಂಡು ಹೇಳುತ್ತಾರೆ.

'ಸತಿ ಅನಸೂಯಾ' ಇದು ಪತಿವೃತಾ ಧರ್ಮ ಸಾರುವ ಕಥೆ. ಸೃಷ್ಟಿ, ಸ್ಥಿತಿ, ಲಯಗಳ

ಕೃರ್ತರಾದ ಬ್ರಹ್ಮ, ವಿಷ್ಣು, ಮಹೇಶ್ವರನನ್ನು ತನ್ನ ಮಕ್ಕಳಾಗಿಸಿಕೊಂಡು ಎದೆ ಹಾಲು ಕುಡಿಸುವ ಸತಿ ಶಿರೋಮಣಿಯಾಗಿ ಪತಿವ್ರತಾ ಧರ್ಮದ ಮಹತ್ವ ಹೇಳಿರುವ ಅನುಸಾಯಳ ಕಥೆಯನ್ನು ಗೊಂದಲಿಗರು ತಮ್ಮ ಕಥನಗಳಲ್ಲಿ ಅಳವಡಿಸಿಕೊಂಡು ಪತಿವ್ರತಾ ಧರ್ಮದ ಮಹತ್ವ, ಅವಳ ಬದುಕು, ಆಚಾರ-ವಿಚಾರ, ಸಂಪ್ರದಾಯ ಮುಂತಾದವುಗಳನ್ನು ವಿವರವಾಗಿ ತಿಳಿಸುತ್ತಾರೆ. ದೈವಿ ಶಕ್ತಿ ಪಡೆದ ಅನುಸೂಯಾ, ಸತಿ ಸಕ್ಕುಬಾಯಿ ಕಥೆಯ ಜೊತೆಗೆ ಪತಿವ್ರತೆ ಶೀಲಾವತಿ, ಸತಿಶಿವಲೋಚನಾ, ಪದ್ಮಾವತಿ ಮುಂತಾದವರ ಕಥೆಗಳನ್ನು ಗೊಂದಲಿಗರು ಹೇಳುತ್ತಾನೆ. ಆಧುನಿಕ ಸ್ತ್ರೀಯರಲ್ಲಿ ಕಂಡು ಬರುತ್ತಿರುವ ಪತಿವ್ರತಾ ಧರ್ಮ ಹೇಗಿದೆ ಎಂಬುದನ್ನು ಅಲ್ಲಲ್ಲಿ ವಿಡಂಬನಾತ್ಮಕವಾಗಿ ವಿವರಿಸುತ್ತಾ ಪುರಾಣ ಕಥೆಗಳಲ್ಲಿ ಕಂಡು ಬರುವ ಪತಿವ್ರತಾ ಸ್ತ್ರೀಯರಂತೆ ನೀವು ಬಾಳಿ ಬದುಕಿ ಮುಕ್ತಿ ಪಡೆಯಿರಿ ಎಂದು ನೀತಿ ಹೇಳುವುದನ್ನು ಅವರ ಕಥೆಗಳಲ್ಲಿ ಕಾಣುತ್ತೇವೆ.

'ಜಗಳಗಂಟಿ ಜಕ್ಕವ್ವ' ಎಂಬ ಕಥೆಯಲ್ಲಿ ಕೆಲವು ಮನುಷ್ಯರ ಸ್ವಭಾವಕ್ಕೆ ಮದ್ದಿಲ್ಲ ಎನ್ನುವಂತೆ ಬಸಮ್ಮ ಎಂಬ ಮುದುಕಿ ಊರಿನಲ್ಲಿ ಜಗಳವಾಡುವುದನ್ನೇ ತನ್ನ ಕಾಯಕವಾಗಿ ಮಾಡಿಕೊಂಡವಳು. ಅವಳು ಪ್ರತಿದಿನ ಜಗಳವಾಡದೆ ಊಟ ಮಾಡುತ್ತಿರಲಿಲ್ಲ. ಹೀಗಾಗಿ ಅವಳಿಗೆ ಎಲ್ಲರೂ ಜಗಳಗಂಟಿ ಜಕ್ಕವ್ವ ಎಂದು ಕರೆಯುತ್ತಿದ್ದರು. ಒಂದು ದಿನ ಆ ಊರಿಗೆ ಹೊಸದಾಗಿ ಬಂದ ಸೊಸೆಯ ಜೊತೆಗೆ ಜಗಳ ತೆಗೆದು ಸಾಲದ್ದಕ್ಕೆ ಅವಳ ಮನೆಗೆ ಜಗಳಕ್ಕೆ ಹೋಗುತ್ತಾಳೆ. ಆಗ ಅವಳ ಅತ್ತೆ ಚಾಣಾಕ್ಷತನದಿಂದ ನಮ್ಮ ಸೊಸೆಯ ಕೂದಲು ಹಿಡಿದು ಹೊಡೆಯುತ್ತಿದ್ದಂತೆ, ಅದಕ್ಕಾಗಿ ಮತ್ತೆ ಜಗಳ ಬಂದ್ರು ಬರಬಹುದು ಎಂದು ಎಂಟಾನೆ ಇಸ್ಕೊಂಡು ತಲೆಬೋಳಿಸ್ಕೊಂಡು ಬರಲಿಕ್ಕೆ ಹೋದ್ಲು ಎಂದು ಹೇಳುತ್ತಾಳೆ. ಅದನ್ನು ನಿಜ ಎಂದು ನಂಬಿದ ಜಗಳಗಂಟಿ ತನ್ನ ಕೂದ್ಲಾ ಹಿಡಿದು ಜಗಳಾಡುತ್ತಾಳೆಂದು ತಿಳಿದು ಅವಳೂ ಸಹ ತಲೆ ಬೋಳಿಸಿಕೊಳ್ಳುತ್ತಾಳೆ. ಅವಳು ಬಾವಿಯಲ್ಲಿ ಅಡಗಿ ಕುಳಿತಿದ್ದಾಳೆಂದು ತಿಳಿದು ತನ್ನ ಪ್ರತಿಬಿಂಬವನ್ನೇ ಅವಳು ಎಂದು ಭ್ರಮಿಸಿ ಜಗಳಕ್ಕಾಗಿ ಬಾವಿಗೆ ಜಿಗಿದು ತನ್ನ ಪ್ರಾಣ ಕಳೆದುಕೊಳ್ಳುತ್ತಾಳೆ. ತನ್ನ ಮೂರ್ಖತನದಿಂದ ತನ್ನನ್ನೇ ಬಲಿಯಾಗಿಸಿಕೊಂಡ ಕಥೆಯನ್ನು ಗೊಂದಲಿಗರು ಸ್ವಾರಸ್ಯಕರವಾಗಿ ನಿರೂಪಿಸುತ್ತಾರೆ. ಲೆಕ್ಕಾಚಾರದ ಅತ್ತೆ, ಗಂಗಮ್ಮ ತಂಗಿ, ಸಾವುಕಾರ ಸಂಗವ್ವ ಮುಂತಾದ ಕಥೆಗಳು ಹಾಸ್ಯಭರಿತವಾಗಿ ಕೂಡಿದ್ದು ಜನರ ಮನಮುಟ್ಟುವಂತೆ ನೀತಿಯನ್ನು ತಿಳಿಸುತ್ತವೆ.

ಗೊಂದಲಿಗರು ಹೇಳುವ ಹಲವಾರು ಕಥೆಗಳು ನಾಟಕ ರೂಪ ಪಡೆದಿವೆ. "ಶೀಲಾವತಿ" ಎಂಬ ಗೊಂದಲಿಗರ ಕಥನಕ್ಕೆ ಮುದೇನೂರು ಸಂಗಣ್ಣ ಅವರು ನಾಟಕದ ರೂಪ ನೀಡಿ ರಂಗದ ಮೇಲೆ ಯಶಸ್ವಿಯಾಗಿ ಪ್ರದರ್ಶಿಸಿ ಜನರ ಮೆಚ್ಚುಗೆ ಪಡೆದರು. ಈ ನಾಟಕವನ್ನು ಮರಿಯಮ್ಮನ ಹಳ್ಳಿ ಲಲಿತಕಲಾ ರಂಗದ ಕಲಾವಿದರು ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಈ

ನಾಟಕ ಪ್ರದರ್ಶಿಸಿದ್ದಾರೆ. ಇದು ನೂರಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡು ಜನಪ್ರಿಯ ನಾಟಕವಾಗಿ ಹೆಸರು ಪಡೆದುಕೊಂಡಿದೆ. ಲಲಿತಕಲಾ ರಂಗವು ಸಹ ಈ ನಾಟಕದಿಂದ ಹೆಚ್ಚು ಜನಪ್ರಿಯತೆ ಪಡೆದುಕೊಂಡಿತು.

"ಕಿನ್ನರಿ ಜೋಗಿಗಳ ಕಥಾ ಪ್ರಸಂಗವನ್ನು ವಿವರಿಸುವ ನಾಟಕ 'ಲಕ್ಷಾಪತಿ ರಾಜನ ಕಥೆ' ಕಿನ್ನರಿ ಜೋಗಿಗಳ ರಾಜನೀಯ ವೃತ್ತಿ ಜನ್ಮ ಕಥೆಗಾರಿಕೆಯ ರಂಗವನ್ನೇ ಬಳಸಿಕೊಂಡು ಇದನ್ನು ರಂಗರೂಪಕ್ಕೆ ಅಳವಡಿಸಲಾಗಿದೆ. ನಿರ್ದೇಶಕಿ-ನಟಿ ಬಿ.ಜಯಶ್ರೀ 'ಲಕ್ಷಾಪತಿ ರಾಜನ ಕಥೆ' ಯನ್ನು ಹಾಡಿನ ದಾಟಿಗಳನ್ನು ಉಳಿಸಿಕೊಂಡು ಕಥಾವಸ್ತುವನ್ನು ಇನ್ನಷ್ಟು ಪುಷ್ಟಗೊಳಿಸಿ ಪ್ರದರ್ಶನ ನೀಡಲಾಗಿದೆ. ಅಭಿನಯ, ಗತ್ತಿನ ಹೆಜ್ಜೆ, ರಂಗ ರಚನೆಗಳನ್ನು ನಿರ್ದೇಶಿಸಿದ್ದಾರೆ."[೨] ಗೊಂದಲಿಗರ ಕಥನ ಗೀತೆಗಳು ಕೇವಲ ಮೌಖಿಕ ಸಾಹಿತ್ಯವಾಗಿ ಉಳಿಯದೇ ಮುಂದೆ ಅವುಗಳಿಗೆ ಮುದೇನೂರ ಸಂಗಣ್ಣವರು ನಾಟಕದ ರೂಪ ನೀಡಿ ಜನಪ್ರಿಯತೆ ತಂದು ಕೊಟ್ಟಿದ್ದಾರೆ.

### ೬.೪ ಗೊಂದಲಿಗರ ಭಾಷೆ

ಗೊಂದಲಿಗರು ತಮ್ಮ ಮನೆಯಲ್ಲಿ ತಮ್ಮದೇ ಆದ ಮರಾಠಿಯ ಉಪಭಾಷೆ ಬಳಸುತ್ತಾರೆ. ಅವರು ಸಾಮಾನ್ಯವಾಗಿ ಮಾತನಾಡುವುದು ಮರಾಠಿ. ಬಂಧು, ಬಳಗ ಗಂಡ ಹೆಂಡತಿ ಹಾಗೂ ಸಮುದಾಯದವರ ಜೊತೆಗೆ ಮಾತನಾಡುವಾಗ ತಮ್ಮ ಖಿವಾರಿ ಭಾಷೆ ಬಳಸುತ್ತಾರೆ. ಮೂಲತ: ಇವರು ಮರಾಠ ಅರಸರ ಗುಪ್ತಚಾರರಾಗಿದ್ದರು. ಹೊರಗಿನವರಿದ್ದ ಸಂದರ್ಭದಲ್ಲಿ ಗುಪ್ತ ವಿಷಯಗಳನ್ನು ಮಾತನಾಡುವಾಗ ಅವರು ಖಿವಾರಿ ಭಾಷೆ ಬಳಸುತ್ತಾರೆ. ಇದು ಅವರಿಗೆ ಮಾತ್ರ ತಿಳಿಯುತ್ತದೆ. ಇವರ ಸಾಹಿತ್ಯ ಮಾತ್ರ ಕನ್ನಡ ಕರ್ನಾಟಕದಲ್ಲಿ ಕನ್ನಡದಲ್ಲಿಯೇ ತಮ್ಮ ವೃತ್ತಿಗಾಯನ ಮಾಡುತ್ತಾರೆ. ಅಲೆಮಾರಿಗಳಾದ ಇವರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋದಾಗ ಅಲ್ಲಿಯ ಪರಿಸರ ಭಾಷೆಯಲ್ಲಿ ವ್ಯವಹರಿಸುತ್ತಾರೆ. ಮಹಾರಾಷ್ಟ್ರದಲ್ಲಿ ಮರಾಠಿ, ರಾಯಚೂರು, ಕೊಪ್ಪಳ ಈ ಭಾಗದಲ್ಲಿ ಸಂಪರ್ಕ ಭಾಷೆಯಾಗಿ ತೆಲುಗು ಮಾತನಾಡುತ್ತಾರೆ. ದಕ್ಷಿಣ ಕನ್ನಡದಲ್ಲಿ ತುಳು ಮಾತನಾಡುತ್ತಾರೆ. ಗೊಂದಲಿಗರು ವಾಸಿಸುವ ಪ್ರದೇಶಕ್ಕೆ ಅನುಗುಣವಾಗಿ ಆ ಪರಿಸರದ ಭಾಷೆಯನ್ನು ಬಲ್ಲವರಾಗಿರುತ್ತಾರೆ. ಹೀಗಾಗಿ ಇವರನ್ನು 'ಬಹು ಭಾಷಾ ಪ್ರವೀಣರು' ಎಂದೂ ಕರೆಯಬಹುದು. ಡಾ.ವಿ.ಎಸ್. ಕಟಗಿಹಳ್ಳಿಮಠಯವರು 'ಸಂಸ್ಕೃತಿ ಮಹಿಳಾ ಮಾಲಿಕೆ ಸಂಪುಟ ೬' ರಲ್ಲಿ ಖಿವಾರಿ ಭಾಷೆ ಬಗ್ಗೆ ಈ ರೀತಿ ಹೇಳಿದ್ದಾರೆ. 'ಈ ಗೊಂದಲಿಗರ ಮನೆಯ ಭಾಷೆ ಕೌಟುಂಬಿಕ ಭಾಷೆಯೊಂದಿದ್ದು ಪ್ರಾಯಶ: ಇದೇ ಇವರ ಮಾತೃ ಭಾಷೆ ಆಗಿರುವ ಸಾಧ್ಯತೆ ಇದೆ. ಅಲೆಮಾರಿಗಳಾದ ಇವರು ಅನೇಕ ರಾಜ್ಯ, ವಿವಿಧ ಭಾಷೆ, ವಿವಿಧ ಧರ್ಮ, ವಿವಿಧ ಸಂಸ್ಕೃತಿಯ ಜನಸಮುದಾಯದೊಡನೆ ಹೆಚ್ಚು ಸಂಪರ್ಕದಲ್ಲಿರುವುದರಿಂದ ಈ ಎಲ್ಲವನ್ನು ಒಳಗೊಂಡಂತೆ ತಮಗೆ ಮಾತ್ರ ಅರ್ಥವಾಗುವ

ಭಾಷೆಯನ್ನು ರೂಪಿಸಿಕೊಂಡಂತೆ ತೋರುತ್ತದೆ.' ಎಂದು ಹೇಳಿದ್ದಾರೆ.

ಗೊಂದಲಿಗರ ಸಾಹಿತ್ಯದಲ್ಲಿ ಅವರ ಮೂಲ ಭಾಷೆಯ ಹಲವಾರು ಅಂಶಗಳನ್ನು ಕಾಣುತ್ತೇವೆ. ಮೌಖಿಕವಾಗಿ ಸಾಹಿತ್ಯ ಪ್ರಸಾರವಾಗುತ್ತಿರುವ ಅವರ ಜನಪದರ ಬದುಕಿನ ಬಣ್ಣದ ನಿಚ್ಚಳ ಪ್ರಭಾವವಿದೆ. ಜನಸಾಮಾನ್ಯರ ಬದುಕಿನಲ್ಲಿ ದಿನನಿತ್ಯ ನಡೆಯುವ ಕ್ರಿಯಾ ವಿಧಾನಗಳು, ಮಾತುಗಳು, ನಂಬಿಕೆಗಳು, ಆಚಾರ ವಿಚಾರಗಳು, ಮೂಢನಂಬಿಕೆಗಳು, ಗಾದೆ ಮಾತುಗಳು, ನುಡಿಗಟ್ಟುಗಳು ಗೊಂದಲಿಗರ ಕಥೆಗಳಲ್ಲಿ ಒಡಮೂಡಿವೆ. ಅವರ ಕಥೆಗಳು ಜನಪದರ ವಾಸ್ತವ ಬದುಕನ್ನು ಎಳೆ ಎಳೆಯಾಗಿ ಬಿಚ್ಚಿಕೊಡುತ್ತವೆ. ಗೊಂದಲಿಗರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ತಮ್ಮ ವೃತ್ತಿಕಾಯಕವನ್ನು ಮಾಡುತ್ತಿರುವುದರಿಂದ ಅಲ್ಲಿಯ ಭಾಷೆ, ಸಂಸ್ಕೃತಿ ಸಾಮಾಜಿಕ ಬದುಕು ಹೀಗೆ ಎಲ್ಲವನ್ನು ಬಲ್ಲವರಾಗಿರುತ್ತಾರೆ. ಹೀಗಾಗಿ ಅವರ ಕಥೆಗಳಲ್ಲಿ ಅನ್ಯ ಭಾಷೆಯ ಪದಗಳ ಪ್ರಯೋಗ ಕಂಡು ಬರುತ್ತದೆ. ಗೊಂದಲ ಕಾರ್ಯದಲ್ಲಿ ಕಥೆ ಹೇಳುವಾಗ ನಡು ನಡುವೆ ಮರಾಠಿಯಲ್ಲಿ, ಕನ್ನಡದಲ್ಲಿ ನುಡಿಗಟ್ಟು, ಗಾದೆ ಮಾತುಗಳನ್ನು ಹೇಳುತ್ತಾರೆ.

**೬.೬ ಗಾದೆ ಮಾತುಗಳು**

ಯಾವುದೇ ಒಂದು ಅಭಿವ್ಯಕ್ತಿ ಪ್ರಕಾರವಾದ ಒಂದರ ವಸ್ತು, ರೂಪ, ರಚನೆಗಳೆಲ್ಲವು ಸಂಸ್ಕೃತಿ ಬದ್ಧವಾಗಿಯೇ ಇರುತ್ತವೆ. ಅವು ಬದುಕಿಗೆ ಹತ್ತಿರವಾಗಿದ್ದು ನೀತಿಪರವಾಗಿರುತ್ತವೆ. ಎಂದು ಹೇಳಬಹುದು. ಅಭಿವ್ಯಕ್ತಿ ಕ್ರಿಯಾ ಶಕ್ತಿಯನ್ನು ಹೊಂದಿರುವ ಭಾಷೆಯಲ್ಲಿ ಗಾದೆ, ಒಗಟು, ನಾಣ್ಣುಡಿಗಳು, ಜನಪದ ಸಂಸ್ಕೃತಿಯ ಕೈಗನ್ನಡಿಯಾಗಿವೆ.

ಗಾದೆ ಮಾತುಗಳು ನಿತ್ಯ ಬದುಕಿನೊಂದಿಗೆ ಬೆಸೆದುಕೊಂಡಿರುವ ಜನಪದ ಪ್ರಕಾರವಾಗಿದೆ. ಅವು ಮಾತಿನ ಅವಿಭಾಜ್ಯ ಅಂಗವಾಗಿ ಬಳಕೆಗೊಳ್ಳುತ್ತ ಬಂದಿವೆ. ಸಂಸ್ಕೃತಿಯೊಂದರ ಸಾಮಾಜಿಕ ನಿಯಮಗಳು, ಸಾಂಸ್ಕೃತಿಕ ನಂಬಿಕೆಗಳು, ಮಾನವ ಬದುಕಿನ ನಿರೀಕ್ಷೆಗಳು, ಗಾದೆಗಳಲ್ಲಿ ಪ್ರತಿಬಿಂಬಿತವಾಗಿವೆ. ಗಾದೆಗಳಲ್ಲಿ ನಂಬಿಕೆ ನಡವಳಿಕೆಯನ್ನು ಕಾಯ್ದುಕೊಳ್ಳುವಲ್ಲಿ ಸಂವಹನವನ್ನು ಮನದಟ್ಟಾಗಿಸಿ ಅರ್ಥವನ್ನು ಮೊನಚುಗೊಳಿಸುವ ಉದ್ದೇಶವನ್ನು ಗಾದೆ ಮಾತುಗಳು ಹೊಂದಿರುತ್ತವೆ. ಮಾತಿನ ನಡುವೆ ಹಲವಾರು ಸಂದರ್ಭಗಳಲ್ಲಿ ಗಾದೆ ಮಾತುಗಳನ್ನು ಬಳಸುತ್ತಿರುವುದನ್ನು ಕಾಣುತ್ತೇವೆ. ಗಾದೆಮಾತು ಪ್ರಕಟಿಸುವ ಸಂಸ್ಕೃತಿಕ ಮೌಲ್ಯಗಳನ್ನು ನಾವು ಅಂತರ್ಗತ ಮಾಡಿಕೊಂಡಿದ್ದೇವೆ ಎಂಬರ್ಥ. ಈ ಹಿನ್ನೆಲೆಯಲ್ಲಿ ಸಂಸ್ಕೃತಿ ಅಥವಾ ಸಮಾಜಮುಖಿಯಾಗಿ ಸಮುದಾಯವೊಂದರ ಮೌಲ್ಯಗಳ ಸೃಷ್ಟಿ ಹಾಗು ವಾಹಕವಾಗಿ ಗಾದೆಗಳು ದುಡಿಯುತ್ತಿವೆ. ಜನಸಾಮಾನ್ಯರ ಮಾತುಗಳಲ್ಲಿ ಈಗಲೂ ನಾಣ್ಣುಡಿ ಗಾದೆ ಮಾತುಗಳು, ಪಡೆನುಡಿ, ಒಗಟು, ಜೋಡಿಪದಗಳು ಹೊರಹೊಮ್ಮುತ್ತಿರುತ್ತವೆ. ಇವು ಅಚ್ಚ ದೇಸೀ ನುಡಿಗಳಾಗಿವೆ. "ಒಂದು ವಿಶಿಷ್ಟ ಪ್ರದೇಶದ ಜನಸಮುದಾಯದಿಂದ ಅಂಗಿಕೃತಗೊಂಡು ಇವು ಅವರ ಜಾಣ್ಮೆ,

ಅನುಭವ, ಧ್ವನಿಗಳೆಲ್ಲವನ್ನು ಪ್ರತಿಬಿಂಬಿಸುತ್ತವೆ. ಇವು ಭಾಷೆಗೆ ಬಲವನ್ನು ಸಂವಹನಶೀಲತೆ, ನಿಖರತೆ, ಸ್ಪಷ್ಟತೆ, ಸಹಜತೆ, ಶುದ್ಧತೆ, ಸೊಗಸು, ಸೌಂದರ್ಯ, ಧ್ವನಿ ಗೌರವವನ್ನು ನೀಡುತ್ತವೆ."[೧೩] ಕೇವಲ ಒಂದು ಭಾಷೆಯ ಸಂವಹನ ಕ್ರಿಯೆ ಮಾತ್ರವಾಗಿರದೆ ಅದನ್ನು ಬಳಸುವ ಕನ್ನಡಿಗರ ಭಾಷಿಕರ ಸಂಸ್ಕೃತಿಯಾಗಿದೆ. ಸಾಂಸ್ಕೃತಿಕ ಒಳನೋಟಗಳನ್ನು ಬಿಂಬಿಸುವ ಮಹಲುಗಳಾಗಿವೆ. ಗೊಂದಲಿಗರು ತಮ್ಮ ಕಥನಗಳಲ್ಲಿ ಅನೇಕ ಗಾದೆ ಮಾತುಗಳನ್ನು ಬಳಸುವುದರ ಮೂಲಕ ಪ್ರೇಕ್ಷಕರಿಗೆ ನೇರವಾಗಿ ಮನಮುಟ್ಟುವಂತೆ ಮಾಡುತ್ತಾರೆ.

ಮುದೇನೂರ ಸಂಗಣ್ಣವರು ಸಂಪಾದಿಸಿದ 'ಗೊಂದಲಿಗರ ದೇವೇಂದ್ರಪ್ಪನವರ ಆಟಗಳು' ಎಂಬ ಕೃತಿಯಲ್ಲಿನ ಕಥೆ ಮಾಹಾಸತಿ ಶಿವಲೋಚನದಲ್ಲಿ ರಾಜ ಗಂಗಾಸಾಗ್ರ ದರ್ಬಾರನಲ್ಲಿ ಕುಳಿತಾಗ ಪ್ರಜೆಗಳನ್ನು ಕುರಿತು ನಮಗೆ ಈಗ ಅರುವು-ಮರುವು ಆಗಿದೆ. ಅರವತ್ತು ವರ್ಷ 'ಊರು ದೂರಾಯ್ತು ಕಾಡು ಸನೇಕ ಬಂತು'[೧೪] ಸಕಲ ಸಂಪತ್ತನ್ನು ತನ್ನ ಮಗನಿಗೆ ಒಪ್ಪಿಸುತ್ತೇನೆಂದು ಹೇಳುತ್ತಾನೆ. ಗಂಗಾಸಾಗ್ರನ ಮಂತ್ರಿ ಧರ್ಮಾವತಿ ಪಟ್ಟಣಕ್ಕೆ ಬಂದು ವರನ ಪೋಟೋ ತೋರಿಸಿದಾಗ, 'ವರನೋಡಿ ಕನ್ಯಾ ಕೊಡಬೇಕು ಕುದುರಿ ನೋಡಿ ಬೆಲೆ ಮಾಡ್ಬೇಕು'[೧೫]ಎಂದು ರುದ್ರಸೇಕ ಮಾಹಾರಾಜ ಹೇಳುತ್ತಾನೆ. ಶಿವಲೋಚನಳಿಗೆ ತನ್ನನ್ನು ಮೊಸತನದಿಂದ ಮದುವೆ ಮಾಡಿಕೊಂಡು ಬಂದಿದ್ದಾರೆಂದು ತಿಳಿದಾಗ ದು:ಖದಿಂದ ಗೋಳಾಡುತ್ತಾ ಪಾಲಿಗೆ ಬಂದದ್ದು ಪಂಚಾಮೃತ ಪತಿ ಮನೆಯೊಂದೆ ತನ್ನ ಪಾಲಿಗೆಂದು ತಿಳಿದು ಸಮಾದಾನಪಟ್ಟುಕೊಂಡು ಗಂಡನ ಮನೆಗೆ ಹೋಗುತ್ತಾಳೆ. ಬಾಳಭಿಕ್ಷುಕ ಕಥೆಯಲ್ಲಿ ಮೂಲಾ ನಕ್ಷತ್ರದಲ್ಲಿ ಹುಟ್ಟಿದ ಕೂಸಿಗೆ ಐದು ದಿವಸದ ಮಗುವನ್ನು ತಂದು ಮದುವೆ ಮಾಡಬೇಕೆಂಬ ಕಾರಣದಿಂದ ಎಲ್ಲಾ ದಿಕ್ಕುಗಳಲ್ಲಿ ಹುಡುಕಿ 'ಬಂದ ದಾರಿಗೆ ಸುಂಕವಿಲ್ಲ'[೧೬]ವೆಂದು ಮರಳುತ್ತಾನೆ. ಮತ್ತೊಂದು ಕಡೆ ಮದುವೆಯ ಮಂಟಪದಲ್ಲಿ ಹೆಣ್ಣಿಗಷ್ಟೇ ಎಲ್ಲ ಮದುವೆ ಕಾರ್ಯಮಾಡುತ್ತಿದ್ದಾಗ ಭದ್ರಸೇನ ಮಹಾರಾಜನು ಮದುಮಗನಿಗೇಕಿಲ್ಲ ಎನ್ನುವ ಸಂದರ್ಭದಲ್ಲಿ 'ಅಡಕೊತ್ತನೊಳಗ ಅಡಕಿ ಸಿಕ್ಕಿದ್ಹಾಂಗ ಆಗೈತಿ'[೧೭] ಎಂದು ಹೇಳುತ್ತಾನೆ. ಪದ್ಮಾವತಿಯನ್ನು ಗಂಡನ ಮನೆಗೆ ಕಳುಹಿಸುವ ಸಂದರ್ಬದಲ್ಲಿ 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗಾತು'[೧೮] ಎಂದು ಹೇಳಿ ಸಾವಚಿತ್ತ ಮಹಾರಾಜನು ತನ್ನ ಮಗಳನ್ನು ಒಪ್ಪಿಸುತ್ತಾನೆ. ಅದೇ ಕಥೆಯಲ್ಲಿ ಸಾವಚಿತ್ತ ಮಹಾರಾಜನು, ನಮಗೆ ಮೊಸವಾಗಿದೆ ವರ ನೋಡಿ ಹೆಣ್ಣು ಕೊಡ್ಲಿಲ್ಲ ಎಂದು ಹಳಹಳಿಸಿ 'ಮಾತುಕೊಟ್ರ ಹೋಯ್ತು ಮುತ್ತು ಒಡದರ ಹೋಯ್ತು'[೧೯] ಪರಿ ತಪಿಸುತ್ತಾರೆ. 'ರಾಜಾವೀರ ಪರಾಕ್ರಮ' ಕಥೆಯಲ್ಲಿ ಚಂದ್ರಶೇಕ ಮಾಹಾರಾಜನಿಗೆ ಮಕ್ಕಳಿಲ್ಲದ ಕಾರಣ ಪ್ರಜೆಗಳೆಲ್ಲ 'ಮಕ್ಕಳಿಲ್ಲದ ಮನೆ ಅಲ್ಲ ಹೊಲ ಇಲ್ಲದ ಒಕ್ಕಲುತನವಲ್ಲ'[೨೦] ಎಂದು ರಾಜನಿಗೆ ನೀವು ಮಕ್ಕಳ ಸಂತಾನ ಪಡೆಯಬೇಕು ಎಂದು ಹೇಳುತ್ತಾರೆ. 'ಸತ್ಯ ಶೀಲಾವತಿ' ಕಥೆಯಲ್ಲಿ ಶೀಲಾವತಿ ಕಳ್ಳನ ಕೈಯಿಂದ ಹೇಗೋ ತಪ್ಪಿಸಿಕೊಂಡು ಬರುವಾಗ ಮತ್ತೇ ಸಿಪಾಯಿಯ

ಕೈಗೆ ಸಿಕ್ಕಾಗ "ಕಟುಕನ ಕೈಗೆ ಕುರಿಮರಿ ಸಿಕ್ಕಂಗಾಯಿತು" ಅವಳ ಸ್ಥಿತಿ. 'ಮಾಹಾಸತಿ ಶಿವಲೋಚನ' ಕಥೆಯಲ್ಲಿ ವಯಸ್ಸಾದ ತಂದೆ, ಮಗನಿಗೆ ಅಧಿಕಾರ ವಹಿಸಿಕೊಬೇಕೆಂದಾಗ ಮಗನು ದೇಶದ ಮೇಲೆ ಹೋಗಿ ಬರುತ್ತೇನೆಂದಾಗ 'ತಂದಿ ಮಾಡಿದ ಪುಣ್ಯ ಮಗನಿಗೆ, ಮಗ ಮಾಡಿದ ಪುಣ್ಯ ತಂದಿಗೆ'[೨೧] ಎಂದು ಸಕಲ ಸಂಪತ್ತು ನಿನ್ನದಿದೆ ಎಂದು ಹೇಳಿ ಆತನನ್ನು ಲಡಾಯಿಗೆ ಹೋಗುವುದನ್ನು ತಡೆಯಲು ಪ್ರಯತ್ನಿಸುತ್ತಾನೆ. 'ಮಾತು ಬಲ್ಲವಗೆ ಮಾತಿನ ಪೆಟ್ಟ, ಹುಂಬಗ ಲತ್ತಿ ಪೆಟ್ಟ'.[೨೨] ಇಂತಹ ಗಾದೆ ಮಾತುಗಳು ಕೇಳುಗರ ಮನಸ್ಸನ್ನು ಮುಟ್ಟಿ ಮನ ಪರಿವರ್ತನೆಯಾಗುವಂತೆ ಮಾಡುತ್ತವೆ.

**೬.೭.ನಾಣ್ಣುಡಿಗಳು**

ಗೊಂದಲಿಗರು ತಮ್ಮ ಬದುಕಿನಲ್ಲಿ ಹಲವಾರು ನಾಣ್ಣುಡಿಗಳನ್ನು ಬಳಸುತ್ತಾರೆ. ಸಾಮಾಜಿಕ ನಿಯಮಗಳು, ಸಾಂಸ್ಕೃತಿಕ ನಂಬಿಕೆಗಳು, ವ್ಯಕ್ತಿ ಹಾಗು ಸಮುದಾಯದ ಆಪೇಕ್ಷೆಗಳು ಇಂಥಹ ನಾಣ್ಣುಡಿಗಳಲ್ಲಿ ಕಂಡು ಬರುತ್ತವೆ. ಮಾತಿನಲ್ಲಿ ಹಾಗೂ ಬದುಕಿನಲ್ಲಿ ಕೆಲವು ಸಂಪ್ರದಾಯಕ ಮೌಢ್ಯತೆಗೆ ಒಳಗಾಗುವ ಹಾಗೂ ಎಚ್ಚರಿಕೆಯನ್ನು ನೀಡುವಲ್ಲಿ ಇವು ಪ್ರಮುಖವಾಗಿವೆ. ನಾಣ್ಣುಡಿಗಳು ಪ್ರತಿಮೆ, ರೂಪಕ ಅಥವಾ ಸಂಕೇತಗಳ ಮೂಲಕ ಅಭಿವ್ಯಕ್ತಗೊಳ್ಳುತ್ತವೆ. ಇಂಥಹ ಸಾಮಾಜಿಕ ನಂಬಿಕೆಗಳ ನಡುವೆ ಬದುಕುತ್ತಿರುವ ಗೊಂದಲಿಗರು ಇವುಗಳನ್ನು ಕಥನಗಳಲ್ಲಿ ತುಂಬಾ ಮಾರ್ಮಿಕವಾಗಿ ಬಳಸಿದ್ದಾರೆ.

'ಸತ್ಯ ಶಿವಲೋಚನ' ಕಥೆಯಲ್ಲಿ ನೀಲಕುಮಾರನು ದೇಶದ ಮೇಲೆ ಹೋಗುವಾಗ ತನ್ನ ಗೆಳೆಯನ ನೆನಪಾಗಿ ಮರಳಿ ಬರುತ್ತಿರುತ್ತಾನೆ ಆಗ ಮಂತ್ರಿಯು 'ಮುಂದಿಟ್ಟ ಕಾಲು ಹಿಂದಕ್ಕೆ ಇಟ್ರ ಅಪಶಕುನ.'[೨೩] ಎಂಬ ಮಾತನ್ನು ಹೇಳುತ್ತಾನೆ. ಒಳ್ಳೆಯ ಕೆಲಸಕ್ಕೆ ಹೋಗುವಾಗ ಮರಳಿ ಬಂದರೆ ಆ ಕೆಲಸ ಯಶಸ್ವಿಯಾಗುವುದಿಲ್ಲ ಎಂಬ ನಂಬಿಕೆ ಗೊಂದಲಿಗರಲ್ಲಿದೆ. 'ಗತದಲ್ಲಿ ಲಗ್ನ ಮಾಡಬಾರದು.'[೨೪] ಎಂಬ ನಂಬಿಕೆಯು ಗೊಂದಲಿಗರಲ್ಲಿದೆ. ಇವರು ಆಚರಿಸುವ ಹಬ್ಬ ಹರಿದಿನಗಳಾಗಲಿ, ಮದುವೆ ಮುಂಜವಿ, ಮುಂತಾದ ಕಾರ್ಯಕ್ರಮಗಳಲ್ಲಿ ಒಳ್ಳೆಯ ಮೂಹೂರ್ತ, ಗಳಿಗೆ (ವೇಳೆ) ನೋಡುತ್ತಾರೆ. ಹಾಗೆಯೇ ಗತ ಕಾಲದಲ್ಲಿ ಯಾವುದೇ ಶುಭ ಕಾರ್ಯಗಳನ್ನು ಮಾಡುವುದಿಲ್ಲ. ಗೊದಲಿಗರ ಕಥೆಯಾದ 'ಸತ್ಯ ಶಿವಲೋಚನ'ದಲ್ಲಿ ಬೇಗನೆ ಮಗಳನ್ನು ಲಗ್ನ ಮಾಡಿಕೊಂಡು ಹೋಗಲು ರುದ್ರಸೇಕ ಮಾಹಾರಾಜ ಮಂತ್ರಿಗೆ ಹೇಳುತ್ತಾನೆ. ಅದೇರೀತಿ ಋತುಮತಿಯಾಗಿ ಮದುಯಾಗದೆ ಮಗಳು ಮನೆಯಲ್ಲಿದ್ದರೆ 'ಋತುವಾದ ಮಗಳು ಮನಿಯಾಗ ಇದ್ದರೆ ನಡುಮನಿಯಾಗ ಕಂಬ ಸುಟ್ಟಾಂಗೆ.'[೨೫] ಎಂದು ಹೇಳುತ್ತಾರೆ. ಮನೆಯಲ್ಲಿ ಹೆಣ್ಣುಮಗಳು ಋತುಮತಿಯಾಗಿದ್ದರೆ ಸಮಾಜದ ದೃಷ್ಟಿಯಲ್ಲಿ ಹೊರೆ ಎಂಬ ಭಾವವಿರುವುದು ಕಂಡುಬರುವುದು. ಸಂಪ್ರದಾಯಗಳ ಮೌಢ್ಯತೆಯಲ್ಲಿ, ಶುಭ ಕಾರ್ಯಗಳಲ್ಲಿ ಸಮಾಜವು ಲೋಪವಿಲ್ಲದ ಪವಿತ್ರತೆಯನ್ನು ಬಯಸುತ್ತದೆ. ಅದರಂತೆ ದೇಹದ ಯಾವುದೇ ಅಂಗವು ಊನವಾಗಿದ್ದರು

ಅದು ಪವಿತ್ರ ಕೆಲಸಕ್ಕೆ ದೋಷ ಎಂಬ ಮೂಢನಂಬಿಕೆಯ ಸಣ್ಣ ಎಳೆಯೊಂದಿದೆ. 'ಕುಳ್ಡೀನ ಲಗ್ನವಾದರೆ ಯಾವ ಕಾರ್ಯದಲ್ಲು ಬರುವುದಿಲ್ಲ'[೨೬] ಎಂದು ಶಿವಲೋಚನಳ ಪೋಟೋ ತೋರಿಸಿ ರಂಭಾವತಿಯು ನೀಲಕುಮಾರನಿಗೆ ಹೇಳುತ್ತಾಳೆ. 'ಪತಿಗೆ–ಸತಿ ಗತಿ, ಸತಿಯಳಿಗೆ ಪತಿ ಬಿಟ್ಟು ಸದ್ಗತೆಯಿಲ್ಲ.'[೨೭] ಎಂಬ ಮಾತಿನಂತೆ, ಸತಿ ಪತಿ ಒಂದಾದ ಭಕ್ತಿ ಶಿವ ಮೆಚ್ಚುವನು ಎಂಬಂತೆ ಮಂತ್ರಿಯು ಶಿವಲೋಚನಳಿಗೆ ಸಮಾದಾನ ಮಾಡುತ್ತಾನೆ. 'ಸೂಳಿದ್ರೂ ಸೂಳಿ ತಾಯಿ ಇರಬಾರ್ದ'[೨೮] ಎಂಬ ಶಾಸ್ತ್ರದಂತೆ ಮೋಸ, ಕಪಟತನವು ಸೂಳಿಗಿಂತಲೂ ಅವಳ ತಾಯಿಯಲ್ಲಿ ಹೆಚ್ಚು ಎಂಬ ಅರ್ಥದಲ್ಲಿದೆ. 'ಬೆಳಗಾಣೆದ್ದು ಬಂಜಿ ಮುಖ ನೋಡಬಾರದು'.[೨೯] ಎಂಬ ಮಾತು ರಾಜಾ ವೀರ ಪರಾಕ್ರಮ' ನ ಕಥೆಯಲ್ಲಿ ಪ್ರಜೆಗಳೆಲ್ಲ ಅರಮನಿಗೆ ಬಂದು ಬಂಜಿ ರಾಜಂದು ಚಾಕರಿ ಮಾಡಬಾರದು ಎನ್ನುತ್ತಾರೆ. ಕೌಟಂಬಿಕ ಹಾಗೂ ಸಮಾಜದ ದೃಷ್ಟಿಯಲ್ಲಿ ಬಂಜೆತನವೆಂಬುದು ಅಪಮೌಲ್ಯವಾಗಿ ಕಾಣುತ್ತದೆ. ನಾ ಎಂಬುದರಿಂದ ನರಕ ಎಂಬ ಮನೋಭಾವ ಗೊಂದಲಿಗರ ತತ್ವಪದದಲ್ಲಿ ಕಾಣಬಹುದು.

'ನಂಬಿಗೆ ಸಾಂಭಾ(ಶಿವ)ನ ಅರಮನೆ'[೩೦] ಎಂಬ ನಂಬಿಕೆಯಲ್ಲಿಯೇ ಗೊಂದಲಿಗರು ಬದುಕನ್ನು ಸಾಗಿಸುತ್ತಿದ್ದಾರೆ. ಇಂತಹ ಹಲವಾರು ನಾಣ್ಣುಡಿಗಳು ಅವರ ಬದುಕು ಹಾಗು ಕಥೆಗಳಲ್ಲಿ ಹಾಸುಹೊಕ್ಕಾಗಿವೆ.

### ೬.೮. ಜನಪ್ರದ ವಾಗ್ರೂಡಿಗಳು/ ನುಡಿಗಟ್ಟು

ಗೊಂದಲಿಗರು ಹೇಳುವ ಸತ್ಯ ಶೀಲಾವತಿ, ಪತಿವೃತಾ ಶಿವಲೋಚನ, ಬಾಳಭಿಕ್ಷಕ, ಶಂಖಿನಕುಮಾರ, ಪತಿವ್ರತಾ ಚಂದ್ರಲೇಖ ಹಲವಾರು ಕಥೆಗಳಲ್ಲಿ ಜನಪದರು ಹೇಳುವ ಅನೇಕ ನುಡಿಗಟ್ಟುಗಳು ಗೊಂದಲಿಗರ ಕಥನಗಳಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು.

೧. ಮುಗಿಲು ಹರಿದು ಬಿದ್ದಂಗಾಯಿತು.

೨. ಆರಕ್ಕೆ ಏರಲಿಲ್ಲ ಮೂರಕ್ಕೆ ಇಳಿಲಿಲ್ಲ.

೩. ನಡು ಮನ್ಯಾನ ಕಂಬ ಮುರಿತು.

೪. ಭೂಮಿ ಕೈಲಾಸ ಜೋಡು, ಮರ ಗಿಡ ಜೋಡು, ತಾಯಿ ಮಗ ಜೋಡು, ಸತಿ ಪತಿ ಜೋಡು.

೫. ಸದಾಶಿವಗ ಅಡದ್ಯಾಸ.

೬. ಪ್ರತ್ಯಕ್ಷ ಕಂಡರು ಪ್ರಮಾಣಿಸು.

೭. ಹೆಣ್ಣು ಬಾಳ ಸುಡಲಿ.

೮. ಒಳ್ಳೆಯವ ಸತ್ತ ಜಗತ್ತಿಗೆ ಕತ್ತಲಾದಂಗ , ಪಾಪಿಷ್ಟರ ಸತ್ತ ದೇವರಿಗೆ ದೀಪ

ಹಚ್ಚಿದಂಗ .

೬.೯.ಅನ್ಯಭಾಷಾ ಪದ ಪ್ರಯೋಗ.

ಗೊಂದಲಿಗರ ಕಥನಗಳಲ್ಲಿ ಅನೇಕ ಅನ್ಯಭಾಷಾ ಶಬ್ಧಗಳ ಬಳಕೆಯನ್ನು ಕಾಣುತ್ತೇವೆ. ಗೊಂದಲಿಗರು ಹಲವಾರು ಪ್ರದೇಶಗಳಲ್ಲಿ ಗೊಂದಲಗಳನ್ನು ಏರ್ಪಡಿಸುವುದರ ಮೂಲಕ ಭಾಷಾ ನೈಪುಣ್ಯತೆಯನ್ನು ಹೊಂದಿದ್ದಾರೆ. ಇವರ ಕಥನಗಳಲ್ಲಿ ಹೆಚ್ಚಾಗಿ ಮರಾಠಿ ಪದಗಳನ್ನು ಬಳಸಿದ್ದಾರೆ. ಇವರ ಕಥನಗಳಾದ ಮಹಾಸತಿ ಶಿವಲೋಚನ, ಪದ್ಮಾವತಿ, ಬಾಳಭಿಕ್ಷುಕ, ವಿಘ್ನಾವತಿ, ರಾಜಾವೀರ ಪರಾಕ್ರಮ ಮುಂತಾದ ಕಥೆಗಳಲ್ಲಿ ಈ ಪದಗಳು ಬಳಕೆಯಾಗಿವೆ. ಹಕೀಮ, ಪಕೀರ, ದರ್ಬಾರ, ಕಛೇರಿ, ರೋಜ್ಗಾರ್, ಸಿಬ್ಬಂಧಿ, ರೆಡಿ ಬಜಾರ, ರೇಟು, ಮಹಲ್, ಟೈಮು, ಗುಲಾಮ, ಚೋರಾ, ಕೇಸ್, ಚೆಲಜಾವ್, ಪೇಪರ, ಮಜಲ್, ಲಡಾಯಿ, ಆನಿಗಡತರ, ದೇಖರೇಕಿ, ಪೌಳಿ, ಗ್ಯಾರಂಟಿ, ಟೈಮು. ತುಬಾಕಿ, ಜವಾಟು, ಡ್ರೆಸ್ಸು ಪ್ಯಾಂಟು, ಪೋಸ್ಟು, ಬೆಲ್ಟು, ಬೋರ್ಡು, ರಿಸರ್ವಸೀಟು, ಹ್ಯಾಟು, ಬಂಗ್ಲಾ, ಚುಮಿನಿ, ಜೇಬು, ಇನಾಮು, ಚಾವಡಿ, ಪೋಟೋ ಡ್ರೇಸ್ಸ್, ಕಿದರ್ ಇದರಿಂದ ಕನ್ನಡಿಗರ ಭಾಷಿಕ ಅಂಶಗಳು, ಆಚಾರ–ವಿಚಾರಗಳು, ಹಬ್ಬ–ಹರಿದಿನಗಳು ಮರಾಠಿಗರಿಗೆ ಹಾಗೂ ಅವರಿಂದ ಕನ್ನಡಿಗರಿಗೆ ಸಾಂಸ್ಕೃತಿಕ ಬಳುವಳಿಯಾಗಿ ಬಂದಿರುವುದು ತಿಳಿದುಬರುತ್ತದೆ.

೬.೧೦.ಬೈಗಳುಗಳು

ಜನಪದರ ಬದುಕಿನಲ್ಲಿ ಜನಸಾಮಾನ್ಯರು ಸಾಂದರ್ಭಿಕವಾಗಿ ಬೈಗುಳುಗಳನ್ನು ಬಳಸುವುದು ಕಂಡು ಬರುತ್ತದೆ. ಈ ಬೈಗುಳಗಳು ಬೈಸಿಕೊಳ್ಳುವವನ ಹಾಗೂ ಬೈಯುವವನ ವ್ಯಕ್ತಿತ್ವವನ್ನು ಹಾಗೂ ಘಟನೆಯ ಪರಿಸ್ಥಿತಿಯನ್ನು ತಿಳಿಸುತ್ತವೆ. ಪಾತ್ರಗಳ ಸ್ವಭಾವ, ವೇಷ ಹಾಗೂ ಸಂದರ್ಭಕ್ಕೆ ತಕ್ಕಂತೆ ಬೈಗುಳಗಳನ್ನು ಪ್ರಯೋಗಿಸುವುದರಿಂದ ಅವು ಅಶ್ಲೀಲವೆನಿಸದೆ ಇರಬಹುದು. ಉದಾಹರಣೆ 'ಮಹಾಸತಿ ಶಿವಲೋಚನ' ಕಥೆಯಲ್ಲಿ ರಂಭಾವತಿ ಮನೆಯಲ್ಲಿದ್ದ ನೀಲಕುಮಾರನ್ನು ಮಂತ್ರಿ ಕರೆಯಲು ಬಂದಾಗ, ನೀಲಕುಮಾರನು ಲೌಡಿ ಮಗ, ಗುಲಾಮ್‌ಚೋರ್ ಎಂದು ಬೈಯುತ್ತ ಮಂತ್ರಿಯನ್ನು ಬಡಿದು ಹೊರಗೆ ಅಟ್ಟುತ್ತಾನೆ. 'ಸತ್ಯಶೀಲಾವತಿ' ಕಥೆಯಲ್ಲಿ ದುರ್ಜಯನ ಕೆಟ್ಟವರ್ತನೆಯನ್ನು ಕಂಡು ಶೀಲಾವತಿ ಸಿಟ್ಟಿಗೆದ್ದು ಬಾಯಾಗ ಮಣ್ಣಹಾಕ, ಮನಘಾತಕ, ಕುಲಘಾತುಕ, ವಿಷಘಾತುಕ, ನೀಚಾತ್ಮಾ, ಚಂಡಾಲ ಎಂದು ಬೈಯುತ್ತಾಳೆ.

೬.೧೧.ಭಾಷಾ ಅಲಂಕಾರಿಕ ಪದಗಳು

ಗೊಂದಲಿಗರ ಕಲಾವಿದರು ಕಥೆ ಹೇಳುವಾಗ ಅರ್ಥಗರ್ಭಿತವಾದ ಹಲವಾರು ಅಲಂಕಾರಿಕ ರೂಪಕ ಪದಗಳನ್ನು ಬಳಸುತ್ತಾರೆ. ಇವು ಕಥನ ನಿರೂಪಣಾ ಶೈಲಿಯನ್ನು ಹೆಚ್ಚಿಸಿವೆ. ಕಥೆಯಲ್ಲಿ ಬರುವ ವೀರ ಪಾತ್ರಗಳನ್ನು ಹೀಗೆ ಹೋಗಳಿದ್ದಾರೆ. ಬಾಳಭಿಕ್ಷುಕ ಕಥೆಯಲ್ಲಿ ಬಾಳಭಿಕ್ಷುಕ ಗರಡಿ ಮನೆಯಲ್ಲಿ ರಾಜಕುಮಾರನೊಂದಿಗೆ ತಾಲಿಮ ಮಾಡುವಾಗ 'ಕತ್ತಿ–

ಕಠಾರಿ ಕೈ, ಬಿಲ್ಲು-ಬಾಣದ ಕೈ, ಹೋಡಿಯೋ ಕೈ, ಬಡಿಯೋ ಕೈ, ತಾಲಿಮ್, ಲೇಜಿಮ್, ಪೈಲ್ವಾನ, ವೀರಾಧಿವೀರ, ಮಾಹಾಶೂರ.'[೩೧] ಹೀಗೆ ಬಾಳಭಿಕ್ಷುಕನ ಶೂರತನವನ್ನು ಹೊಗಳುತ್ತಾರೆ.

ಸುಂದರವಾದ ಸ್ತ್ರೀ ಪಾತ್ರಗಳ ವರ್ಣನೆ ಮಾಡುವಾಗ ಈ ಅಲಂಕಾರಿಕ ಪದಗಳನ್ನು ಬಳಸಿದ್ದಾರೆ. ಉದಾಹರಣೆ ಮಹಾಸತಿ ಶಿವಲೋಚನ ಕಥೆಯಲ್ಲಿ ಶಿವನ ಶಾಪದಿಂದ ಮರ್ತ್ಯ ಲೋಕಕ್ಕೆ ಕೂಸಾಗಿ ಬಂದ ಶಿವಲೋಚನಳ ಸೌಂದರ್ಯವನ್ನು "ಊರ್ವಶಿಯೋ, ಮೇನಕೆಯೋ, ರಂಭೆಯೋ, ರತಿಯೋ, ದೇವಲೋಕದ ಕನ್ಯೆಯೋ, ತಿಲೋತ್ತಮೆಯೋ, ಕಣ್ಣು ಕವಳೀ ಹಣ್ಣು ಮೂಗು ಸಂಪಿಗೆ ತೆನಿ, ಹಲ್ಲು ದಾಳಿಂಬ್ರ ಹಣ್ಣು, ಹುಬ್ಬು ಕಾಮನ ಬಿಲ್ಲು, ಪಾದದಲ್ಲಿ ಪದ್ಮ ರೇಖೆ, ಕೈಯಲ್ಲಿ ಧನರೇಖೆ, ಮಸ್ತಕಸದಲ್ಲಿ ಮಾಣಿಕ್ಯ ರೇಖೆ"[೩೨] ಎಂದು ವರ್ಣಿಸಲಾಗಿದೆ. ಇಂತಹ ವಿಶಿಷ್ಟ ಪದಗಳ ಬಳಕೆ ಮಾಡಿ ಗೊಂದಲಿಗರು ತಮ್ಮ ಕಥನ ಸಾಹಿತ್ಯದ ಸೊಬಗನ್ನು ಹೆಚ್ಚಿಸಿದ್ದಾರೆ.

### ಅಡಿಟಿಪ್ಪಣಿಗಳು

೧. ಗಂಗಾಧರ ದೈವಜ್ಞ, ಗೊಂದಲಿಗರು, ೨೦೧೦, ಪು.ಸಂ ೬೬.

೨. ವಿರೇಶ. ಶೇ. ಬಡಿಗೇರ. ಉತ್ತರ ಕರ್ನಾಟಕ ಜನಪದ ಗೀತಮೇಳಗಳು, ೧೯೯೯, ಪು.ಸಂ. ೧೩೦.

೩. ವೆಂಕಪ್ಪ ಹಾಗು ಪಾಂಡುರಂಗ ಸುಗತೇಕರ, ಬಾಗಲಕೋಟ ಕಲಾವಿದರಿಂದ ಸಂಗ್ರಹ.

೪. ಶಾಂತಪ್ಪ ಹಾಗೂ ದ್ಯಾಮಣ್ಣ ಗುಡಕರ ಕುಂದಗೋಳ ಕಲಾವಿದರಿಂದ ಸಂಗ್ರಹ.

೫. ವಿಠ್ಠಲ. ಗಣಪತಿ. ಗೊಂದಳಿ. ವಿಜಯಪುರ ಕಲಾವಿದರಿಂದ ಸಂಗ್ರಹ.

೬. ವಿರೇಶ. ಶೇ. ಬಡಿಗೇರ. ಉತ್ತರ ಕರ್ನಾಟಕ ಜನಪದ ಗೀತಮೇಳಗಳು, ೧೯೯೯. ಪು.ಸಂ.೧೩೪.

೭. ಸಂಗಪ್ಪ. ದುಂಡಪ್ಪ. ಗೊಂದಳಿ. ಯಲ್ಪಾರಟ್ಟಿ. ತಾ. ರಾಯಬಾಗ. ಕಲಾವಿದರಿಂದ ಸಂಗ್ರಹ.

೮. ವಿರೇಶ. ಶೇ. ಬಡಿಗೇರ. ಉತ್ತರ ಕರ್ನಾಟಕ ಗೀತಮೇಳಗಳು, ೧೯೯೯ ಪು.ಸಂ ೧೩೪.

೯. ರಾಮು. ಇಂಗಳೆ. ರಾಮಪುರದ ಕಲಾವಿದರಿಂದ ಸಂಗ್ರಹ.

೧೦. ಶಂಕ್ರವ್ವ, ಗೊಂದಳಿ. ಕೋಡಿಹಾಳ ಅವರಿಂದ ಸಂಗ್ರಹ.

೧೧. ಶಂಕ್ರವ್ವ ಹಾಗೂ ಯಲ್ಲವ್ವ, ಕೋಡಿಹಾಳ ಅವರಿಂದ ಸಂಗ್ರಹ.

೧೨. ಶಿವಪ್ರಕಾಶ. ಎಂ.ಎಂ. ನಾಡೋಜ ಮುದೇನೂರು ಸಂಗಣ್ಣ, ೨೦೧೦, ಪು.ಸಂ.೧೪.

೧೩. ನಾವಲಗಿ. ಸಿ.ಕೆ ಜಾನಪದ ಸಡಗರ, ೨೦೧೧, ಪು.ಸಂ ೬೫.

೧೪. ಮುದೇನೂರು ಸಂಗಣ್ಣ. ಗೊದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩, ಪು.ಸಂ ೪.

೧೫. ಅದೇ ಪು.ಸಂ ೩೧.

೧೬. ಅದೇ ಪು.ಸಂ ೧೨೦.

೧೭. ಅದೇ ಪು.ಸಂ ೧೨೪.

೧೮. ಅದೇ ಪು.ಸಂ ೧೨೫.

೧೯. ಅದೇ ಪು.ಸಂ ೧೨೧.

೨೦. ಅದೇ ಪು.ಸಂ ೨೨೫

೨೧. ಅದೇ ಪು.ಸಂ ೦೭.

೨೨. ಕನಕಪ್ಪ ಗುಡಕರ, ಕುಂದಗೋಳ ಗ್ರಾಮ, ಕಥೆ-ಶಂಖಿನಕುಮಾರ.

೨೩. ಅದೇ ಪು.ಸಂ ೦೯.

೨೪. ಅದೇ ಪು.ಸಂ ೩೩.

೨೫. ಅದೇ ಪು.ಸಂ ೩೩.

೨೬. ಅದೇ ಪು.ಸಂ ೩೮.

೨೭. ಅದೇ ಪು.ಸಂ ೫೧.

೨೮. ಅದೇ ಪು.ಸಂ ೫೬.

೨೯. ಅದೇ ಪು.ಸಂ ೨೨೫.

೩೦. ಕಲಾವಿದ ವೆಂಕಪ್ಪ, ಸುಗತೇಕರ. ಕಥೆ-ಪತಿವ್ರತಾ ಚಂದ್ರಲೇಖ.

೩೧.ಮುದೇನೂರು ಸಂಗಣ್ಣ, ಗೊದಲಿಗರ ದೇವೇಂದ್ರಪ್ಪನವರ ಆಟಗಳು, ೧೯೯೩, ಪು.ಸಂ ೧೫೩.

೩೨. ಅದೇ ಪು.ಸಂ ೩೦.

## ಅಧ್ಯಾಯ ೭

# ಗೊಂದಲ ವೃತ್ತಿ ಕಲಾವಿದರ ಸ್ಥಿತಿಗತಿಗಳು

### ೭.೧ ಪೀಠಿಕೆ

ಗೊಂದಲಿಗರು ವೃತ್ತಿಗಾಯಕರ ಪಂಗಡದಲ್ಲಿ ಬರುವ ಒಬ್ಬ ಜನಪದ ದೈವಿಗಾಯಕರಾಗಿದ್ದಾರೆ. ಭಕ್ತಿ – ಭಾವ, ಶಕ್ತಿ ಪ್ರದರ್ಶನ, ನೀತಿಪರ ಹಿತನುಡಿಗಳು, ಸಾಮಾಜಿಕ ಕಳಕಳಿ, ಪೌರಾಣಿಕ ಕಥಾವಸ್ತುವಿನ ಮುಂದುವರಿಕೆದಾರರು, ಭಾಷಾ ಪ್ರವೀಣರು, ಹಾಸ್ಯಗಾರರು, ಕಥೆಗಾರರು, ಸೃಜನಶೀಲರು, ಆದ ಇವರು ಕೇವಲ ಕಥೋಪಜೀವಿಗಳು ಮಾತ್ರವಲ್ಲ ಜನಪದ ಸಾಹಿತ್ಯದ, ನಿಧಿಗಳಾಗಿದ್ದಾರೆ. ಇಂಥಹ ಕಲಾವಿದರನ್ನು ಕೇವಲ ಕಥೋಪಜೀವಿಗಳೆಂದು ಕರೆಯದೇ 'ವೃತ್ತಿಗಾಯಕರೆಂದು' ಕರೆಯಲಾಗಿದೆ. ಜೀಶಂಪ ಅವರು ತಮ್ಮ "ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು" ಎಂಬ ಕೃತಿಯಲ್ಲಿ ' Ministrels' ಎಂಬ ಇಂಗ್ಲೀಷ ಪದಕ್ಕೆ ಕನ್ನಡದಲ್ಲಿ 'ವೃತ್ತಿಗಾಯಕರು' ಎಂಬ ಸಂವಾದಿ ಪದವನ್ನು ಮೊದಲ ಬಾರಿಗೆ ಪ್ರಯೋಗಿಸಿದ್ದಾರೆ. ಈ ಪದವೇ ಈಗಲೂ ಬಳಕೆಯಲ್ಲಿದೆ. 'ಕಥೋಪಜೀವಿಗಳು' 'ಲಾವಣಿಕಾರರು' ಎಂದು ಇವರು ಪ್ರಯೋಗಿಸಿದ್ದುಂಟು, ಆದರೆ ಇವೆಲ್ಲವುಗಳಿಗಿಂತ ಶಬ್ಧದ ಅರ್ಥವ್ಯಾಪ್ತಿ, ವಿಸ್ತೃತತೆಯ ದೃಷ್ಟಿಯಿಂದ 'ವೃತ್ತಿಗಾಯಕರು' ಎಂಬ ಪದವೇ ಅರ್ಥಗರ್ಭಿತ ಎಂದಿದ್ದಾರೆ. ಕಾರಣ ಕಥೆ ಹೇಳುವುದನ್ನೇ ಕಾಯಕ ಮಾಡಿಕೊಂಡವರು. ಅಂಥವರಲ್ಲಿ ಗೊಂದಲಿಗರು ಒಬ್ಬರಾಗಿದ್ದಾರೆ. ತಮ್ಮ ಕಾವ್ಯ ಅಥವಾ ಹಾಡುಗಳ ಮೂಲಕ ಕಥೆಗಳನ್ನು ಹೇಳುವ ಇವರಿಗೆ ಕಥೆಯೇ ಪ್ರಾಧಾನ್ಯ ವಸ್ತುವಾಗಿರುತ್ತದೆ. ಹೊರತು ಕಾವ್ಯವಲ್ಲ. ಇವರ ಕಾವ್ಯಗಳಲ್ಲಿ ಕಥೆಗಳನ್ನು ನಿರೀಕ್ಷಿಸಬಹುದು ಹೊರತು ಕಾವ್ಯ ಸತ್ವವನ್ನಲ್ಲ. ಗೊಂದಲಿಗರು ಕಥೆಗಾಗಿ ಇಲ್ಲಿ ವೃತ್ತಿಗಾಯಕರಾಗಿರುತ್ತಾರೆ. ಕಥೆಗಳಿಗೆ ಹೊಸ ಆಯಾಮಗಳನ್ನು ನೀಡಿ ಹಾಡುವ ಪ್ರಯತ್ನದ ಜೊತೆಗೆ ಕಥಾ ನಿರೂಪಣೆಯನ್ನು ಹಿತಗೊಳಿಸಲು ಅವರು ಸಂಗೀತ ವಾದ್ಯಗಳನ್ನು ಬಳಸುತ್ತಿರುವುದು ಕಂಡು ಬರುತ್ತದೆ. ಇದಕ್ಕೆ ಇನ್ನಷ್ಟು ಇವರ ಹಾಡುಗಳು ಸರಳ ಮೃದುವಾಗಿರುತ್ತವೆ. ಕಥನ ಕಾವ್ಯವನ್ನು ಹಾಡದೆಯೇ ಕೇವಲ ಓದಿದಂತೆ ಮಾಡಿದಾಗ ಅದು ಸಾಮಾನ್ಯ ಗದ್ಯವಾಗಿದ್ದು

ಅದು ಒರಟು ಭಾಷೆಯಲ್ಲಿ ಕೃತಕ ರೀತಿಯಲ್ಲಿ ಹೆಣೆದುಕೊಂಡಂತೆ ತೋರುತ್ತದೆ. ಅದಕ್ಕಾಗಿ ಗೊಂದಲಿಗರು ಕಥಾ ಕೌಶಲ್ಯವು ಪದ್ಯ ಹಾಗೂ ಗದ್ಯದಿಂದ ಕೂಡಿದೆ. ಗೊಂದಲಿಗರ ಕಥನವನ್ನು ಒಂದು ರೀತಿಯ ಚಂಪೂ ಎಂದೂ ಹೇಳಬಹುದು. ಕಥೆಗಳಲ್ಲಿಯ ಪಾತ್ರಗಳ ದಿಟ್ಟತನ ಮತ್ತು ಕಥಾ ಪ್ರಸಂಗವನ್ನು ಜನರ ಮನಮುಟ್ಟಿಸುವಲ್ಲಿ ಗೊಂದಲಿಗರ ಸಾಹಿತ್ಯ ಕೆಲಸ ಮಾಡುತ್ತದೆ. ಅದಕ್ಕಾಗಿ ಇವರು ಗೊಂದಲದ ಕಥಾಸಾಹಿತ್ಯದ ನಿರೂಪಣೆಯಲ್ಲಿ ಹಾವಭಾವ ನೃತ್ಯ, ಹಾಸ್ಯ ಮುಂತಾದ ನಾಟಕೀಯ ಕ್ರಿಯೆಗಳು ಕಂಡು ಬರುತ್ತವೆ. ಈ ಕಾರಣಗಳಿಂದ ಗೊಂದಲಿಗರ ಕಥಾಸಾಹಿತ್ಯ ವನ್ನು ಚಂಪೂ ಸಾಹಿತ್ಯ ಎಂದು ಕರೆಯಬಹುದು.

ಗೊಂದಲಿಗರು ಗೊಂದಲದ ಪ್ರಸಂಗದಲ್ಲಿ ಸೃಷ್ಟಿಸುವ ಸಾಮಾಜಿಕ ಕಳಕಳಿ ಮತ್ತು ನೀತಿ ಹೇಳುವ ಉದ್ದೇಶಗಳಿರುವುದು ಸ್ಪಷ್ಟವಾಗಿ ಗೋಚರಿಸುತ್ತವೆ. ಇವರ ಕಥೆಗಳನ್ನು ಗಮನಿಸಿದಾಗ ಅವು ಸಮಾಜಕ್ಕೆ ಹಿಡಿದ ಕೈಗನ್ನಡಿಯಂತಿವೆ. ಇಂದಿನ ಸಾಮಾಜಿಕ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ತಮ್ಮ ಕಥೆಗಳ ಮೂಲಕ ಸೂಕ್ಷ್ಮವಾಗಿ ವಿಶ್ಲೇಷಿಸುವ, ವಿಮರ್ಶಿಸುವ ಕೆಲಸವನ್ನು ಇವರು ಮಾಡುತ್ತಿದ್ದಾರೆ ಎಂದು ಹೇಳಬಹುದು. ಧಾರ್ಮಿಕ ವೃತ್ತಿಗಾಯಕರಾದ ಇವರು ತಾವು ನಂಬಿದ ದೈವದ ಆರಾಧನೆಯ ಜೊತೆಗೆ ಮನುಕುಲದಲ್ಲಿ ಜಾಗ್ರತೆ ಉಂಟುಮಾಡುವ ಕಾರ್ಯವನ್ನು ನಿರಂತರವಾಗಿ ಮಾಡುತ್ತ ಬಂದಿದ್ದಾರೆ ಎಂದು ಹೇಳಬಹುದು. ಧರ್ಮ, ದೈವಭಕ್ತಿ, ನಂಬಿಕೆ, ಆಚಾರ, ವಿಚಾರಗಳು, ಸಂಪ್ರದಾಯಗಳನ್ನು ಜನರಲ್ಲಿ ಬಿತ್ತುವ ಕಾರ್ಯ ಇವರಿಂದ ನಡೆಯುತ್ತದೆ. ಮನೋ ಅಭಿಲಾಷೆಯ ಮೂಲಕ ತಮ್ಮ ಕಾಯಕದ ಮಹತ್ವವನ್ನು ಗೊಂದಲಿಗರು ಸಾರುತ್ತಾರೆ. ಜೊತೆಗೆ ಇವರು ತಮ್ಮ ಕಾಯಕದಲ್ಲಿ ಜನಪದ ಇತಿಹಾಸವನ್ನು ಕೆದಕುವ ಹಾಗೂ ಉಳಿಸುವ ಕಾರ್ಯ ಮಾಡುತ್ತಿದ್ದಾರೆ. ಕನಕದಾಸ, ಪುರಂದರದಾಸ, ಬಸವಣ್ಣ, ಶಿಶುನಾಳ ಶರೀಫ, ದುರದುಂಡೇಶ್ವರ ಮುಂತಾದ ಅನೇಕ ಅನುಭಾವಿ ಸಂತರ ತತ್ವಪದಗಳನ್ನು, ನೀತಿಪದಗಳನ್ನು ಸಾರುವ ಹಾಗೂ ಅವುಗಳಲ್ಲಿಯ ತತ್ವಗಳನ್ನು ಜೀವಂತವಾಗಿರುಸುವಲ್ಲಿ ಇವರ ಪಾತ್ರ ದೊಡ್ಡದು ಎಂದು ಹೇಳಬಹುದು. ಜನಪದರ ಸೊಬಾನೆ ಪದ, ಕೋಲಾಟ, ಜೋಗುಳ ಪದ, ಮತ್ತು ನವಿರಾದ ಹಾಸ್ಯಗಳನ್ನು ತಮ್ಮ ಸಾಹಿತ್ಯದಲ್ಲಿ ಹೇಳುತ್ತಾರೆ. ನೀತಿ ಪ್ರಧಾನವಾದ ಕಥೆಗಳಿಂದ ಜನರಲ್ಲಿ ನೈತಿಕ ಮೌಲ್ಯ ಬಿತ್ತುತ್ತಿರುವ ಗೊಂದಲಿಗರು, ಇಂದಿನ ಆಧುನಿಕ ಸಮಯದಲ್ಲಿ ನೈತಿಕತೆಯ ಅಂಧಃಪತನವನ್ನು ಕಂಡು ರೋಸಿಹೋಗಿದ್ದಾರೆ. ಅದಕ್ಕಾಗಿಯೇ ತಮ್ಮ ಕಥನಗಳಲ್ಲಿ ಆಧುನಿಕತೆ, ರಾಜಕೀಯ, ವಿಜ್ಞಾನ ಮುಂತಾದ ವಾಸ್ತವಿಕ ಅಂಶಗಳನ್ನು ವಿಡಂಬನೆ ಮಾಡುವುದನ್ನು ಕಾಣುತ್ತೇವೆ. ಉದಾಹರಣೆ

'ಇದ್ದ್‌ದ ಇದ್ದಂಗ ಹೇಳತಿನ್ರಿ
ತಿದ್ದಿಕೊಳ್ರಿ ನೀವು ಮೊದಲ
ಪಾಪ ಹೆಚ್ಚಾಗಿ ಧರ್ಮ ಉಳಿದಿಲ್ಲ

ಕಲತವ್ರಿಗಿ ನಾಚಿಕಿಲ್ಲರಿ'[9]

ಆಧುನಿಕತೆಯಲ್ಲಿ ಧರ್ಮದ ಅಳಿವು-ಉಳಿವು, ಪಾಪ ಪ್ರಜ್ಞೆಯ ಬಗ್ಗೆ ಅರಿವು ಮೂಡಿಸುತ್ತಾರೆ. ಪುರಾಣ, ಜನಪದ, ಶಿಷ್ಟ ಸಾಹಿತ್ಯವನ್ನು ಬಳಸಿಕೊಂಡು ಜನಪದರಿಗೆ ಮನಮುಟ್ಟುವಂತೆ ತಮ್ಮದೇ ಆದ ಸಾಹಿತ್ಯ ಸೃಷ್ಟಿಸಿ ಜನರ ಮುಂದೆ ಪ್ರದರ್ಶನ ಮಾಡುತ್ತಿದ್ದ ಗೊಂದಲಿಗರು ಇಂದು ಅಸ್ತಿತ್ವ ಉಳಿಸಿಕೊಳ್ಳಲು ಹೋರಾಡುತ್ತಿದ್ದಾರೆ. ಅಲೆಮಾರಿ, ಅರೆಅಲೆಮಾರಿ ಬದುಕಿನಿಂದ ಇಂದು ಒಂದು ಕಡೆ ನೆಲೆನಿಲ್ಲುವ ಕ್ರಿಯೆ ನಡೆದಿದೆ. ಊರ ಹೊರಗೆ ಬಿಡಾರ ಹೂಡುತ್ತಿದ್ದ ಅವರು ತಮ್ಮ ಬದುಕಿಗೊಂದು ಅರ್ಥಕಲ್ಪಿಸಿಕೊಳ್ಳುವ ನಿಟ್ಟಿನಲ್ಲಿ ಹೋರಾಡುತ್ತಿದ್ದಾರೆ. ವಸತಿ, ಶಿಕ್ಷಣ ಮುಂತಾದ ಮೂಲಭೂತ ಸೌಲಭ್ಯಗಳನ್ನು ಪಡೆದು ಸಮಾಜದ ಮುಖ್ಯವಾಹಿನಿಗೆ ಬರಲು ಪ್ರಯತ್ನಿಸುತ್ತಿದ್ದಾರೆ. 'ಎಂ.ಎಂ.ಮದರಿಯವರ ತಂದೆ ಹಾಡುಗಳನ್ನು ಗೀಗಿ ಪದಗಳನ್ನು ಹೇಳುತ್ತ ಅಲೆಮಾರಿಯಾಗಿದ್ದರೂ ಮಗನ ಶಿಕ್ಷಣ ಸಲುವಾಗಿ ಆಲೂರಿನಲ್ಲಿ ನೆಲೆಯೂರಿದ್ದನ್ನು ಮದರಿಯವರು ತಮ್ಮ ಆತ್ಮಕಥನ 'ಗೊಂದಲಿಗ್ಯಾ' ದಲ್ಲಿ ನೆನಪಿಸಿಕೊಂಡಿದ್ದಾರೆ. ಕಾಲ ಕಳೆದಂತೆ ಅನೇಕ ಗೊಂದಲಿಗರು ಸಾಮಾಜಿಕ ಪ್ರಜ್ಞೆ ಬೆಳೆಸಿಕೊಂಡು ಒಂದು ಕಡೆ ನೆಲೆವೂರಿ ಬದುಕಲು ಪ್ರಾರಂಭಿಸಿದ್ದಾರೆ ಮತ್ತೆ ಕೆಲವರು ಆಧುನಿಕ ಬದುಕಿಗೆ ಹೊಂದಿಕೊಳ್ಳಲಾಗದೆ ಯಥಾ ಸ್ಥಿತಿಯಲ್ಲಿದ್ದಾರೆ. ಸಂಪ್ರದಾಯವಾದಿಗಳು ಬದಲಾವಣೆ ಪ್ರಕ್ರಿಯೆಗೆ ಸ್ಪಂದಿಸದೆ ದೂರ ಉಳಿದಿದ್ದಾರೆ. ಕೆಲವರು ಶಿಕ್ಷಣದ ಸೌಲಭ್ಯ ಪಡೆಯದೆ ಬಡತನದಲ್ಲಿ ಬಳಲುವವರ ಸಂಖ್ಯೆ ಹೆಚ್ಚಾಗಿರುವುದು ಕಂಡು ಬರುತ್ತದೆ. ಕೆಲವರು ತಮ್ಮ ವೃತ್ತಿಯಲ್ಲೇ ತೃಪ್ತಿಕಂಡವರು ಇಂದು ಆಧುನಿಕ ಬದುಕಿನೊಂದಿಗೆ ಹೋರಾಟಕ್ಕೆ ಇಳಿಯಬೇಕಾಗಿದೆ. ಗೊಂದಲವನ್ನೇ ನಂಬಿ ತಮ್ಮ ಬದುಕನ್ನು ಸಾಗಿಸುತ್ತಿರುವ ಅನೇಕ ಕುಟುಂಬಗಳ ಸ್ಥಿತಿ ಶೋಚನಿಯವಾಗಿದೆ. ಇಂದು ಇವರು ಗೊಂದಲ ಕಾರ್ಯದ ಜೊತೆಗೆ ಇತರೆ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಕೌದಿ ಹೊಲೆಯುವುದು, ಪಾತ್ರೆ ಮಾರುವುದು, ಕೃಷಿ ಮತ್ತು ಕೃಷಿಕೂಲಿ, ಜ್ಯೋತಿಷ್ಯ, ಗಿಳಿಶಾಸ್ತ್ರ ಹೇಳುವ ಮುಂತಾದ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಜೀವನ ನಿರ್ವಹಣೆಯಲ್ಲಿ ಗೊಂದಲಿಗರ ಮಹಿಳೆಯರ ಪಾತ್ರ ಮುಖ್ಯವಾಗಿರುವುದು ಕಂಡು ಬರುತ್ತದೆ. ಪುರುಷರು ಕೃಷಿ ಅಥವಾ ಕೂಲಿಗೆ ಹೋದರೆ ಮಹಿಳೆಯರು ಕೌದಿ ಹೊಲಿಯುವ ಮತ್ತು ಪಿನ್, ಹೇರಪಿನ್, ಬಲೂನ್, ಸೂಜಿ, ದಾರ, ಸ್ನೋ, ಪೌಡರ, ರಿಬ್ಬನ್, ಕನ್ನಡಿ, ಕುಂಕುಮ ಮುಂತಾದ ವಸ್ತುಗಳನ್ನು ಮಾರಾಟ ಮಾಡುತ್ತಾರೆ.

ಕೋಡಿಹಾಳ ಗ್ರಾಮದಲ್ಲಿ ೨೦೦ರಿಂದ ೩೦೦ ಮನೆಗಳಿದ್ದು ಅಲ್ಲಿ ಬೋಜರಾಜ ಗೋಂಧಳಿಯವರು ಒಬ್ಬರೇ ಗೋಂಧಳ ಕಾರ್ಯನಿರ್ವಹಿಸುತ್ತಿದ್ದಾರೆ. ಗೋಂಧಳದ ಜೊತೆಗೆ ಜ್ಯೋತಿಷ್ಯ ಹೇಳುತ್ತಾರೆ. 'ಕೇವಲ ಗೊಂದಲ ಕಾರ್ಯದಿಂದ ನಮ್ಮ ಕುಟುಂಬ ನಿರ್ವಹಿಸಲು ಸಾಧ್ಯವಿಲ್ಲ ಅದರ ಜೊತೆಗೆ ಉಪವೃತ್ತಿಯನ್ನು ಹೊಂದಿದ್ದೇನೆ ಎಂದು ಹೇಳುತ್ತಾರೆ.' ಅಲ್ಲಿಯ

ಬಹಳಷ್ಟು ಗೊಂದಲಿಗ ಹೆಣ್ಣು ಮಕ್ಕಳು ಕೌದಿ ಹೊಲಿಯುತ್ತಿರುವುದನ್ನು ಕಾಣಬಹುದು. ೧೨ರಿಂದ ೧೫ ದಿನಗಳಿಗೊಂದು ಕೌದಿ ಹೊಲಿದು ಕೊಡುತ್ತಾರೆ. ಈ ಹಿಂದೆ ಒಂದು ಕೌದಿ ಹೊಲೆಯಲು ೬೦ ರಿಂದ ೮೦ ರೂ. ಪಡೆಯುತ್ತಿದ್ದರು. ಇಂದು ೧೦೦ ರಿಂದ ೧೫೦ ರೂ. ಗಳ ವರೆಗೆ ಹಣ ಪಡೆಯುತ್ತಾರೆ. ಕೆಲ ಪುರುಷರು ಹಾಗೂ ಮಹಿಳೆಯರು ಪಾತ್ರೆ ವ್ಯಾಪಾರ ಮಾಡುತ್ತಾರೆ. ಅಲ್ಯೂಮಿನಿಯಂ, ಸ್ಟೀಲ್ ಪಾತ್ರೆಗಳನ್ನು ತಲೆಯ ಮೇಲೆ ಹೊತ್ತು ಮಾರಾಟ ಮಾಡಲು ಊರೂರು ಅಲೆಯುತ್ತಾರೆ. ಬಿಸಿಲು ಮಳೆಯನ್ನದೇ ಮುಂಜಾನೆಯಿಂದ ಸಂಜೆಯವರೆಗೆ ವ್ಯಾಪಾರ ಮಾಡುತ್ತಾರೆ.

ಇತ್ತೀಚಿನ ದಿನಗಳಲ್ಲಿ ಕೆಲ ಗೊಂದಲಿಗರ ಜೀವನ ಶೈಲಿಯಲ್ಲಿ ಬದಲಾವಣೆ ಕಂಡು ಬರುತ್ತಿದೆ. ಆಧುನಿಕತೆಗೆ ಅವರು ಸಹ ಒಳಗಾಗುತ್ತಿದ್ದಾರೆ. ಸ್ತ್ರೀ ಪುರುಷರ ವೇಷ ಭೂಷಣಗಳಲ್ಲಿ ಫ್ಯಾಷನ್ ಕಂಡು ಬರುತ್ತಿದೆ. ಶಿಕ್ಷಣಕ್ಕೂ ಅವರು ಒತ್ತು ಕೊಡುತ್ತಿದ್ದಾರೆ. ಅಲ್ಪ ಪ್ರಮಾಣದಲ್ಲಿ ಶಿಕ್ಷಣದ ಅರಿವು ಅವರಲ್ಲಿ ಮೂಡಿದೆ ಎಂದು ಹೇಳಬಹುದು. 'ತಮ್ಮಂತೆ ತಮ್ಮ ಮಕ್ಕಳು ಶಿಕ್ಷಣದಿಂದ ವಂಚಿತರಾಗಬಾರದೆಂದು ಶಾಲೆಗೆ ಕಳುಹಿಸುತ್ತಿದ್ದೇನೆ ಮತ್ತು ಬಿಡುವಿದ್ದಾಗ ಮಾತ್ರ ಗೊಂದಲದ ಪದಗಳನ್ನು ಕಲಿಸುತ್ತೇನೆ.' ಎಂದು ರಾಮಪೂರದ ರಾಮು ಇಂಗಳೆಯವರು ತಮ್ಮ ಇಬ್ಬರು ಗಂಡು ಮಕ್ಕಳನ್ನು ಮುಂದೆ ಕುಳ್ಳರಿಸಿಕೊಂಡು ಈ ಮಾತನ್ನು ಹೇಳಿದರು. ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಅವರ ಒಬ್ಬ ಮಗ ಮಾತ್ರ ಗೊಂದಲ ಪದಗಳನ್ನು ಕಲಿಯುತ್ತಿದ್ದಾನೆ.

ಬಹುಕಾಲದಿಂದಲೂ ಒಂದೇ ಸ್ಥಳದಲ್ಲಿ ನೆಲೆನಿಂತ ಕೆಲ ಗೊಂದಲಿಗರು ಉತ್ತಮ ಸ್ಥಿತಿ ಹೊಂದಿದ್ದಾರೆ ಎಂದು ಹೇಳಬಹುದು. ಅವರ ಕುಟುಂಬದ ಮಕ್ಕಳು ಶಿಕ್ಷಣ ಪಡೆದು ವಿವಿಧ ಕ್ಷೇತ್ರದಲ್ಲಿ ಉದ್ಯೋಗ ಪಡೆದುಕೊಂಡಿದ್ದಾರೆ. ಅನೇಕರು ಡಾಕ್ಟರ, ಇಂಜನೀಯರ, ಸಾಫ್ಟವೇರ ಇಂಜನೀಯರ್, ಪ್ರೌಢಶಾಲಾ ಶಿಕ್ಷಕರಾಗಿ, ಕಾಲೇಜು ಉಪನ್ಯಾಸಕರಾಗಿ ಹಾಗೂ ವಿವಿಧ ಕಛೇರಿಗಳಲ್ಲಿ ಅನೇಕ ಸ್ಥಾನಗಳನ್ನು ಪಡೆದುಕೊಂಡಿದ್ದಾರೆ.

ಗೊಂದಲಿಗರಲ್ಲಿ ಬೆರಳೆಣಿಕೆಯ ಕುಟುಂಬಗಳು ಸ್ಥಿತಿವಂತರರಾಗಿರುವುದನ್ನು ಕಾಣುತ್ತೇವೆ. ಕೆಲವರು ಪಾತ್ರೆ ಮಾರಾಟದ ಅಂಗಡಿಗಳನ್ನು ಇಟ್ಟುಕೊಂಡು ಶ್ರೀಮಂತರಾಗಿದ್ದಾರೆ. ಇನ್ನು ಕೆಲವರು ಕೃಷಿಯಲ್ಲಿ ಹೆಚ್ಚಿನ ಯಶಸ್ಸನ್ನು ಕಂಡಿದ್ದಾರೆ. ಈ ಸಮುದಾಯವು ಸಂಘಟನೆಗಳನ್ನು ಕಟ್ಟಿಕೊಂಡು ಆಧುನಿಕತೆಯಲ್ಲಿ ತಮ್ಮ ಅಸ್ಥಿತ್ವ ಗುರುತಿಸಿಕೊಳ್ಳಲು ಬೇಕು ಬೇಡಗಳನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಿವೆ. ಹುಬ್ಬಳ್ಳಿಯ ಶ್ರೀಯುತ. ಪಿ. ಡಿ. ಸುಗತೆಯವರು 'ಗೊಂದಳ ಸಮಾಜ ಸಂಘ ಹುಬ್ಬಳ್ಳಿ' ಸ್ಥಾಪಿಸಿ ರಾಜ್ಯಾದ್ಯಾಂತ ಶಿಕ್ಷಣದ ಮತ್ತು ತಮ್ಮ ಹಕ್ಕುಗಳ ಅರಿವು ಹಾಗೂ ಸರ್ಕಾರದಿಂದ ಸಿಗುವ ಸವಲತ್ತುಗಳ ಬಗೆಗೆ ಅರಿವು ಮೂಡಿಸಲು ಪ್ರತಿ ತಿಂಗಳು ಸಭೆ ಕರೆಯುತ್ತಾರೆ. ಅದರ ಜೊತೆಗೆ ಗೊಂದಲಿಗರ ಕುಟುಂಬಗಳ ಜಿಲ್ಲಾ ಹಾಗೂ ತಾಲೂಕು

ಮಟ್ಟದಲ್ಲಿ ಗಣತಿ ಮಾಡಿಸಿ ತಮ್ಮ ಸಮುದಾಯದ ಜನಸಂಖ್ಯೆಯ ವಿವರಗಳನ್ನು ಕಲೆಹಾಕಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ಗೊಂದಲಿಗರ ಮಕ್ಕಳಿಗೆ ಶಿಕ್ಷಣವನ್ನು ಉಚಿತವಾಗಿ ಕಲ್ಪಿಸಿದ್ದಾರೆ.

ಇಂದು ಗೊಂದಲಿಗರ ಮಹಿಳೆಯರಲ್ಲೂ ಜಾಗೃತಿ ಮೂಡುತ್ತಿದೆ ಎಂದು ಹೇಳಬಹುದು. ಅನೇಕ ಪ್ರದೇಶಗಳಲ್ಲಿ ಮಹಿಳಾ ಸಂಘಟನೆಗಳು ಕಂಡು ಬರುತ್ತಿವೆ. ಸುಮಂಗಲಾ. ಎನ್. ದುಮ್ಮಾಳ, ಇವರು 'ಗೋಂಧಳಿ ಸಮಾಜ ಮಹಿಳಾ ಘಟಕ' ಎಂಬ ಹೆಸರಿನಲ್ಲಿ ಕೊಪ್ಪದಕೇರಿ ಧಾರವಾಡದಲ್ಲಿ ಒಂದು ಸಂಘಟನೆ ಸ್ಥಾಪಿಸಿ ಅದರ ಅಧ್ಯಕ್ಷರಾಗಿದ್ದಾರೆ. ಈ ಸಂಘಟನೆಯ ಮೂಲಕ ಮಹಿಳೆಯರ ಸಮಸ್ಯೆ, ಮಹಿಳೆಯರ ಆರ್ಥಿಕ ಸಭಲತೆ, ಮಹಿಳಾ ಆರೋಗ್ಯ, ಶಿಕ್ಷಣ, ಮಕ್ಕಳ ಶಿಕ್ಷಣ ಮುಂತಾದ ವಿಷಯಗಳನ್ನು ಕುರಿತು ಜಾಗೃತಿಯನ್ನುಂಟು ಮಾಡುತ್ತಿದ್ದಾರೆ. ಜಮಖಂಡಿ ಪುರಸಭೆಯ ಸದಸ್ಯರಾದ ಶ್ರೀಮತಿ.ಮೀನಾಕ್ಷಿ. ವಸಂತ. ಕಾಳೆ. ಹಾಗೂ ಮಂಗಳಾ ಸುಗತೆ, ಕಡಕಲಾಟ ಗ್ರಾಮ ಪಂಚಾಯಿತಿ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಕರ್ನಾಟಕ ಗಡಿಭಾಗದ ಮರಾಠಿ. ಗೊಂದಲಿಗರ ಮಹಿಳೆ ಕಲಾವತಿದೇವಿ, ಬೆಳಗಾಂವ ಇವರು ಸಮಾಜ ಹಾಗೂ ಮಹಿಳಾ ಸಬಲೀಕರಣಕ್ಕೆ ಪ್ರಮುಖ ಪಾತ್ರ ವಹಿಸುತ್ತಿದ್ದಾರೆ. ಗೊಂದಲಿಗರ ಮಹಿಳೆಯರು ಬೆರಳೆಣಿಕೆಷ್ಟು ಹೆಚ್ಚಿನ ಶಿಕ್ಷಣ ಪಡೆದು ವೈದ್ಯರಾಗಿ ಹಾಗೂ ಶಾಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿರುವುದು ಕಂಡು ಬರುತ್ತಿದೆ.

ಔದ್ಯೋಗಿಕರಣ, ಉದಾರೀಕರಣ, ಜಾಗತೀಕರಣ ಮುಂತಾದವುಗಳ ಪ್ರಭಾವಕ್ಕೆ ಒಳಗಾಗಿರುವ ಗೊಂದಲಿಗರಲ್ಲಿ ಪರಿವರ್ತನೆ ಗಾಳಿ ಬೀಸುತ್ತಿದೆ. ಹಾಗೂ ಅನೇಕ ಸಮೂಹ ಮಾಧ್ಯಮಗಳಾದ ದೂರದರ್ಶನ, ಚಲನಚಿತ್ರ, ಮೊಬೈಲ ಇವು ಇವರ ಮೇಲೆ ಪ್ರಭಾವ ಬೀರಿವೆ. ಕೇವಲ ಕುಲಕಸುಬಾದ ಗೊಂದಲ ಹಾಕುವುದರಿಂದ ಜೀವನ ನಿರ್ವಹಣೆ ಸಾಧ್ಯವಾಗದೆ ಇರುವುದರಿಂದ ಆಧುನಿಕತೆಯಲ್ಲಿ ಅಲ್ಪಸ್ವಲ್ಪ ಬದಲಾವಣೆ ತಂದುಕೊಳ್ಳುತ್ತಾ ಬದುಕುತ್ತಿರುವುದು ಅಲ್ಲಲ್ಲಿ ಕಂಡು ಬರುತ್ತಿದೆ. ಪಶುಪಾಲನೆ ಹಾಗೂ ಕೃಷಿ ಒಟ್ಟಿಗೆ ಬೆಳೆದು ಬಂದ ನಮ್ಮ ದೇಶದಲ್ಲಿ ಕಲೆಗಳು ಅದರ ಜೊತೆಯಲ್ಲಿಯೇ ಬೆಳೆದು ಬಂದಿವು ಎಂದು ಹೇಳಬಹುದು. ವಿಭಿನ್ನ ಸಂಸ್ಕೃತಿಯನ್ನು ಹೊಂದಿದ ಅನೇಕ ಕಲೆಗಳು ಮುಂದೆ ಬರಬರುತ್ತಾ ಅವು ಒಂದು ವೃತ್ತಿಯಾಗಿ ಮಾರ್ಪಟ್ಟವು. ಅನೇಕ ಅಲೆಮಾರಿ ಸಮುದಾಯಗಳು ತಮ್ಮಲ್ಲಿರುವ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡಿದ್ದರೂ ಇಂದಿನ ಆಧುನಿಕ ಸ್ಥಿತಿಯಲ್ಲಿ ಅದನ್ನು ಉಳಿಸಿಕೊಳ್ಳಲು ಸೆಣಸಾಡುತ್ತ ಸೋತು ಕೊನೆಗೆ ಕೃಷಿ ಮತ್ತು ಕೃಷಿಕೂಲಿಯನ್ನು ತಮ್ಮ ಬದುಕಿಗೆ ಆಧಾರ ಮಾಡಿಕೊಂಡ ಹಲವಾರು ಕುಟುಂಬಗಳಿವೆ. ಹೆಳವರು, ಕೊರವರು, ಗೊಂದಲಿಗರು, ಭೂತೇರು ಮುಂತಾದವರ ಕಲೆಯು ಸಹ ಈ ಆಧುನಿಕತೆಗೆ ತಲೆಬಾಗಿದಂತಿದೆ. ಬದಲಾದ ಸನ್ನಿವೇಶದಲ್ಲಿ ಪಾರಂಪರಿಕವಾಗಿ ಬೆಳೆದು ಬಂದ ಒಂದು ಸಾಂಸ್ಕೃತಿಕ ಮೌಲ್ಯಗಳನ್ನು

ಒಳಗೊಂಡಂತಹ ಕಲೆಗಳಲ್ಲಿ ಮೌಲ್ಯಗಳನ್ನು ಉಳಿಸಿಕೊಳ್ಳುವಲ್ಲಿ ತಲ್ಲಣಿಸಿವೆ. ಪೇಶ್ವೆಯವರ ಆಡಳಿತ ಕಾಲದಲ್ಲಿ ಉನ್ನತ ಸ್ಥಿತಿಯಲ್ಲಿದ್ದ ಗೊಂದಲ ಹಾಕುವ ಈ ಧಾರ್ಮಿಕ ವೃತ್ತಿ ಹಂತಹಂತವಾಗಿ ಕಡಿಮೆಯಾಗುತ್ತ ಬರುತ್ತಿದೆ. ಅಂದು ಅವರು ಪ್ರದರ್ಶಿಸುವ ಕಲೆಯಿಂದ ಜನರಲ್ಲಿ ಭಕ್ತಿ ಭಾವ, ಉಂಟಾಗುತ್ತಿತ್ತು. ಭಕ್ತಿ-ಮುಕ್ತಿ, ಪುರಾಣ, ಪುಣ್ಯಕಥೆ, ಚರಿತ್ರೆ, ಸಾಮಾಜಿಕ ವಿಡಂಬನೆ, ನೀತಿ ಪದಗಳು ಹಾಸ್ಯ ಮುಂತಾದ ವಸ್ತುಗಳನ್ನು ಒಳಗೊಂಡ ಕಥೆಗಳು ಜನರನ್ನು ಆಕರ್ಷಿಸುತ್ತಿದ್ದವು. ಅಂಬಾಭವಾನಿ, ತುಳಜಾ ಭವಾನಿಯನ್ನು ಯಾರ ತಮ್ಮ ಮನೆಗಳಲ್ಲಿ ದೈವವಾಗಿ ಸ್ವೀಕರಿಸಿ ಪೂಜಿಸುತ್ತಿದ್ದರೋ ಅವರು ಕಡ್ಡಾಯವಾಗಿ ಮಂಗಳ ಕಾರ್ಯ ನಡೆಯುವಾಗ ಗೊಂದಲ ಹಾಕಿಸಬೇಕು. ಎಂಬ ಪರಂಪರೆ ಬೆಳೆದು ಬಂದಿತ್ತು. ಇದರಿಂದ ಗೊಂದಲಿಗರ ಸರಳವಾಗಿ ಬದುಕು ಸಾಗಿಸುತ್ತಿದ್ದರು. ಆದರೆ ಇಂದು ಗೊಂದಲ ಹಾಕಿಸುವವರ ಸಂಖ್ಯೆ ಬಹಳಷ್ಟು ಕಡಿಮೆಯಾಗಿದೆ. ಕೆಲವರು ಗೊಂದಲ ಕಾರ್ಯವನ್ನು ದೇವಸ್ಥಾನಗಳಲ್ಲಿ ನಡೆಸಿಕೊಂಡು ಬರುತ್ತಾರೆ. ಇಂದು ಕೆಲವರು ಗೊಂದಲವನ್ನು ಕಾಟಾಚಾರಕ್ಕೆ ಹಾಕಿಸುತ್ತಿದ್ದಾರೆ. ಗೊಂದಲಿಗರು ಸಹ ಮೊದಲಿನ ಮನಸ್ಥಿತಿಯಲ್ಲಿ ಗೊಂದಲ ಕಾರ್ಯ ನಡೆಸುತ್ತಿಲ್ಲ ಎಂದು ಹೇಳಬಹುದು. ಕೆಲವು ಕಡೆ ಕಾಟಾಚಾರಕ್ಕೆ ಕಥೆಗಳನ್ನು ಹೇಳುತ್ತಿದ್ದಾರೆ ಎನ್ನಿಸುತ್ತಿದೆ. ರಾತ್ರಿಯಿಂದ ಬೆಳಗಿನವರೆಗೆ ನಡೆಯುವ ಗೊಂದಲ ಕಾರ್ಯದಲ್ಲಿ ಇಂದು ಗೊಂದಲಿಗರು ಪೂಜಾ ವೇಳೆ ಸಾಕಷ್ಟು ವಿಶ್ರಾಂತಿ ಪಡೆದು ಗೊಂದಲದ ಕಥೆಯನ್ನು ಮೂರು ತಾಸಿಗೆ ಮುಗಿಸುವ ಕಾರ್ಯ ಮಾಡುತ್ತಿದ್ದಾರೆ. ತುಳಜಾಪೂರದ ತುಳಜಾಭವಾನಿ ಗುಡಿಯಲ್ಲಿ ಗೊಂದಳ ಕಟ್ಟೆ, ಎನ್ನುವ ಒಂದು ಬೇವಿನಮರದ ಕಟ್ಟೆ ಇದೆ. ಅಲ್ಲಿ ಖಾಯಂ ಆಗಿ ಮೂರು ಜನ ಗೊಂದಲಿಗರು ಪೂಜೆ ಮಾಡಲು ಕುಳಿತಿರುತ್ತಾರೆ. ಬೇರೆ ಬೇರೆ ಊರುಗಳಿಂದ ಬಂದ ಜನ ಅಲ್ಲಿ ಗೊಂದಲ ಹಾಕಿಸುತ್ತಾರೆ. ಮೂರು ದಂಟು ಅಥವಾ ಕಬ್ಬುಗಳಿಂದ ಮಂಟಪ ಮಾಡಿ ಒಂದು ಚರಿಗಿಯಲ್ಲಿ ಕಾಯಿಯಿಟ್ಟು, ಕಾಯಿಗೆ ಕುಂಕುಮ ಹಚ್ಚಿ ಪೂಜೆ ಮಾಡುತ್ತಾರೆ. ಆ ಮಂಟಪದ ಮುಂದೆ ನವದಂಪತಿಗಳು ಕುಳಿತಿರುತ್ತಾರೆ. ೧೦ ರಿಂದ ೧೫ ನಿಮಿಷದಲ್ಲಿ ಒಂದು ಪದವನ್ನು ಹಾಡಿ ಗೋಂಧಳ ಕಾರ್ಯ ಮುಗಿಸುತ್ತಾರೆ. ನಂತರ ಅದೇ ತೆಂಗಿನಕಾಯಿಯನ್ನು ನವದಂಪತಿಗಳ ಉಡಿಯಲ್ಲಿ ಹಾಕಿ ಆಶೀರ್ವದಿಸುತ್ತಾರೆ. ಈ ಪರಂಪರೆಯನ್ನು ನೋಡಿದಾಗ ಗೊಂದಲಿಗರಲ್ಲೂ ಆಸಕ್ತಿ ಕಡಿಮೆಯಾಗುತ್ತಾ ಬರುತ್ತಿರುವುದು ಕಂಡುಬರುತ್ತಿದೆ. ಗೊಂದಲಿಗರ ನಿರಾಸಕ್ತಿ, ಬದುಕಿನ ಒತ್ತಡದಲ್ಲಿ ಗೊಂದಲ ಹಾಕಿಸುವವರ ಅನಿವಾರ್ಯತೆ ಇದೆಲ್ಲ ಆಧುನಿಕ ಬದುಕಿನ ಪ್ರಭಾವವೇ ಆಗಿದೆ. ಸಾವಿರಾರು ರೂಪಾಯಿ ಖರ್ಚು ಮಾಡಿ ಮನೆಯಲ್ಲಿ ಗೊಂದಲ ಹಾಕಿಸಲು ಆಗದವರು ಈ ರೀತಿ ಗುಡಿಗೆ ಬಂದು ಸಂಕ್ಷಿಪ್ತವಾಗಿ ಗೊಂದಲ ಹಾಕಿಸಿಕೊಂಡು ಹೋಗುತ್ತಾರೆ. ಸಾವಿರಾರು ರೂಪಾಯಿ ಖರ್ಚುಮಾಡಿ ಇಡೀ ರಾತ್ರಿ ಮನೆಯಲ್ಲಿ ಗೊಂದಲಿಗರು ಹಾಕುವ ಗೊಂದಲದ ವೈಭವವೇ ಬೇರೆ, ಗುಡಿಯಲ್ಲಿ ಹಾಕುವ ಗೊಂದಲದ ವೈಭವವೇ ಬೇರೆ. ಗೊಂದಲದ ಆರಾಧನೆಯನ್ನು ಕುರಿತು ಕ್ಷೇತ್ರ

ಕಾರ್ಯ ಮಾಡಿದಾಗ ಸದ್ಯದ ಪರಿಸ್ಥಿತಿಯಲ್ಲಿ ಗೊಂದಲವು ಆಧುನಿಕತೆಯ ಭರಾಟೆಯಲ್ಲಿ ತನ್ನ ಹಿಡಿತವನ್ನು ಕಳೆದುಕೊಳ್ಳುತ್ತಿದೆ. ಇದು ಹಣ ಮತ್ತು ವೇಳೆಯ ಕೈಯಲ್ಲಿ ಸಿಲುಕಿಕೊಂಡಿದೆ ಎಂದು ಹೇಳಬಹುದು.

ಗೊಂದಲ ಹಾಕುವ ಕಲಾವಿದರಾದ ಯಲ್ಪಾರಟ್ಟಿಯ ಸಂಗಪ್ಪ. ದುಂಡಪ್ಪ. ಗೋಂಧಳಿಯವರು ಹೀಗೆ ಅಭಿಪ್ರಾಯ ಪಡುತ್ತಾರೆ. "ಬಹಳಷ್ಟು ಜನ ಗುಡಿಗಳಿಗೆ ಹೋಗಿ ಗೊಂದಲ ಹಾಕಿಸುತ್ತಾರೆ. ಹೀಗಾಗಿ ನಮ್ಮ ಸಂಪಾದನೆ ಕಡಿಮೆಯಾಗಿದೆ. ಅದಕ್ಕಾಗಿಯೇ ಗೊಂದಲ ಹಾಕುವುದರ ಜೊತೆಗೆ ಒಕ್ಕಲುತನ ಮಾಡುತ್ತೇವೆ ಎಂದು ಹೇಳುತ್ತಾರೆ." ಅವರು ತಮ್ಮ ವೃತ್ತಿಗಳೊಂದಿಗೆ ಸಾಮಾಜಿಕ ನೆಲೆ ಕಂಡುಕೊಂಡಿದ್ದಾರೆ. ಇವರು ತಮ್ಮದೇ ಆದ ಸಮಾಜ ಕಟ್ಟಿಕೊಂಡು ತಮ್ಮ ಸಂಸ್ಕೃತಿಯ ಆಚಾರ ವಿಚಾರಗಳನ್ನು ಪಾಲಿಸುತ್ತ ಬದುಕುತ್ತಿದ್ದಾರೆ. ಇವರ ಪ್ರಕಾರ 'ಇತರೆ ವೃತ್ತಿಗಳಿಗಿಂತ ಗೊಂದಲದ ವೃತ್ತಿ ಉತ್ತಮವಾದುದು ಹಾಗೂ ಧಾರ್ಮಿಕ ಸ್ಥಾನಮಾನಗಳ ಜೊತೆಗೆ ಇತರರೊಡನೆ ಬೆರೆಯುವ ಅವಕಾಶವನ್ನು ಈ ಗೊಂದಲ ಕಾರ್ಯ ಕೊಟ್ಟಿದೆ.' ಎಂದು ಹೇಳುತ್ತಾರೆ. ಆದರೆ ಧಾರ್ಮಿಕ ವೃತ್ತಿ ಗಾಯಕರಾಗಿರುವ ಗೊಂದಲಿಗರು ಇಂದು ಆಧುನಿಕ ಜಗತ್ತಿನ ಪೈಪೋಟಿಯ ಜೊತೆ ಹಾಗೂ ಬದಲಾಗುತ್ತಿರುವ ಸ್ಥಿತ್ಯಂತರಗಳ ನಡುವೆ ಪಾರಂಪರಿಕ ವೃತ್ತಿಯಿಂದ ಅವರ ಆರ್ಥಿಕ ನಿರ್ವಹಣೆ ಸಾದ್ಯವಾಗುತ್ತಿಲ್ಲ. ಅದಕ್ಕಾಗಿ ಬೇರೆ ಬೇರೆ ವೃತ್ತಿಗಳನ್ನು ಅನುಸರಿಸುವ ಅನಿವಾರ್ಯತೆ ಕಂಡುಬರುತ್ತಿದೆ. ಬದಲಾಗುತ್ತಿರುವ ಜೀವನ ಶೈಲಿಯ ನಡುವೆ ತಮ್ಮ ಹೊಟ್ಟೆಯನ್ನು ಹೊರೆಯಲು ಯಾರು ಬೇಕಾದರೂ ಯಾವ ವೃತ್ತಿಯನ್ನಾದರೂ ಮಾಡಬಹುದು. ಹೇಗೆ ಬೇಕಾದರೂ ತಮ್ಮ ಬದುಕಿನ ವಿಧಾನಗಳನ್ನು ಬದಲಿಸಿಕೊಳ್ಳಬಹುದು. ಹಾಗೂ ಆರ್ಥಿಕವಾಗಿ ಸಭಲಗೊಳ್ಳಲು ಇತರೆ ಯಾವ ವೃತ್ತಿಯನ್ನಾದರೂ ಅವಲಂಬಿಸಬಹುದು ಎನ್ನುವ ಸ್ಥಿತಿ ಅನೇಕ ಗೊಂದಲಿಗರ ಕಲಾವಿದರದ್ದಾಗಿದೆ. ಕಾರಣ ಗೊಂದಲಿಗರು ಆಧುನಿ ಕತೆಯ ಭರಾಟೆಯಲ್ಲಿ ಆರ್ಥಿಕ ಸಬಲತೆಯನ್ನು ಕಂಡುಕೊಳ್ಳಲು ವೃತ್ತಿ ಪಲ್ಲಟಗಳು ಇವರ ಬದುಕಿನಲ್ಲಿ ಅನಿವಾರ್ಯವಾಗಿ ಕಂಡು ಬಂದಿವೆ. ಗೊಂದಲಿಗರು ತಾವು ನೆಲೆ ನಿಲ್ಲುವುದರ ಜೊತೆಗೆ ತಮ್ಮ ಮಕ್ಕಳ ಶಿಕ್ಷಣಕ್ಕಾಗಿ ಹೆಚ್ಚು ಒತ್ತುಕೊಟ್ಟಿದ್ದಾರೆ. ಶಿಕ್ಷಣದಿಂದ ಬದುಕನ್ನು ಹಸನಾಗಿ ಸಿಕೊಳ್ಳಬಹುದು ಮತ್ತು ತಮ್ಮ ಮಕ್ಕಳ ಜೀವನವನ್ನು ಸುಧಾರಿಸಬಹುದೆಂದು ಅರಿತಿದ್ದಾರೆ ಹಾಗೂ ಅವರ ಜೀವನ ತಮ್ಮಂತೆ ಕಷ್ಟದಲ್ಲಿ ಉಳಿಯಬಾರದೆಂದು ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡುತ್ತಿದ್ದಾರೆ. ಇದನ್ನು ಗೊಂದಲಿಗರಲ್ಲಿ ಮೂಡಿದ ಸಾಮಾಜಿಕ ಪ್ರಜ್ಞೆ ಎಂದು ಹೇಳಬಹುದು. ಇದರ ಪರಿಣಾಮವೇ ಇಂದು ಗೊಂದಲಿಗರು ಪ್ರತಿಯೊಂದು ಕ್ಷೇತ್ರದಲ್ಲಿ ದಾಪುಗಾಲನ್ನಿಟ್ಟಂತೆ,. ಶ್ರೀ.ಎಚ್.ಭೀಮರಾವ್ ವಾಷ್ಮರ್, ಶ್ರೀ.ಶಂಕರರಾವ ಶಾಸ್ತ್ರಿ, ಶ್ರೀ ಎಂ.ಎಂ ಮದರಿ, ಸಾಹಿತ್ಯಿಕ ಕ್ಷೇತ್ರದಲ್ಲಿ ನೆಲೆ ಕಂಡುಕೊಂಡಿದ್ದಾರೆ. ಸುಧಾಕರ ದುಮ್ಮಾಳ, ಅಶೋಕ ವಾಟ್ಕರ್, ಸುಮಂಗಲಾ ದುಮ್ಮಾಳ, ರಮೇಶ ಸಿಂಗದ ಮುಂತಾದವರು ಸಾಮಾಜಿಕ ಮುನ್ನಡೆಯ ಹಲವಾರು ಕಾರ್ಯಗಳನ್ನು ಮಾಡುತ್ತಿದ್ದಾರೆ. ಹೆಣ್ಣು ಮಕ್ಕಳು ಮನೆಯಿಂದ ಹೊರಬಂದು

ಶಿಕ್ಷಣ ಪಡೆದು ಕೆಲಸಗಳನ್ನು ಗಿಟ್ಟಿಸಿಕೊಂಡಿದ್ದಾರೆ.

**ಜನಪದ ಕಲೆಯ ಅವಶ್ಯಕತೆ ಮತ್ತು ಉಳಿವು**

ಜನಪದ ಕಲೆಯೂ ಇಂದು ಓಡುತ್ತಿರುವ ಆಧುನಿಕ ನಾಗರಿಕತೆಗೆ ತುಂಬಾ ಅವಶ್ಯವಾಗಿದೆ. ಕಾರಣ ಜನಪದವು ಮಾನವಿಯ ಮೌಲ್ಯಗಳನ್ನು ಬಿತ್ತುವ ಖಣಿಯಾಗಿದೆ. ಮನುಷ್ಯ ಪರಿವರ್ತನೆ ಹಾಗೂ ಸಂಸ್ಕೃತಿಯ ಬೆಳವಣಿಗೆಯ ಶ್ರೀಗಂಧವೇ ಈ ಜಾನಪದವಾಗಿದೆ. ಇಂದಿನ ಜಾಗತೀಕರಣದಲ್ಲಿ ಜನಸಂಸ್ಕೃತಿಯು ಮರೆಯಾಗಿ ನಂಬಿಕೆ, ತ್ಯಾಗ, ನೀತಿ, ನಡವಳಿಕೆ ಮುಂತಾದ ಪರಂಪರೆಯು ಕರಗಿ ಹೋಗುತ್ತಿದೆ. ಪ್ರತಿಯೊಂದು ಜನಪದ ಕಲೆಯು ಅಗಾಧವಾದ ಸಂದೇಶವನ್ನು ಕೊಡುವ ಸಂದೇಶವಾಹಕಗಳಾಗಿವೆ. ಸಂಸ್ಕೃತಿಯು ಬದುಕನ್ನು ಕಟ್ಟಿ ಕೊಡುತ್ತದೆ. ಇದು ಕಲೆಯ ಮೂಲಕ ಮಾತ್ರ ಸಾಧ್ಯ. ಇಂಥ ಕಲೆಗಳು ಉಳಿಯಬೇಕಾದರೆ ಕಲಾವಿದರನ್ನು ಉಳಿಸಿ ಬೆಳೆಸುವುದು ಇಂದು ತುಂಬಾ ಅವಶ್ಯವಾಗಿದೆ. ಈ ಜನಪದ ಕಲೆಗಳು ಕಲಾವಿದರನ್ನು, ಪ್ರೇಕ್ಷಕರನ್ನು ಒಂದು ಗೂಡಿಸುವ ಕೆಲಸವನ್ನು ಮಾಡುತ್ತವೆ.

ಇಂಥ ಕಲಾವಿದರಿಗೆ ಪ್ರೋತ್ಸಾಹ ನೀಡಿದರೆ ಮಾತ್ರ ನಮ್ಮ ಸಂಸ್ಕೃತಿಯ ಉಳಿವು ಸಾಧ್ಯ. ಆಧುನಿಕತೆಯ ಭರಾಟೆಯಲ್ಲಿ ನಮ್ಮತನವನ್ನು ಉಳಿಸಿಕೊಳ್ಳುವುದು ಮುಖ್ಯವಾಗಿದೆ. ಕಲೆಯಿಂದ ಬದುಕಿನಲ್ಲಿ ಪ್ರೀತಿ ವಿಶ್ವಾಸ, ನಗು, ಸೌಹಾರ್ದತೆಯನ್ನು ಮರಳಿ ಪಡೆಯುತ್ತೇವೆ. ಬರಡು ಜೀವನದಲ್ಲಿ ಮತ್ತೆ ಜೀವನ ಸೌಂದರ್ಯ ಅರಳುತ್ತದೆ. ರಾಮಾಯಣ, ಮಾಹಾಭಾರತ, ಭಾಗವತದ ಕಥೆಗಳನ್ನು, ಶಿವ ಭಕ್ತರ ಪುರಾಣಗಳು, ಐತಿಹಾಸಿಕ ವಿಷಯಗಳು, ಸಾಮಾಜಿಕ ವಿಷಯ ವಸ್ತುಗಳು, ಮುಂತಾದ ವಿಷಯಗಳು ಜನಪದ ಕಲೆಗಳ ಮೂಲಕ ಜನರ ಮನ ಮುಟ್ಟುತ್ತವೆ. ಸಿ.ಕೆ.ನಾವಲಗಿಯವರು ತಮ್ಮ 'ಜಾನಪದ ಸಡಗರ' ಕೃತಿಯಲ್ಲಿ ಹೀಗೆ ಹೇಳಿದ್ದಾರೆ. "ಜನಸಾಮಾನ್ಯರಲ್ಲಿ ವಿನೂತನ ಕ್ರಾಂತಿ, ರಾಷ್ಟ್ರೀಯ ಭಾವನೆ, ಸ್ವಸಹಾಯ ದೃಷ್ಟಿ ಮೂಡಬೇಕಾದರೆ ಪರಂಪರಾಗತ ಕಲೆಗಳಿಗೆ ವಿಶೇಷ ಗಮನ ಕೊಡಬೇಕು. ಪೂರ್ವ ಯುರೋಪ ದೇಶಗಳು ಜನಪದ ಸಾಹಿತ್ಯ, ಕಲೆ ಬಳಸಿಕೊಂಡು ಜನತೆಯಲ್ಲಿ ರಾಷ್ಟ್ರ ಪ್ರೇಮ, ರಾಷ್ಟ್ರೀಯ ಪ್ರಜ್ಞೆ ಬೆಳೆಸಿವೆ. ಜಾನಪದವನ್ನು ರಾಷ್ಟ್ರೀಯ ಆಸ್ತಿ ಎಂದು ತಿಳಿದಿದ್ದಾರೆ. ಈ ಆಸ್ತಿಯನ್ನು ಕಳೆದುಕೊಳ್ಳಲು ಅವರು ಸಿದ್ದರಿಲ್ಲ. ನಾವು ಭಾರತೀಯರು ಮಾತ್ರ ರಾಷ್ಟ್ರದ ಆಸ್ತಿಯಾದ ಜಾನಪದದಿಂದ ದೂರ ಸರಿಯುತ್ತಿದ್ದೇವೆ." ಎಂದು ಹೇಳುವ ಅವರ ಮಾತಿನಲ್ಲಿ ಜಾನಪದ ಕಲೆಗಳ ಪ್ರಾಮುಖ್ಯತೆ ಹಾಗೂ ಜನಪದ ಕಲೆಗಳನ್ನು ಉಳಿಸಿಕೊಳ್ಳುವುದು ನಮ್ಮೆಲ್ಲರ ಹಕ್ಕು ಎಂಬ ಎಚ್ಚರಿಕೆಯ ನುಡಿ ಕಂಡು ಬರುತ್ತದೆ. ಅಗಾಧವಾದ ಜಾನಪದ ಸಂಪತ್ತನ್ನು ಹೊಂದಿದ ಗೊಂದಲಿಗರ ಕಲಾವಿದರನ್ನು ಪ್ರೋತ್ಸಾಹಿಸಿ, ಗೌರವ ಭಾವನೆಯಿಂದ ಕಂಡಾಗ ಮಾತ್ರ ಕಲಾವಿದನೊಂದಿಗೆ ಆತನ ಕಲೆಯು ಉಳಿಯುತ್ತದೆ. ಲಾವಣಿ, ಬಯಲಾಟ, ಹಂತಿ ,ಚೌಡಿಕೆ, ಡೊಳ್ಳು, ಮುಂತಾದ ಕಲೆಗಳಂತೆ ಗೊಂದಲಿಗರ ವಿಶಿಷ್ಟವಾದ ಸಾಹಿತ್ಯವನ್ನು ಸಂಗ್ರಹಿಸುವ ಕೆಲಸ ನಡೆಯಬೇಕಾಗಿದೆ. ಕಲಾವಿದರಿಗೆ

ತಮ್ಮ ವಿದ್ವತನ್ನು ಹೊರಹಾಕಲು ಸಾಕಷ್ಟು ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಜೊತೆಗೆ ಅವರಿಗೆ ಅವಕಾಶಗಳನ್ನು ಸರಕಾರ, ಸಂಘ, ಸಂಸ್ಥೆಗಳು ನೀಡಬೇಕು. ನಿಪುಣ ಕಲಾವಿದರನ್ನು ಗುರುತಿಸಿ ಅವರಿಗೆ ಗೌರವ, ಸನ್ಮಾನ, ಪ್ರಶಸ್ತಿಗಳನ್ನು ಕೊಡಬೇಕು. ಇದರಿಂದ ಹೆಚ್ಚು ಹೆಚ್ಚು ಕಲಾವಿದರು ಆಸಕ್ತಿಯಿಂದ ಕಲೆಯನ್ನು ರೂಢಿಗತಗೊಳಿಸಿಕೊಂಡು ಕಲೆ ಉಳಿಸಲು ಪ್ರಯತ್ನಿಸುತ್ತಾರೆ. ಕಡು ಬಡತನದಲ್ಲಿರುವ ಗೊಂದಲಿಗ ಕಲಾವಿದರಿಗೆ ಪ್ರೋತ್ಸಾಹಪರವಾದ ಮಾಸಾಶನ ನೀಡಬೇಕು. ಹಲವಾರು ಸೌಲಭ್ಯಗಳನ್ನು ನೀಡುವುದರಿಂದ ಕಲಾವಿದರು ಆಸಕ್ತಿಯಿಂದ ತಮ್ಮ ಕಲೆಯನ್ನು ಉಳಿಸಿ ಬೆಳೆಸುತ್ತಾರೆ.

ಈ ಹಿಂದೆ ಜನಪದ ಕಲಾವಿದರು ತಮ್ಮ ಕಲೆಯನ್ನು ದೈವವೆಂದು ತಿಳಿದು ಸೇವೆಯನ್ನು ಮಾಡುತ್ತಿದ್ದರು. ಅವರು ಕಲೆ ತಮ್ಮ ಜೀವನದ ಅವಿಭಾಜ್ಯ ಅಂಗವೆಂದು ತಿಳಿದಿದ್ದರು. ಅವರಂತೆ ಇಂದಿನ ಕಲಾವಿದರು ಸಹ ನಿರಾಸಕ್ತಿಯನ್ನು ತಾಳದೆ ಕಲಾಸೇವೆಗೆ ತಮ್ಮ ಕೊಡುಗೆಯನ್ನು ನೀಡಬೇಕಾಗಿದೆ. ಇಂದು ಕಲಾವಿದರಲ್ಲಿ ದೈವಭಕ್ತಿ, ಶ್ರದ್ಧೆ, ತ್ಯಾಗದ ಮನೋಭಾವ, ಸಮರ್ಪಣಾಭಾವದ ದುಡಿಮೆ ಕಂಡು ಬರಬೇಕಾಗಿದೆ. ಕಲೆಯನ್ನು ಆರಾಧನೆ ಭಾವದಿಂದ ಪೂಜಿಸಿ ಉಳಿಸಿ ಬೆಳಸಬೇಕಾಗಿದೆ.

**ಅಡಿಟಿಪ್ಪಣಿ**

೧. ವೀರೇಶ. ಶೇ. ಬಡಿಗೇರ. ಉತ್ತರ ಕರ್ನಾಟಕ ಜನಪದ ಗೀತ ಮೇಳಗಳು, ೧೯೯೯, ಪು.ಸಂ. ೧೪೩.

# ಅಧ್ಯಾಯ ೮

# ಸಮಾರೋಪ

ಗೊಂದಲಿಗರು ಕರ್ನಾಟಕದ ಅನೇಕ ಭಾಗಗಳಲ್ಲಿ ನೆಲೆನಿಂತಿರುವ ಅರೆಅಲೆಮಾರಿ ಸಮುದಾಯವಾಗಿದೆ. ಅದರಲ್ಲೂ ಇವರು ಉತ್ತರ ಕರ್ನಾಟಕದಲ್ಲಿ ಹೆಚ್ಚು ನೆಲೆವೂರಿದ್ದು ಕಂಡು ಬರುತ್ತದೆ. ಧಾರ್ಮಿಕ ಹಾಗೂ ಲೌಖಿಕ ವೃತ್ತಿ ಗಾಯಕರಾದ ಇವರು ಧಾರ್ಮಿಕ ಆಚರಣೆಗಳಲ್ಲಿ ಒಂದಾದ ಗೊಂದಲವನ್ನು ಪ್ರಾಚೀನ ಕಾಲದಿಂದಲೂ ನಡೆಸಿಕೊಂಡು ಬಂದಿದ್ದಾರೆ. ವಿಶಿಷ್ಟವಾದ ಗೊಂದಲ ಕಥನ ಸಾಹಿತ್ಯವನ್ನು ಹೊಂದಿದ ಇವರು ಮರಾಠಿ ಹಾಗೂ ಕನ್ನಡ ಎರಡೂ ಭಾಷೆಯಲ್ಲಿ ತಮ್ಮ ಸಾಹಿತ್ಯ ಪ್ರಚಾರ ಮಾಡುವುದನ್ನು ಕಾಣುತ್ತೇವೆ. ಉತ್ತರ ಕರ್ನಾಟಕವನ್ನು ಕೇಂದ್ರವಾಗಿಟ್ಟುಕೊಂಡು ಮಹಾರಾಷ್ಟ್ರ ಹಾಗೂ ಕರ್ನಾಟಕದ ಗಡಿಭಾಗಗಳಲ್ಲಿ ಪ್ರಚಲಿತವಿರುವ ಗೊಂದಲಿಗರ ಕಥೆಗಳನ್ನು ಸಂಗ್ರಹಿಸಿ ಅವುಗಳನ್ನು ಸಾಂಸ್ಕೃತಿಕವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಗೊಂದಲಿಗರು ಶಕ್ತಿದೇವತೆಯ ಆರಾಧಕರಾಗಿದ್ದಾರೆ. ನೀತಿಯ ಹರಿವು, ಬೋಧನೆಯ ಶೈಲಿ, ಸಂಸ್ಕೃತಿಯ ಉಳಿವು, ಸಾಮಾಜಿಕ ಅರಿವು, ಪೌರಾಣಿಕ ಸತ್ವ, ಇತಿಹಾಸದ ತಿರುಳು, ಜನಪದ ಸೊಗಡು ಹೀಗೆ ಅನೇಕ ಅಂಶಗಳನ್ನು ಇವರ ಕಥನ ಸಾಹಿತ್ಯದಲ್ಲಿ ಕಾಣುತ್ತೇವೆ. ಮೌಖಿಕ ಸಾಹಿತ್ಯ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವ ಗೊಂದಲಿಗರ ಗೊಂದಲದ ಪ್ರದರ್ಶನ, ಗೊಂದಲ ಎಂಬ ಪದ ವಿವೇಚನೆ, ಸಾಹಿತ್ಯಿಕ, ಐತಿಹಾಸಿಕ ಹಾಗೂ ಸಾಮಾಜಿಕವಾಗಿ ಈ ಗೊಂದಲವು ಮಾನ್ಯತೆ ಪಡೆದುಕೊಂಡ ಒಂದು ಪರಂಪರೆ ಹೊಂದಿದೆ ಎಂದು ಹೇಳಬಹುದು. ಕ್ರಿ.ಶ. ೧೦ ನೇ ಶತಮಾನದಿಂದಲೂ ಈ ಗೊಂದಲ ಕ್ರಿಯೇ ಪ್ರಚಲಿತವಿತ್ತು ಎಂಬ ಸಂಶೋಧಕರ ಮಾಹಿತಿಯೊಂದಿಗೆ ಅದೊಂದು 'ಕುಣಿತ' ಎಂಬ ಅರ್ಥವನ್ನು ಪಡೆದುಕೊಂಡಿದೆ. ಅನೇಕ ಶುಭಕಾರ್ಯಗಳಲ್ಲಿ ಗೊಂದಲಿಗರೂ ಈ ಗೊಂದಲದ ಪೂಜೆ ನೆರವೇರಿಸುವುದರ ಮೂಲಕ ಸಮಾಜದಲ್ಲಿ ಒಂದು ಕಾಲಕ್ಕೆ ಗೌರವಾದರಗಳನ್ನು ಪಡೆದುಕೊಂಡಿದ್ದರು ಎಂದು ಹೇಳಬಹುದು. ಅಲೆಮಾರಿಗಳಾದ ಇವರು ಇಂದು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವುದರ ಮೂಲಕ ತಮ್ಮ

ಬದುಕಿಗೆ ಒಂದು ಭದ್ರತೆಯನ್ನು ಕಟ್ಟಿಕೊಳ್ಳುವಲ್ಲಿ ಹಂತ ಹಂತವಾಗಿ ಸಫಲರಾಗುತ್ತಿದ್ದಾರೆ ಎಂದು ಹೇಳಬಹುದು. ಇವರು ತಮ್ಮ ಕಾಯಕದಲ್ಲಿ ಜನಪದ ಇತಿಹಾಸವನ್ನು ಕೆದಕುವ ಹಾಗೂ ಉಳಿಸುವ ಕಾರ್ಯವನ್ನು ಮಾಡುತ್ತಿದ್ದಾರೆ. ತತ್ವಪದ, ದಾಸರಪದ, ಅನುಭಾವ ಪದ ನೀತಿ ಪದಗಳನ್ನು ಹೇಳುವುದರೊಂದಿಗೆ ಸೋಬಾನೆ ಪದ, ಕೋಲಾಟ, ಜೋಗುಳಪದ, ಹಾಸ್ಯ ಚುಟುಕುಗಳನ್ನು ಹೇಳವಲ್ಲಿ ಇವರು ನಿಸ್ಸೀಮರಾಗಿದ್ದಾರೆ. ಆಧುನಿಕತೆ, ನಗರೀಕರಣ, ಜಾಗತಿಕರಣದ ಪ್ರಭಾವ ಈ ಗೊಂದಲಿಗರ ಕಥನಗಳ ಕಾಯಕದ ಮೇಲೆ ಪರಿಣಾಮ ಬೀರಿದೆ ಎಂದು ಹೇಳಬಹುದು. ಒಂದು ಕಾಲದಲ್ಲಿ ಗೊಂದಲ ವೃತ್ತಿಯನ್ನೇ ನಂಬಿಕೊಂಡು ಬದುಕುತ್ತಿದ್ದ ಅವರ ಗೊಂದಲ ಪೂಜೆ ಮತ್ತು ಅವರ ಕಥನ ಸಾಹಿತ್ಯ ಅಳುವಿನ ಅಂಚಿನಲ್ಲಿದ್ದುದರಿಂದ ಇಂದು ಅವರು ಪರ್ಯಾಯ ವೃತ್ತಿಗಳೊಂದಿಗೆ ತಮ್ಮ ಬದುಕನ್ನು ರೂಪಿಸಿಕೊಳ್ಳುತ್ತಿದ್ದಾರೆ.

**ಅಧ್ಯಯನದ ಫಲಿತಗಳು**

೧. ಪ್ರಾಚಿನ ಕಾವ್ಯಗಳಲ್ಲಿ ಬಳಕೆಯಾಗುವ ಗೊಂದಲ ಎನ್ನುವ ಪದವು "ಕುಣಿತ" ಎನ್ನುವ ಅರ್ಥವನ್ನು ಪಡೆದುಕೊಂಡಿದೆ. ಮುಂದೆ ಇದು ದೇವಿಯ ಆರಾಧನೆಗಾಗಿ ಬೆಳೆದು ಬಂದಿದೆ ಎಂದು ಹೇಳಬಹುದು. ಗೊಂದಲದ ಆರಾಧನೆ ಮತ್ತು ಗೊಂದಲ ಎನ್ನುವ ಈ ಪದ ಪಂಪನಿಂದ ಬಳಕೆಯಾಗಿ ಮುಂದೆ ಪುಷ್ಪದಂತ, ನಯಸೇನ ಮುಂತಾದವರ ಕಾವ್ಯಗಳಲ್ಲಿ ಕಂಡುಬಂದಿದೆ. ಪ್ರಾಚೀನ ಸಾಹಿತ್ಯದಲ್ಲಿ ಹಾಗೂ ಜ್ಞಾನೇಶ್ವರಿ ಗೀತಾರ್ಣವ ಮತ್ತು ಸ್ಕಂದ ಪುರಾಣ ಕೃತಿಗಳಲ್ಲಿ 'ಪಿಶಾಚ' "ಭೂತ' ಎಂಬ ಅರ್ಥ ಹೊಂದಿದೆ. ಜೋರಾದ ಶಬ್ಧ, ಕಿರುಚಾಟ ಮಾಡುವ ರೂಪವನ್ನು ಹೊಂದಿರುವುದರಿಂದ ಈ ಕ್ರಿಯೆಯನ್ನು ಗೊಂದಲ ಎಂದರೆ ಗದ್ದಲ, ಸಪ್ಪಳ ಎಂಬರ್ಥ ಪಡೆದಿದೆ. ಗೊಂದಲ ಈ ಶಬ್ಧ ಇತರ ಭಾಷೆಗಳಾದ ತಮಿಳು, ತೆಲಗು, ಇಂಗ್ಲೀಷನಲ್ಲಿ ಕೊಂತಲಮ್, ಗೊಂದಲಿ, ಗೊಂಡ್ಲಿ ಎಂಬ ರೂಪಗಳು ಕಂಡುಬಂದು ಅವುಗಳ ಅರ್ಥ ನರ್ತಿಸುವಿಕೆ, (ಕುಣಿತ) ಎಂಬುದಾಗಿದೆ.

೨. ಗೊಂದಲವೆಂದರೆ ಮನಸ್ಸಿನ ಭಾವವನ್ನು ಹೊರಹಾಕಿ, ದೇವಿಗೆ ಸಮರ್ಪಣೆ ಮಾಡಿ ಶಾಂತ ಚಿತ್ತತೆಯನ್ನು ಪಡೆಯುವುದಾಗಿದೆ. ರಾಜರ ಕಾಲದಲ್ಲಿ ಇವರಿಗೆ ಹೆಚ್ಚಿನ ಮನ್ನಣೆ ಗೌರವ, ಸನ್ಮಾನಗಳು ಇದ್ದವೆಂದು ತಿಳಿದು ಬರುತ್ತದೆ. ಶಿವಾಜಿ ಮಹಾರಾಜನ ಕಾಲಕ್ಕೆ ಗೊಂದಲವು ಜನಪ್ರೀಯ ಆಚರಣೆಯಾಗಿತ್ತು ಎಂಬುದು ತಿಳಿದು ಬರುತ್ತದೆ. ದೇವಸ್ಥಾನಗಳಲ್ಲಿ ರಾಜರ ಮುಂದೆ ಭಕ್ತಿ ಭಾವದಿಂದ ನೃತ್ಯಗಾರ್ತಿಯರು ಗೊಂದಲದ ನೃತ್ಯ ಪ್ರದರ್ಶಿಸುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಶಿವಾಜಿ ಮತ್ತಿತರ ರಾಜರು ಶತೃಗಳ ಮಾಹಿತಿಯನ್ನು ತಿಳಿಯಲು ಗೊಂದಲವನ್ನು ಮತ್ತು ಗೊಂದಲಿಗರನ್ನು ಗೂಢಚಾರನ್ನಾಗಿ ಉಪಯೋಗಿಸುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಹೀಗಾಗಿ ಗೊಂದಲವು ಐತಿಹಾಸಿಕ ಮಹತ್ವವನ್ನು ಪಡೆದಿದೆ.

೩. ಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿ ಅನುವಂಶಿಕ ಗೊಂದಲಿಗರಿಂದಲೇ ವಿಧ್ಯುಕ್ತವಾಗಿ ಗೊಂದಲ ಹಾಕುವ ಪದ್ಧತಿ ಕಂಡುಬರುತ್ತದೆ. ಗೊಂದಳ ಹಾಕುವವರು ಈ ಪರಂಪರೆಯನ್ನು ಮುಂದುವರಿಯಲು ಪ್ರಾರಂಭದಲ್ಲಿ ಗೊಂದಳ ದೀಕ್ಷೆ ಪಡೆಯುವುದು ಕಡ್ಡಾಯವಾಗಿದೆ. ಪಂಚ ಬಗೆಯ ಪಂಜು ಹಿಡಿದು ಗೊಂದಲಕ್ಕಾಗಿ ಬರುವುದನ್ನು ಆಧ್ಯಾತ್ಮಿಕ ನಲೆಯಲ್ಲಿ ಪಂಚೇಂದ್ರಿಗಳನ್ನು ದೇವಿಗೆ ಬೆಳಕಿನ ರೂಪದಲ್ಲಿ ಸಮರ್ಪಿಸುವುದು ಎಂದು ಅರ್ಥೈಸಿಕೊಳ್ಳಲಾಗುತ್ತದೆ.

೪. ಸಾಮಾನ್ಯವಾಗಿ ಗೊದಲಿಗರ ಕಥೆಗಳು ಒಂದು ಸ್ಥಿರವಿನ್ಯಾಸವನ್ನು ಹೊಂದಿವೆ ಎಂದು ಹೇಳಬಹುದು. ಇವರು ಆಯಾ ಪರಿಸರದ ಜನರ ಸ್ವಭಾವ, ಗುಣ, ನಡೆ, ನುಡಿ, ಲಕ್ಷಣಗಳನ್ನು ಗಮನದಲ್ಲಿಟ್ಟುಕೊಂಡು ಕಥೆಗಳನ್ನು ಸೃಷ್ಟಿಸುವ ಕೌಶಲ್ಯ ಹೊಂದಿದ್ದಾರೆ.ಇವರ ಕಥೆಗಳ ವಸ್ತುಗಳು ತ್ರಿಕೋಣಾಕೃತಿಯಲ್ಲಿರುವುದು ಕಂಡುಬರುತ್ತವೆ ಅಂದರೆ ಪ್ರಾಣಿಗಳು, ಪರಿಸರ (ಪ್ರಕೃತಿ) ಮತ್ತು ಮಾನವ ಸಂಬಂಧಗಳನ್ನು ಅವರ ಕಥೆಗಳು ಒಳಗೊಂಡಿವೆ.

೫. ಹೆಣ್ತನದ ಪ್ರಾಮುಖ್ಯತೆ ಹಾಗೂ ಅವಳ ನಿಲುವು, ಸಹಾನುಭೂತಿ, ಪ್ರೀತಿ, ತ್ಯಾಗ ಮಮತೆ, ಧೈರ್ಯ, ಪತಿವೃತಾ ಧರ್ಮ, ಸಿಟ್ಟು, ಸೇಡು ಮಾನವನ ಕರ್ತವ್ಯಗಳು ಗೊಂದಲಿಗರ ಕಥನಗಳಲ್ಲಿ ಪ್ರಮುಖವಾಗಿ ಕಂಡುಬರುತ್ತವೆ. ಗೊಂದಲಿಗರ ಕಥೆಯಲ್ಲಿಯ ಹೆಣ್ಣು ತನ್ನ ಪಾತಿವ್ರತ್ಯ ಉಳಿಸಿಕೊಳ್ಳಲು ಮಗನನ್ನೇ ಬಲಿ ಕೊಡುವ ಪ್ರಸಂಗ ಕಂಡು ಬರುತ್ತದೆ. ಈ ಸನ್ನಿವೇಶ ಕಡ್ಲಿಮಟ್ಟಿ ಸ್ಟೇಶನ್ ಮಾಸ್ತರ ಎಂಬ ಸಣ್ಣಾಟದ ಈ ಕಥೆಯನ್ನು ನೆನಪಿಸಿಕೊಡುತ್ತದೆ. ಗೊಂದಲಿಗರ ಕಥನಗಳಲ್ಲಿ ಚಾಲಾಕಿ (ಚತುರ) ಹೆಣ್ಣುಗಳ ಚಿತ್ರಣವನ್ನು ಸುಂದರವಾಗಿ, ವಾಸ್ತವಕ್ಕೆ ಹತ್ತಿರವಾಗಿ ಚಿತ್ರಿಸಿದ್ದಾರೆ. ಗೊಂದಲಿಗರು ಅನೇಕ ಸಂದರ್ಭಗಳಲ್ಲಿ ಹೆಣ್ಣು ಮಾಯೆ ಎಂಬುದನ್ನು ಚಿತ್ರಿಸುತ್ತಾ ಅವಳ ಮೋಹಕ್ಕೆ ಜನರು ಹೇಗೆ ಬೀಳುತ್ತಾರೆ. ಹೆಣ್ಣಿನ ರೂಪಕ್ಕೆ, ಮಾತಿಗೆ ಮರುಳಾಗಿ, ಜನಸಾಮಾನ್ಯರಲ್ಲದೇ ರಾಜ ಮಹಾರಾಜರೂ ಸಹ ತಮ್ಮ ಕರ್ತವ್ಯಗಳನ್ನು ಮರೆತು ಅವರ ಬೆನ್ನು ಹತ್ತುವ ಚಿತ್ರಣಗಳು ಅವರ ಕಥನಗಳಲ್ಲಿ ಕಾಣುತ್ತೇವೆ. ಮಂತ್ರಿಯೊಬ್ಬ ವರನಿಲ್ಲದೆ ಕೇವಲ ಫೋಟೊ, ಕಾಗದ, ಪ್ರತಿಜ್ಞೆ, ಇವುಗಳ ಮೂಲಕ ಕನ್ಯೆಯನ್ನು ಮದುವೆ ಮಾಡಿಕೊಂಡು ಬರುವ ಚಾಣಾಕ್ಷತೆಯು ಅವರ ಕಥೆಗಳಲ್ಲಿ ಮೂಡಿದೆ. ಹೆಣ್ಣು ಕಾಮುಕರಿಂದ ತಪ್ಪಿಸಿಕೊಳ್ಳಲು ಜಾಣ್ಮೆ, ತಾಳ್ಮೆ, ಧೈರ್ಯವನ್ನು ಹೇಗೆ ತಂದುಕೊಳ್ಳುತ್ತಾಳೆ ಎಂಬುದನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಗೊಂದಲಿಗರು ತಮ್ಮ ಬದುಕಿನಲ್ಲಿ ಹಾಗೂ ಸುತ್ತಮುತ್ತಲಿನ ಪರಿಸರದಲ್ಲಿ ನಡೆದ ಘಟನೆಗಳನ್ನೇ ತಮ್ಮ ಕಥೆಗಳಲ್ಲಿ ಅಳವಡಿಸಿಕೊಂಡಿದ್ದಾರೆ.

೬. ಗೊಂದಲಿಗರ ಕಥನಗಳಲ್ಲಿ ನೈತಿಕ ಮೌಲ್ಯಗಳನ್ನು ತಿಳಿಸುವ ಅನೇಕ ಕಥೆಗಳು ಇರುವುದು ಕಂಡುಬರುತ್ತವೆ. ಅವುಗಳನ್ನು ಪರಿಣಾಮಕಾರಿಯಾಗಿ ತಿಳಿಸಲು ಶರಣರ ವಚನಗಳನ್ನು, ದಾಸರ ಹಾಡುಗಳನ್ನು, ಸರ್ವಜ್ಞನ ತ್ರಿಪದಿಗಳನ್ನು ಹಾಗೂ ವಿಭೂತಿ ಪುರುಷರ ಅನುಭಾವ

ಸಾಹಿತ್ಯವನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಂಡು ಹರಿತವಾಗಿ ಮತ್ತು ವಿಡಂಬನಾತ್ಮಕವಾಗಿ ಹೇಳುವುದನ್ನು ಕಾಣುತ್ತೇವೆ. ಆಧುನಿಕ ಸಮಾಜದಲ್ಲಿ ನೈತಿಕತೆ ಕುಸಿಯುತ್ತಿರುವುದನ್ನು ಕಂಡ ಗೊಂದಲಿಗರ ಕಲಾವಿದರು ಆತಂಕ ವ್ಯಕ್ತಪಡಿಸುತ್ತಾರೆ.

೭. ಮಾನವೀಯ ಸಂಬಂಧಗಳು ಹೇಗಿರಬೇಕು ಎಂಬುದನ್ನು ಗೊಂದಲಿಗರು ತಮ್ಮ ಕಥನಗಳಲ್ಲಿ ಅತ್ಯಂತ ಸೂಕ್ಷ್ಮವಾಗಿ ವಿವರಿಸುವ ಪ್ರಯತ್ನ ಮಾಡಿರುವುದನ್ನು ಕಾಣುತ್ತೇವೆ. ಅಜ್ಜ–ಅಜ್ಜಿ, ತಂದೆ–ತಾಯಿ, ಅತ್ತೆ–ಮಾವ, ಗಂಡ–ಹೆಂಡತಿ, ಅಕ್ಕ–ತಂಗಿಯರು, ಅಣ್ಣ–ತಮ್ಮಂದಿರು, ಮಕ್ಕಳು, ಗುರು ಹಿರಿಯರು, ಹೀಗೆ ಸಮಾಜ ಮತ್ತು ಕುಟುಂಬದ ವ್ಯವಸ್ಥೆಯಲ್ಲಿ ಮಾನವರ ನಡೆ–ನುಡಿಗಳು ಹೇಗಿರಬೇಕು ಎಂಬುದನ್ನು ತಿಳಿಸುತ್ತಾ, ಈ ಸಂಬಂಧಗಳಿಗೆ ವ್ಯತಿರಿಕ್ತವಾಗಿ ನಡೆದುಕೊಂಡರೆ ಅವರ ಬದುಕು ಹೇಗೆ ದುರಂತದಲ್ಲಿ ಅಂತ್ಯಗೊಳ್ಳುತ್ತದೆ ಎಂಬುದನ್ನು ಅನೇಕ ಉದಾಹರಣೆಗಳೊಂದಿಗೆ ಮಾರ್ಮಿಕವಾಗಿ ತಿಳಿಸುವುದನ್ನು ಕಾಣುತ್ತೇವೆ. ಆಧುನಿಕತೆಯ ಇಂದಿನ ಬದುಕಿನಲ್ಲಿ ಮಾನವೀಯ ಸಂಬಂಧಗಳಿಗೆ ಬೆಲೆ ಇಲ್ಲದಿರುವುದನ್ನು ಖಂಡಿಸುವ ಚಿತ್ರಣ ಕಂಡುಬರುತ್ತದೆ.

೮. ಪ್ರಾಚೀನ ಕಾಲದಿಂದ ಇಂದಿನವರೆಗೆ ಸಮಾಜ ಬಂಜೆಯರಾದ ಹೆಣ್ಣು ಮಕ್ಕಳನ್ನು ಕಾಣುವ ಮತ್ತು ನಡೆಸಿಕೊಳ್ಳುವ ಕ್ರಿಯೆ ಹೇಗಿರುತ್ತವೆ. ತಾಯ್ತನದ ಪ್ರೀತಿ ಎಂತಹದ್ದು, ಪಾತಿವೃತ್ಯದ ಮಹಿಮೆ ಹೇಗಿರುತ್ತದೆ, ಸವತಿ ಮತ್ಸರ, ಪ್ರೀತಿ ಪ್ರೇಮ, ಗೆಳೆತನ, ವೈರತ್ವ, ತ್ಯಾಗ, ಮೋಸ, ವಂಚನೆ ಮುಂತಾದವುಗಳ ಪರಿಣಾಮಗಳನ್ನು, ಸಮಾಜದ ಸ್ವಾಸ್ಥವನ್ನು ಹಾಳುಮಾಡುವ ವಾಸ್ತವ ಘಟನೆಗಳನ್ನು ತಿಳಿಸುತ್ತಾ, ಹಾಸ್ಯ ಹಾಗೂ ವಿಡಂಬನೆ ಮಾಡುತ್ತ ಅವುಗಳನ್ನು ಕಠೋರವಾಗಿ ಖಂಡಿಸುವುದನ್ನು ಅವರ ಕಥನಗಳಲ್ಲಿ ಕಾಣುತ್ತೇವೆ. ಗೊಂದಲಿಗರು ಇಂದಿನ ರಾಜಕಾರಣ, ಆಡಳಿತ ವ್ಯವಸ್ಥೆ, ರೈತರ ಬದುಕನ್ನು ಕುರಿತು ವಿವರಿಸುತ್ತಾರೆ.

೯. ಗೊಂದಲಿಗರ ಕಥನಗಳನ್ನು ಗಮನಿಸಿದಾಗ ಪುರಾಣ, ಚರಿತ್ರೆ, ಹಾಗೂ ವಾಸ್ತವಿಕ ಬದುಕಿನ ಕಥೆಗಳನ್ನು ಒಂದಕ್ಕೊಂದು ಹೆಣೆದು ಪ್ರೇಕ್ಷಕರ ಮುಂದೆ ಸಮಾಜದ ಸ್ವಾಸ್ಥ ಕಾಪಾಡುವ ಮತ್ತು ಹಾಳುಮಾಡುವ ವಿಷಯಗಳನ್ನು ಅಭಿವ್ಯಕ್ತ ಪಡಿಸುತ್ತಾ ನಿಮಗೆ ಯಾವುದು ಬೇಕು, ಯಾವುದು ಬೇಡ ಎಂಬುದರ ಆಯ್ಕೆ ನಿಮ್ಮದು ಎಂದು ತಿಳಿಸುತ್ತಾರೆ. ನಳ–ನಿಳ, ಭೋಜರಾಜನ ಕಥೆ, ಸತ್ಯ ಹರಿಶ್ಚಂದ್ರನ ಕಥೆ, ವಿಕ್ರಮರಾಜನ ಕಥೆ, ಹೇಮರಡ್ಡಿ ಮಲ್ಲಮ್ಮ ಮುಂತಾದ ಕಥೆಗಳನ್ನು ಪರಿಣಾಮಕಾರಿಯಾಗಿ ಹೇಳುವುದು ಕಂಡುಬರುತ್ತದೆ. ಪುರಾಣಗಳಿಗೆ ಸಂಬಂಧಿಸಿದ ವಿಷಯಗಳಾದ ಸವದತ್ತಿ ಎಲ್ಲಮ್ಮನ ಕಥೆ, ಗಿರಿಜಾ ಕಲ್ಯಾಣ, ಗಂಗೇ ಗೌರಿ, ಮಹಾಸತಿ ಅನುಸೂಯಾ ಮುಂತಾದ ಕಥೆಗಳನ್ನು ಹಾವ ಭಾವ, ಆವೇಶಗಳ ಮೂಲಕ ಮನಮುಟ್ಟುವಂತೆ ತಿಳಿಸುತ್ತಾರೆ. ಪುರಾಣ ಕಥೆಗಳಲ್ಲಿಯ ಗಂಭೀರವಾದ ವಿಷಯಗಳನ್ನು ಹೇಳುವಾಗ ಅನೇಕ ಅಡ್ಡಕಥೆಗಳನ್ನು ಹೇಳುತ್ತಾ ಪುರಾಣಗಳ ನಾಯಕರ ಸ್ವಭಾವ, ಲಕ್ಷಣಗಳನ್ನು ಕೆಲ ಸಂದರ್ಭಗಳಲ್ಲಿ ಗಂಭೀರವಾಗಿ ಚಿತ್ರಿಸಿದರೆ ಮತ್ತೆ ಕೆಲ ಸಂದರ್ಭಗಳಲ್ಲಿ ಜನಸಾಮಾನ್ಯರಂತೆ

ಚಿತ್ರಿಸುವುದನ್ನು ಕಾಣುತ್ತೇವೆ. ಸವದತ್ತಿ ಎಲ್ಲಮ್ಮನ ಕಥೆಯಲ್ಲಿ ಅವಳಲ್ಲಿದ್ದ ಪತಿವೃತಾ ಧರ್ಮದ ಆಚರಣೆ ಹಾಗೂ ಅವಳಲ್ಲಿರುವ ಸೌಮ್ಯತೆಯನ್ನು ಪ್ರಕಟಿಸುತ್ತಾರೆ ಆದರೆ ರೇಣುಕಾ ಮಹಾತ್ಮೆಯಲ್ಲಿ ಅವಳಲ್ಲಿದ್ದ ರೌದ್ರಾವತಾರವನ್ನು ಹೇಳುತ್ತಾ ರೇಣುಕೆ ಮಹಿಷಾಸುರ ಮರ್ಧಿನಿಯಾಗಿ, ರುದ್ರಿಯಾಗಿ ಹೇಗೆ ದುಷ್ಟರನ್ನು ಸಂಹರಿಸುತ್ತಾಳೆ, ಅವಳ ವೀರಾವೇಶ, ರುದ್ರಾವತಾರಗಳು ಪ್ರೇಕ್ಷಕರು ಬೆಚ್ಚಿ ಬೀಳುವಂತೆ ಅಭಿನಯದ ಮೂಲಕ ವಿವರಿಸುವ ಸನ್ನಿವೇಶಗಳು ಕಂಡುಬರುತ್ತವೆ. ಈ ಸಂದರ್ಭಗಳಲ್ಲಿ ಕಥೆಯ ನಿರೂಪಕರಿಗೆ ಕುಂಕುಮ ಹಾಗೂ ಭಂಡಾರ ಹಚ್ಚಿ ಅವರನ್ನು ರೌದ್ರವಾಗಿಸುವ ಪ್ರಸಂಗಗಳು ಜರಗುತ್ತವೆ. ಮಾತೃದೇವತೆಗಳ ಆರಾಧಕರಾದ ಇವರು ಮಾತೃದೇವತೆಗಳ ಚರಿತ್ರೆಗಳನ್ನು ಅತ್ಯಂತ ಭಯ, ಭಕ್ತಿ, ನಿಷ್ಠೆ, ಶ್ರದ್ದೆಯಿಂದ ಹೇಳುತ್ತಿರುವುದು ಕಂಡುಬರುತ್ತದೆ.

೧೦. ಗೊಂದಲಿಗರ ಕಥನಗಳು ಸಾಮಾನ್ಯವಾಗಿ ಜನಪದರ ಅದ್ಭುತ, ರಮ್ಯ ಹಾಗೂ ಪವಾಡ ಕಥೆಗಳ ಪ್ರಭಾವ, ಪ್ರೇರಣೆಯ ಹಿನ್ನೆಲೆಯಲ್ಲಿ ಸೃಷ್ಟಿಯಾದವುಗಳೆಂದು ಹೇಳಬಹುದು. ನಾರದರು ತುಳಿಸಿ ಗಿಡದಲ್ಲಿಯ ಹುಳ ಆಗುವುದು, ಮೀನಿನ ಹೊಟ್ಟೆಯಲ್ಲಿ ಸಾವಿನ ಗುಟ್ಟನ್ನು ಅಡಗಿಸಿಟ್ಟಿರುವುದು, ರಾಕ್ಷಸಿಯರು ಸುಂದರ ದೇವಕನ್ನಿಕೆಯರಾಗಿ ರೂಪ ಪಡೆಯುವುದು, ಆರಾಧ್ಯ ದೈವಗಳು ರೂಪ ಬದಲಾಯಿಸಿಕೊಂಡು ಜಂಗಮ, ಸನ್ಯಾಸಿ ರೂಪದಲ್ಲಿ ಬಂದು ಭಕ್ತರಿಗೆ ಸಹಾಯ ಮಾಡುವುದು, ಕಷ್ಟದಲ್ಲಿ ಸಿಲುಕಿದವರಿಗೆ ಜಯ ಸಾಧಿಸುವ ಸಲುವಾಗಿ ಋಷಿ ಮುನಿಗಳು ಮಂತ್ರದ ಹರಳುಗಳನ್ನು ಸೃಷ್ಟಿಸಿ ಕೊಡುವುದು, ಅವುಗಳ ಸಹಾಯದಿಂದ ದುಷ್ಟರನ್ನು ಸಂಹರಿಸುವುದು ಅಥವಾ ಬುದ್ಧಿ ಕಲಿಸುವುದು, ಕೀಲು ಕುದುರೆಯ ಸಹಾಯದಿಂದ ಅಂತರಿಕ್ಷದ ಮಾರ್ಗದಲ್ಲಿ ದೇಶ ಸುತ್ತುವುದು, ಮಕ್ಕಳ ಫಲಕ್ಕಾಗಿ ರಾಜ ದೇವರನ್ನು ಒಲಿಸಿಕೊಳ್ಳಲು ದೇವಸ್ಥಾನಕ್ಕೆ ತಪಸ್ಸಿಗಾಗಿ ಹೋಗುವುದು, ಹರಕೆ ತೀರಿಸುವುಕ್ಕಾಗಿ ನರಬಲಿ ಕೊಡುತ್ತೇನೆ ಎಂದು ಬೇಡಿಕೊಳ್ಳುವುದು. ವಿಭೂತಿಯನ್ನು ಹಾಲು ಮತ್ತು ನೀರಾಗಿ ಪರಿವರ್ತಿಸುವುದು, ವಿಭೂತಿಯನ್ನು ಗುಡಿಸಲುಗಳ ಮೇಲೆ ಹಾಕಿ ಗುಡಿಸಲನ್ನು ಅರಮನೆಯಾಗಿ ಪರಿವರ್ತಿಸುವುದು, ಸತ್ತ ಮಗುವೊಂದನ್ನು ದೇವಿಯ ಅನುಗ್ರಹದಿಂದ ಹನ್ನೆರಡು ವರ್ಷದ ಮಗನನ್ನಾಗಿ ಪಡೆಯುವುದು, ಆರಾಧ್ಯ ದೈವವೊಂದು ದುಷ್ಟ ವ್ಯಕ್ತಿಯ ಮೈಮೇಲೆ ವಿಭೂತಿ ಚೆಲ್ಲಿದಾಗ ಅವಗುಣ ಅಳಿದು ಶಿವಗುಣ ಬರುವುದು, ಹೋದ ಕಣ್ಣುಗಳು ಮತ್ತೆ ಬರಲು ಬಾವಿಯಲ್ಲಿಯ ಅಡಕಿ, ನಗೋ ಎಲಿ, ಕಮಲದ ಹೂವು, ಕಲ್ಲು ಸುಣ್ಣ, ಕರೆ ಹುಣಸೆ ಸೊಪ್ಪು ತರುವುದರ ಮೂಲಕ ಮತ್ತೆ ಕಣ್ಣುಗಳನ್ನು ಪಡೆಯುವುದು, ದೇವಲೋಕದ ದೇವಕನ್ನೆಯರು ಶಾಪದಿಂದ ಮೂರು ದಿನದ ಕೂಸಾಗಿ ಮರ್ತ್ಯ ಲೋಕಕ್ಕೆ ಬರುವುದು, ಪರಮಾತ್ಮ ಜಂಗಮ ರೂಪ ತಾಳಿ ಅಬಲೆಯ ರಕ್ಷಣೆಗಾಗಿ ಬರುವುದು, ಮಹಿಳೆಯೊಬ್ಬಳು ಬಂಜೆ ಎಂಬ ಕಾರಣದಿಂದ ಕೈಲಾಸದಿಂದ ಮರ್ತ್ಯಲೋಕಕ್ಕೆ ಹಿಂತಿರುಗಿ ಕಳಿಸುವುದು. ಶೀಲಾವತಿ ಕಥೆಯಲ್ಲಿ ಎಷ್ಟೋ ವರ್ಷಗಳವರೆಗೆ ಮಗನ ಹಾಗೂ ಸತ್ತ ದಾದಿಯರ ದೇಹವು ಕೆಡದಂತೆ ಇಡುವ ವೈಜ್ಞಾನಿಕ ವ್ಯವಸ್ಥೆ ಕಂಡು ಬರುವುದು. ಗೊಂದಲಿಗರ ದೃಷ್ಟಿಯಲ್ಲಿ ದೇವಲೋಕ, ಯಮಲೋಕ, ಪಾತಾಳಲೋಕಗಳ ಪರಿಕಲ್ಪನೆಗಳು, ಹೀಗೆ ಗೊಂದಲಿಗರ ಕಥೆಗಳಲ್ಲಿ ಅನೇಕ ಅದ್ಭುತ, ರಮ್ಯ, ಪವಾಡಗಳನ್ನು

ಹೆಣೆದು ಕಥೆ ಹೇಳುವುದರ ಮೂಲಕ ಪ್ರೇಕ್ಷಕರ ಮನಸ್ಸಿನಲ್ಲಿ ಅದ್ಭುತವಾದ ಕಲ್ಪನಾ ಲೋಕಗಳನ್ನು ಸೃಷ್ಟಿಸುವುದು ಕಂಡುಬರುತ್ತದೆ.

೧೧. ಗೊಂದಲಿಗರ ಕಥೆಗಳಲ್ಲಿ ಕಳೆದುಕೊಂಡ ಸಂಬಂಧಗಳನ್ನು ಹುಡುಕುತ್ತಿರುವಾಗ ಅನ್ನ ಛತ್ರಗಳು ಇವರನ್ನು ಒಂದು ಮಾಡುವ ಕಾರ್ಯ ಮಾಡುತ್ತವೆ. ಅಲೆಮಾರಿಗಳಾದ ಗೊಂದಲಿಗರು ತಮ್ಮ ಬಂಧು ಬಳಗವನ್ನು ಕೂಡಿಕೊಳ್ಳುವುದು ಇಂತಹ ಅನ್ನ ಛತ್ರಗಳಲ್ಲಿ. ಇವರು ತಮ್ಮ ಸಹಜ ಬದುಕನ್ನೆ ಕಥೆಗಳಲ್ಲಿ ಅಳವಡಿಸಿಕೊಂಡಿದ್ದಾರೆ.

೧೨. ಗೊಂದಲಿಗರರು ಪಶು, ಪ್ರಾಣಿ ಪಕ್ಷಿಗಳನ್ನು ಸಾಕುವವರು. ಇವುಗಳ ಜೊತೆಗೆ ಅವರು ಹೇಗೆ ಅವಿನಾಭಾವ ಸಂಬಂಧಗಳನ್ನು ಹೊಂದಿದ್ದರು ಎಂಬುದನ್ನು ಇವರ ಕಥೆಗಳ ಮೂಲಕ ಕಾಣಬಹುದು.

೧೩. ದೈವೀ ಆರಾಧನೆಯಲ್ಲಿ ಅತಿಯಾದ ಭಯ, ಭಕ್ತಿ, ನಂಬಿಕೆಯನ್ನು ಹೊಂದಿದ ಗೊಂದಲಿಗರ ಕಥೆಗಳಲ್ಲಿ ಹೆಚ್ಚಾಗಿ ಅಂಬಾಭವಾನಿ, ಸವದತ್ತಿ ಎಲ್ಲಮ್ಮ, ಚಂಡಿ ಚಾಮುಂಡಿಯರ ದೇವಾಲಯಗಳ ವರ್ಣನೆಗಳನ್ನು ಕಾಣುತ್ತೇವೆ. ಇವರು ತಮ್ಮ ಕಥನಗಳಲ್ಲಿ ಅಂಬಾಭವಾನಿ ಹಾಗೂ ಆಯಾ ಪ್ರದೇಶಗಳ ಇತರೆ ಮಾತೃ ದೇವತೆಗಳ ಸ್ತುತಿ ಗೀತೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಿರುವುದು ಕಂಡುಬರುತ್ತದೆ.

೧೪. ವಿವಿಧ ಪ್ರದೇಶಗಳಲ್ಲಿ ವಾಸಿಸುವ ಗೊಂದಲಿಗರು ಪ್ರಾದೇಶಿಕ ಭಾಷೆಯನ್ನು ಕಲಿತು ಅಲ್ಲಿಯ ಜನರೊಂದಿಗೆ ಚತುರತನದಿಂದ ವ್ಯವಹರಿಸುವ ಮತ್ತು ಆ ಭಾಷೆಯಲ್ಲಿಯೇ ಸಾಹಿತ್ಯ ಹೇಳುವ ಇವರನ್ನು ಬಹು ಭಾಷಾ ಕಲಾವಿದರು ಎಂದು ಹೇಳಬಹುದು.

೧೫. ಗೊಂದಲಿಗರು ತಮ್ಮ ಬದುಕಿನ ಸಾಮಾಜಿಕ, ಸಾಂಸ್ಕೃತಿಕ ಪ್ರಕ್ರಿಯೆಗಳಾದ ಜನನ, ಮರಣ, ನೀತಿ, ಮುಂತಾದವುದವುಗಳ ಆಚರಣೆ, ಸಂಪ್ರದಾಯ, ಸಂವೇದನೆಗಳನ್ನು ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ.

೧೬. ಆಶು ಕವಿಗಳಾದ ಗೊಂದಲಿಗರು ಸಂದರ್ಭ, ಸನ್ನಿವೇಶಕ್ಕೆ ತಕ್ಕಂತೆ ಪದ್ಯಗಳನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿದ್ದಾರೆ. ಇವರ ಕಥನಗಳಲ್ಲಿ ಗೊಂದಲ ಪದಗಳು, ತತ್ವಪದಗಳು, ನೀತಿಪದಗಳು ಮನರಂಜನಾ ಪದಗಳಿರುವುದು ಕಂಡುಬರುತ್ತವೆ. ಗೊಂದಲಿಗರು ಹೇಳುವ ಸ್ತುತಿ ಪದ್ಯಗಳಲ್ಲಿ ಆಯಾ ಪ್ರದೇಶದ ಸುತ್ತ ಮುತ್ತಲಿನ ಪ್ರಮುಖ ದೇವರುಗಳನ್ನು ಸ್ಮರಿಸಿ, ಅವರನ್ನು ಗೊಂದಲದ ಪೂಜೆಗೆ ಆಹ್ವಾನಿಸಿ, ಆರಾಧನೆ ಮಾಡುವುದು ಗೊಂದಲದ ಪೂಜೆಯಲ್ಲಿ ಕಂಡುಬರುತ್ತದೆ. ಸಂಪ್ರದಾಯಕ ಹಾಗೂ ಧಾರ್ಮಿಕ ಗುಗ್ಗಳ ಕಾರ್ಯದ ಪಾವಿತ್ರತೆಯಷ್ಟೇ ಗೊಂದಳವು ಸಹ ಪ್ರಾಮುಖ್ಯತೆಯನ್ನು ಹೊಂದಿತ್ತು. ಗೊಂದಲಿಗರು ಹೇಳುವ ಕಥನಗಳಲ್ಲಿ ಸಾಮಾಜಿಕ ನೆಲೆಗಟ್ಟನ್ನು ಗಟ್ಟಿಗೊಳಿಸುವಲ್ಲಿ ಸ್ಥಿರತೆ ಮತ್ತು ಸಮಾನತೆಯನ್ನು ಉಳಿಸುವಲ್ಲಿ ಇವರ ಪದಗಳು ಪ್ರಮುಖ ಪಾತ್ರವಹಿಸುತ್ತವೆ.

೧೭. ಗೊಂದಲಿಗರ ಕಥೆಗಳ ಭಾಷೆ, ನಾಣ್ಣುಡಿ, ಗಾದೆ ಮಾತುಗಳು, ಒಗಟು, ಪಡೆನುಡಿ, ಜೋಡಿಪದ ಇವುಗಳನ್ನು ಹೇರಳವಾಗಿ ಬಳಸಿರುವುದರಿಂದ ಗೊಂದಲಿಗರ ಕಥನಗಳ ಸೌಂದರ್ಯ ಇಮ್ಮಡಿಯಾಗಿದೆ. ಇವರು ಬಳಸಿರುವ ಅನೇಕ ಅಚ್ಚ ದೇಸಿ ಶಬ್ಧಗಳು ಭಾಷಾ ವಿಜ್ಞಾನಿಗಳ ಅಧ್ಯಯನಕ್ಕೆ ಆಕರಗಳಾಗುತ್ತವೆ.

೧೮. ಒಂದು ಕಾಲದಲ್ಲಿ ಗೊಂದಲಿರ ಆಟಗಳು ರಾತ್ರಿಯಿಂದ ಬೆಳಗಿನವರೆಗೆ ನಡೆಯುತ್ತಿದ್ದವು. ಇಂದು ಗೊಂದಲ ಕಥೆಗಳನ್ನು ಹೇಳಿಸುವವರ ಸಂಖ್ಯೆ ಕಡಿಮೆಯಾಗಿದೆ ಮತ್ತು ಗೊಂದಲದ ಪೂಜೆ ಕಂಪನಿ ನಾಟಕಗಳಂತೆ ಮೂರು ತಾಸುಗಳ ಅವಧಿಗಿಳಿದಿವೆ. ಇದಕ್ಕೆ ಜನರಲ್ಲಿ ಆಸಕ್ತಿ ಕಡಿಮೆಯಾಗಿರುವುದೆ ಇದಕ್ಕೆ ಕಾರಣ ಎಂದು ಹೇಳಬಹುದು. ಗೊಂದಲದ ಪೂಜೆ ನಡೆಸಲು ಹರಕೆ ಹೊತ್ತ ಅನೇಕರು ಇಂದು ತುಳಜಾಪುರಕ್ಕೆ ಹೋಗಿ ಸಾಂಕೇತಿಕವಾದ ಗೊಂದಲದ ಪೂಜೆ ಮಾಡಿಸಿಕೊಂಡು ಬರುವುದು ಕಂಡು ಬರುತ್ತದೆ. ಆಧುನಿಕ ಮನರಂಜನಾ ಮಾಧ್ಯಮಗಳೂ ಗೊಂದಲಿಗರ ಆಟದ ಮೇಲೆ ಪ್ರಭಾವ ಬೀರಿರುವುದು ಕಂಡುಬರುತ್ತದೆ.

೧೯. ಗೊಂದಲಿಗರ ಕಥೆಗಳಲ್ಲಿಯ ಸಾಹಿತ್ಯ, ಭಾಷೆ, ಸಂಭಾಷಣೆ, ಪಾತ್ರಗಳ ಸಂಸ್ಕರಣೆ, ಅಭಿನಯ, ಹಾವಭಾವ ಅಲ್ಲಿಯ ಅದ್ಭುತ ನಾಟಕೀಯತೆಯ ಸನ್ನಿವೇಶಗಳು ಪ್ರೇಕ್ಷಕರನ್ನು ಮಂತ್ರಮುಗ್ದರನ್ನಾಗಿಸುವ ಶೈಲಿಗಳನ್ನು ಗೊಂದಲಿಗರ ಕಥನಗಳಲ್ಲಿ ಕಾಣುತ್ತೇವೆ.

**ಗೊಂದಲಿಗರ ಅಭಿವೃದ್ದಿಗಾಗಿ ಸಲಹೆ ಸೂಚನೆಗಳು**

೧. ಧಾರ್ಮಿಕ ಸಂಪ್ರದಾಯ ನೀತಿ ಪ್ರಧಾನವಾದ ಗೊಂದಲಕ್ಕೆ ಸಮಾಜದಲ್ಲಿ ಇನ್ನೂ ಹೆಚ್ಚು ಮನ್ನಣೆ ದೊರೆಯಬೇಕು. ಕಾರಣ ಈ ಗೊಂದಲ ಕಾರ್ಯವನ್ನೇ ನಂಬಿಕೊಂಡು ಬದುಕುತ್ತಿರುವ ಹಲವಾರು ಗೊಂದಲಿಗರಿದ್ದಾರೆ. ಗೊಂದಲಿಗರ ಕಥನ ಸಾಹಿತ್ಯವನ್ನು ಉಳಿಸಿ ಬೆಳೆಸುವ ಕ್ರಮ ಕೈಗೊಳ್ಳಬೇಕು. ಗೊಂದಲಿಗರ ಈ ಪಾರಂಪರಿಕ ಪರಂಪರೆಯನ್ನು ತಮ್ಮ ಮುಂದಿನ ಪೀಳಿಗೆಗೆ ಕಲಿಸುವಲ್ಲಿ ಹಾಗೂ ಮುಂದುವರೆಸುವಲ್ಲಿ ಆಸಕ್ತಿ ತಾಳಬೇಕು. ಇವರ ಕಲಾ ಪರಂಪರೆ ಮುಂದುವರೆಯುವ ನಿಟ್ಟಿನಲ್ಲಿ ನುರಿತ ಕಲಾವಿದರಿಂದ ತರಬೇತಿ ನೀಡುವ ತರಬೇತಿ ಮನೆಗಳನ್ನು (ಶಾಲೆ) ಸ್ಥಾಪಿಸಬೇಕು. ಕೆಲವು ಸಂದರ್ಭದಲ್ಲಿ ಮಾತ್ರ ಗೊಂದಲ ಕಾರ್ಯಗಳು ನಡೆಯುವುದರಿಂದ ಉಳಿದ ಸಮಯದಲ್ಲಿ ಸಂಘ ಸಂಸ್ಥೆಗಳು ಅವರಿಗೆ ಹಲವಾರು ಸಾಂಸ್ಕೃತಿಕ ಕಾರ್ಯ- ಕ್ರಮಗಳನ್ನು ಹಮ್ಮಿಕೊಳ್ಳಬೇಕು.

೨. ಸ್ವರಚಿತ ಮೌಖಿಕ ಸಾಹಿತ್ಯವಾದ ಈ ಕಲಾ ಪರಂಪರೆಯ ಕಥೆ ಹಾಡುಗಳನ್ನು ಲಿಖಿತ ರೂಪದಲ್ಲಿ ದಾಖಲಿಸುವ ಸಂಶೋಧನಾ ಕಾರ್ಯಸಾಗಬೇಕು. ಗೊಂದಲಿಗರಿಗೆ ಜೀವನದ ಮೂಲ ಸೌಕರ್ಯಗಳಾದ ವಸತಿ, ಆಹಾರ, ಶಿಕ್ಷಣ, ಉದ್ಯೋಗಗಳಲ್ಲಿ ಇವರಿಗೆ ಸಂಪೂರ್ಣವಾಗಿ ಸರ್ಕಾರದ ಸೌಲಭ್ಯಗಳು ದೊರೆಯುವಂತೆ ಮಾಡಬೇಕು. ಗೊದಲವನ್ನೇ ನಂಬಿದ ಹಲವಾರು

ಕುಟುಂಬಗಳ ಆರ್ಥಿಕ ಪರಿಸ್ಥಿತಿ ತುಂಬಾ ಶೋಚನಿಯವಾಗಿದೆ. ಆರ್ಥಿಕವಾಗಿ ಸಭಲತೆ ಹೊಂದಲು ಪರ್ಯಾಯ ಉದ್ಯೋಗಗಳ ಅವಕಾಶ ಕೊಡಬೇಕು.

೩. ಗೊಂದಲಿರ ಹೆಣ್ಣುಮಕ್ಕಳು ಹೆಚ್ಚಿನ ಶಿಕ್ಷಣ ಪಡೆಯುವಂತೆ ಅವರಿಗೆ ಮುಕ್ತ ಅವಕಾಶ ಕಲ್ಪಿಸಬೇಕು. ಸಮುದಾಯದ ಮಹಿಳೆಯರು ಎಚ್ಚೆತ್ತುಕೊಳ್ಳುವಲ್ಲಿ ಹಲವಾರು ಮಹಿಳಾ ಸಂಘಗಳನ್ನು, ಸ್ತ್ರೀಶಕ್ತಿ ಗುಂಪು ರಚನಾ ಶಕ್ತಿ ಸಂಘಗಳನ್ನು ರಚನೆ ಮಾಡಬೇಕು. ಗೊಂದಲಿಗರ ಯುವ ಪ್ರತಿಭಾವಂತ ಯುವಕರಿಗೆ ಸಮಾನವಾದ ವಿದ್ಯಾರ್ಹತೆಗೆ ತಕ್ಕಂತ ಉದ್ಯೋಗ ಅವಕಾಶಗಳನ್ನು ಕೊಡಬೇಕು.

೪. ಗೊಂದಲಿಗರ ಕಥನ ಸಾಹಿತ್ಯವನ್ನು ದಾಖಲಿಸುವ ನಿಟ್ಟಿನಲ್ಲಿ ಸಾಗಿದ್ದಾದರೆ ಪ್ರಫುಲ್ಲವಾದ ಜನಪದ ಸಾಹಿತ್ಯಕ್ಕೆ ಮತ್ತೊಂದು ವಿಶಿಷ್ಠ ಕೊಡುಗೆ ಕೊಟ್ಟಂತಾಗುತ್ತದೆ. ಗೊಂದಲ ಪರಂಪರೆಯಲ್ಲಿ ನಿರಾಸಕ್ತಿಯನ್ನು ತಾಳದಂತೆ ಸಮಾಜವು ಅವರಿಗೆ ಮನ್ನಣೆಯನ್ನು ಗೌರವವನ್ನು ಸಲ್ಲಿಸುವಂತಾಗಬೇಕು.

೫. ಗೊಂದಲಿಗರ ವಿಶಿಷ್ಠವಾದ ಖಿವಾರಿ ಮಾತೃಭಾಷೆಯನ್ನು ಉಳಿಸುವ ಹಾಗು ದಾಖಲಿಸುವ ಕಾರ್ಯ ನಡೆಯಬೇಕು.

೬. ಅರೆಅಲೆಮಾರಿ ಬುಡಕಟ್ಟು ಸಮುದಾಯದವರಲ್ಲಿ ಒಬ್ಬರಾದ ಗೊಂದಲಿಗರು ಒಂದು ಕಾಲದಲ್ಲಿ ಸಾಮಾಜದಲ್ಲಿ ಉತ್ತಮ ಸ್ಥಾನ ಮಾನಗಳನ್ನು ಹೊಂದಿದವರು. ಅವರ ಬದುಕು, ಸಾಂಪ್ರದಾಯಿಕ ಜೀವನ, ವೃತ್ತಿ ಮುಂತಾದ ವಿಷಯಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಈ ನಾಡಿನ ಚರಿತ್ರೆ, ಆಚಾರ, ವಿಚಾರ, ನೀತಿ, ಧರ್ಮ ಮುಂತಾದ ವಿಚಾರಗಳನ್ನು ತಮ್ಮ ಕಥನಗಳ ಮೂಲಕ ಅಭಿವ್ಯಕ್ತ ಪಡಿಸುವ ಶ್ರೇಷ್ಠ ಕಲಾವಿದರಾಗಿದ್ದಾರೆ. ಜನಪದ ಸಾಹಿತ್ಯ, ಕಿರ್ತನೆ, ವಚನ ಸಾಹಿತ್ಯ, ಇಂಥಹ ಅನೇಕ ಸಾಹಿತ್ಯಿಕ ಪ್ರಕಾರಗಳು ಗೊಂದಲಿಗರ ನಾಲಿಗೆ ಮೇಲೆ ಸರಾಗವಾಗಿ ಸಾಗುತ್ತವೆ, ಗೊಂದಲಿಗರು ಸಂದರ್ಭ ಸನ್ನಿವೇಶಗಳಿಗೆ ತಕ್ಕಂತೆ ಪದ್ಯಗಳನ್ನು ಸೃಷ್ಟಿ ಮಾಡುವ ಸಾಮರ್ಥ್ಯವನ್ನು ಹೊಂದಿದ ಆಶು ಕವಿಗಳಾಗಿದ್ದಾರೆ.

**ಪರಾಮರ್ಶನ ಗ್ರಂಥಗಳು**


* ಅರವಿಂದ ಮಾಲಗತ್ತಿ, (ಸಂ) **ಪುರಾಣ ಜಾನಪದ ಮತ್ತು ದೇಶಿವಾದ,** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೮೯.
* ಅಂಬಳಿಕೆ ಹಿರಿಯಣ್ಣ, **ಕಿನ್ನರಿ ಸಂಪ್ರದಾಯದ ಕಾವ್ಯಗಳು,** ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ೧೯೭೯.
* ಅಂಬಳಿಕೆ ಹಿರಿಯಣ್ಣ, **ಲೌಖಿಕ ಸಂಪ್ರದಾಯದ ಚೌಡಿಕೆ ಕಾವ್ಯಗಳು,** ಕನ್ನಡ ಅಧ್ಯಯನ ಸಂಸ್ಥೆ ಮೈಸೂರ ೧೯೮೫
* ಅಂಬಳಿಕೆ ಹಿರಿಯಣ್ಣ, **ಜಾನಪದ ಕೆಲವು ಅಧ್ಯಯನಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೪.
* ಕಮಲಾ ಹೆಮ್ಮಿಗೆ, **ಸವದತ್ತಿ ಎಲ್ಲಮ್ಮ ಹಾಗು ದೇವದಾಸಿ ಪದ್ಧತಿ** ಒಂದು ಅಧ್ಯಯನ, ವಿಮೋಚನ ಪ್ರಕಾಶನ, ಅಥಣಿ. ೧೯೯೮.
* ಕರೀಗೌಡ ಬೀಚನಹಳ್ಳಿ, **ಕಥೆ ಮತ್ತು ಹಾಡು,** ಪ್ರಸಾರಂಗ, ಕನ್ನಡ ವಿ.ವಿ. ಹಂಪಿ. ವಿದ್ಯಾರಣ್ಯ. ೨೦೦೩.
* ಕ್ಯಾತನಹಳ್ಳಿ ರಾಮಣ್ಣ, **ಗೊಂದಲಿಗರು;ಒಂದು ಅಧ್ಯಯನ,** ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ೧೯೮೨.
* ಕ್ಯಾತನಹಳ್ಳಿ ರಾಮಣ್ಣ, **ಶಿವಮೊಗ್ಗ ಜಿಲ್ಲೆಯ ಗೊಂದಲಿಗರ ಕಥೆಗಳು,** ಕನ್ನಡ ಅಧ್ಯಯನ ಸಂಸ್ಥೆ ಮೈಸೂರ ೧೯೭೨.
* ಕ್ಯಾತನಹಳ್ಳಿ ರಾಮಣ್ಣ, (ಸಂ) **ಫ್ಲೀಟರು ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು. ೧೯೭೨.
* ಕೀರ್ತಿನಾಥ. ಕುರ್ತಕೋಟಿ. **ಕನ್ನಡ ಸಾಹಿತ್ಯ ಸಂಗಾತಿ,** ಪ್ರಸಾರಂಗ, ಕನ್ನಡ ವಿ.ವಿ. ಹಂಪಿ ವಿದ್ಯಾರಣ್ಯ. ೧೯೯೫.
* ಗಂಗಾಧರ. ದೈವಜ್ಞ, **ಗೊಂದಲಿಗರು,** ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ವಿಧ್ಯಾರಣ್ಯ ೨೦೦೮.
* ಗಂಗಾಧರ. ದೈವಜ್ಞ, **ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ,** ಪ್ರಸಾರಾಂಗ, ಕನ್ನಡ ವಿ, ವಿ, ಹಂಪಿ ೨೦೦೦
* ಗದ್ದಗೀಮಠ. ಬಿ.ಎಸ್ **ಕನ್ನಡ ಜಾನಪದ ಕಥನ ಗೀತೆಗಳು,** ಕರ್ನಾಟಕ, ವಿ, ವಿ, ಧಾರವಾಡ, ೧೯೫೫.
* ಗದ್ದಗೀಮಠ. ಬಿ.ಎಸ್, **ಕನ್ನಡ ಜಾನಪದ ಗೀತೆಗಳು,** ಕರ್ನಾಟಕ ವಿ.ವಿ. ಧಾರವಾಡ ೧೯೬೩. ಗಾಯತ್ರೀ.ನಾವಡ, **ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು,** ರಾಷ್ಟ್ರಕವಿ ಗೋವಿಂದಪೈ ಸಂಶೋಧನ ಕೇಂದ್ರ ಉಡುಪಿ, ಸಿರಿ ಪ್ರಕಾಶನ ಹೊಸಪೇಟೆ. ೧೯೯೯.

* ಚಂದ್ರಕಾಂತ. ಪೋಕಳೆ, **ತುಳಜಾ ಭವಾನಿ,** ಧಾಮಿನಿ ಸಾಹಿತ್ಯ ವಿಜಯನಗರ, ಬೆಂಗಳೂರ ೨೦೦೮.
* ಚಂದ್ರಶೇಖರ.ಕಂಬಾರ, **ಉತ್ತರ ಕರ್ನಾಟಕ ಜಾನಪದ ರಂಗಭೂಮಿ** ಮನ್ವಂತರ ಪ್ರಕಾಶನ, ಧಾರವಾಡ ೧೯೬೫.
* ಚಂದ್ರಶೇಖರ.ಕಂಬಾರ, **ಕನ್ನಡ ಜಾನಪದ ವಿಶ್ವಕೋಶ ಸಂಪುಟ ೧ ಮತ್ತು ೨** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರ, ೧೯೮೫.
* ಚೆನ್ನಣ್ಣ. ವಾಲಿಕಾರ, **ಸೌದತ್ತಿ ಎಲ್ಲಮ್ಮ,** ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ , ಮೈಸೂರ. ೧೯೯೧.
* ಜವರೇಗೌಡ ದೇ, **ಜಾನಪದ ಅಧ್ಯಯನ,** ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರ, ೨೦೦೧.
* ಜ್ಯೋತಿ ಹೊಸೂರ, ಬಸವರಾಜ ಮಲಶೆಟ್ಟಿ, ನಿಂಗಣ್ಣ ಸಣ್ಣಕ್ಕಿ. (ಸಂ) **ಬೆಳವಲ,** ಕಾಲಗತಿ ಪ್ರಕಾಶನ, ರಾಯಬಾಗ ೧೯೮೨.
* ಜ್ಯೋತಿ ಹೊಸೂರ, ಜಾನಪದ ಕುರಿತು, **ಜಾನಪದ ಮಂಟಪ,** ಕಾಲಗತಿ ಪ್ರಕಾಶನ ರಾಯಭಾಗ ೧೯೮೬.
* ಡ್ಯಾನಿಯಲ್ ಫೆರ್ನಾಂಡಿಸ್,ಎಸ್.ಜೆ. **ಜೀ.ಶಂಪ ಅವರ ಜನಪದ ಕೃತಿಗಳು ಒಂದು ಅಧ್ಯಯನ** ರಾಜ್ ಪ್ರಕಾಶನ ಮೈಸೂರು ೨೦೦೮.
* **ತಿಪ್ಪೆಸ್ವಾಮಿ. ಈ. ಆರ್. ಮೌಖಿಕ ಕಥನ,** ವಿಜಯಲಕ್ಷ್ಮಿ ಪ್ರಕಾಶನ ಕುವೆಂಪು ನಗರ ಮೈಸೂರು. ೨೦೦೫.
* ನಾಗರತ್ನಾ ಟಿ.ಎನ್, ಮಂದಾಕಿನಿ (ಸಂ), **ಹರಿದಾಸರ ಜನಪ್ರೀಯ ಹಾಡುಗಳು,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರ, ೧೯೯೬.
* ನಾವಲಗಿ ಸಿ. ಕೆ. **ಜಾನಪದ ಸ್ಪಂದನ,** ಭರತ ಪ್ರಕಾಶನ, ಗೋಕಾಕ, ೧೯೮೯.
* ನಾವಲಗಿ ಸಿ.ಕೆ. **ಜಾನಪದ ಕಥನಗೀತ ಸಂಚಯ,** ಕನಕ ಸಾಹಿತ್ಯ ಪ್ರತಿಷ್ಠಾನ (ರಿ) ಬೆಂಗಳೂರ ೨೦೦೨.
* ನಾವಲಗಿ ಸಿ.ಕೆ. **ಬೆಳಗಾವಿ ಜಿಲ್ಲೆ ಜನಪದ ಕಲಾವಿದರು,** ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು. ೨೦೧೦.
* ನಾವಲಗಿ ಸಿ.ಕೆ. **ಜನಪದ ಸಡಗರ.** ಸಾಗರ ಪ್ರಕಾಶನ ವಿನಾಯಕ ಬಡಾವಣೆ ನಾಗರಬಾವಿ, ಬೆಂಗಳೂರ, ೨೦೧೧.
* ನಿಂಗಣ್ಣ. ಸಣ್ಣಕ್ಕಿ, **ಗೊಂದಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ** ಅಕಾಡಮಿ ಬೆಂಗಳೂರ, ೧೯೯೩.
* ಪರಮಶಿವಯ್ಯ ಜೀ. ಶಂ. ಪ. (ಸಂ) **ಕನ್ನಡ ವೃತ್ತಿಗಾಯಕ ಕಾವ್ಯಗಳು,** ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ೧೯೮೨.
* ಪರಮಶಿವಯ್ಯ ಜೀ.ಶಂ.ಪ. **ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು** ಮೈಸೂರು. ವಿಶ್ವವಿದ್ಯಾಲಯ ೧೯೭೯.

* ಪರಮಶಿವಯ್ಯ ಜೀ. ಶಂ. ಪ. (ಸಂ) **ಚಿತ್ರದುರ್ಗ ಜಿಲ್ಲೆಯ ಜನಪದ ಕಥೆಗಳು**, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು. ೧೯೮೩.
* ಪರಮಶಿವಯ್ಯ ಜೀ. ಶಂ. ಪ. (ಸಂ) **ಜನಪದ ಕಾವ್ಯ ಕಥೆಗಳು**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೧
* ಪಂಡಿತ. ಅವಳೀಕರ. **ಕರ್ನಾಟಕ ಮತ್ತು ಮರಾಠಿ ಸಾಹಿತ್ಯ**, ಕರ್ನಾಟಕ (ಅನು) ಎಸ್.ಪಿ. ಪಾಟೀಲ. ವಿ.ವಿ. ಧಾರವಾಡ. ೧೯೭೭.
* ಪಾಟೀಲ. ವ್ಹಿ.ಎಲ್. **ವಡ್ಡಾರಾಧನೆ ಜನಪದೀಯ ಅಧ್ಯಯನ**, ಕೀರ್ತಿ ಪ್ರಕಾಶನ, ಕರ್ನಾಟಕ ವಿ.ವಿ. ಧಾರವಾಡ. ೨೦೦೯.
* ಪಾಟೀಲ.ಪಿ.ಬಿ. **ಜನಪದ ಸಾಹಿತ್ಯ ದರ್ಶನ ಭಾಗ-೩ ಜನಪದ ನಂಬಿಕೆಗಳು**. ಪ್ರಸಾರಾಂಗ ಕರ್ನಾಟಕ ವಿ.ವಿ. ಧಾರವಾಡ. ೧೯೯೯.
* ಪೂಜಾರಿ ವ್ಹಿ. ಜಿ. **ಕನ್ನಡ ಸಾಹಿತ್ಯ ಜೀವನ ಮೌಲ್ಯಗಳು**, ಬಂಜಾರ ಪ್ರಕಾಶನ ಗುಲ್ಬರ್ಗಾ.
* ಬಸವರಾಜ. ಮಲಶೆಟ್ಟಿ, **ಸ್ವಾತಂತ್ರ ಹೋರಾಟ ಮತ್ತು ಲಾವಣಿ ಸಾಹಿತ್ಯ**, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ಹಂಪಿ ೧೯೯೮.
* ಬಸವರಾಜ. ಸಬರದ, (ಸಂ) **ಹೈದ್ರಾಬಾದ್ ಕರ್ನಾಟಕದ ತತ್ವಪದಗಳು** ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೦.
* ಬೆಟಗೇರಿ. ಕೃಷ್ಣಶರ್ಮ. **ಕನ್ನಡ ಜಾನಪದ ಸಾಹಿತ್ಯ**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ. ಧಾರವಾಡ.
* ಬೋರಲಿಂಗಯ್ಯ. ಹಿ.ಚಿ.(ಸಂ) **ಕರ್ನಾಟಕ ಜಾನಪದ ಕಲೆಗಳ ಕೋಶ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೧೯೯೫.
* ಮಲ್ಲಿಕಾರ್ಜುನ ಲಠ್ಠೆ (ಸಂ) **ಜಾನಪದ ಸಂಪದ**, ಎಂ.ಎಸ್. ಸುಂಕಾಪೂರ, ಅಭಿನಂದನಾ ಸಮಿತಿ ಕಲಬುರ್ಗಿ. ೧೯೮೨.
* ಮಂಜುನಾಥ. ಬೇವಿನಕಟ್ಟಿ, **ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.
* ಮದರಿ ಎ.ಎಂ. **ಗೊಂದಲಿಗ್ಯಾ**, ಲೋಹಿಯಾ ಪ್ರಕಾಶನ ಬಳ್ಳಾರಿ. ೨೦೧೨.
* ಮುದೇನೂರ. ಸಂಗಣ್ಣ. **ಗೊಂದಲಿಗರ ದೇವೇಂದ್ರಪ್ಪನ ಆಟಗಳು**, ಪ್ರಸಾರಾಂಗ ಕನ್ನಡ ವಿ.ವಿ.ಹಂಪಿ. ೧೯೯೩.
* ರಮೇಶ ಸ.ಚಿ. **ಅಲೆಮಾರಿಗಳ ಸ್ಥಿತಿಗತಿ**, ಪ್ರಸಾರಾಂಗ ವಿಶ್ವವಿದ್ಯಾಲಯ ಹಂಪಿ. ೨೦೦೫
* ರಮೇಶ ಸ.ಚಿ. (ಸಂ) **ಜನಪದ ಕರ್ನಾಟಕ, ಸಂಪುಟ-೩ ಸಂಚಿಕೆ** ಪ್ರಸಾರಾಂಗ ವಿ.ವಿ ಹಂಪಿ. ೨೦೦೪.
* ರಾಗೌ. **ಜಾನಪದ ಸಾಹಿತ್ಯ ರೂಪಗಳು**, ವಾಗ್ದೇವಿ ಪುಸ್ತಕಗಳು ಮೈಸೂರ, ೧೯೬೯.
* ರಾಗೌ. **ಕರ್ನಾಟಕ ಜಾನಪದ ಕಥೆಗಳು**, ತ.ವೆಂ.ಸ್ಮಾರಕ ಗ್ರಂಥಮಾಲೆ ೧೯೬೯

* ವಸಂತಮಾಲಾ ( ಸಂ) **ಎರಡು ಕಿನ್ನರಿ ಜೋಗಿ ಕಾವ್ಯಗಳು,** ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರ ೧೯೮೧.
* ವಸಂತಲಕ್ಷ್ಮಿ ಕೆ. **ಭಾರತೀಯ ಸಂಸ್ಕೃತಿ** ಮತ್ತು ಮಹಿಳೆ ಮಿಥಿಕ ಸೊಸೈಟಿ ಬೆಂಗಳೂರು ೨೦೦೯.
* ವಾಲಿ, ಎಂ.ಎನ್. **ವಿಜಾಪೂರ ಜಿಲ್ಲೆಯ ಕನ್ನಡ ಜನಪದ ಕಥಾಗುಚ್ಚ,** ಭುವನೇಶ್ವರಿ ಪ್ರಕಾಶನ, ವಿಜಯಪುರ ೨೦೦೮.
* ವಿರೇಶ. ಶೇ. ಬಡಿಗೇರ. **ಉತ್ತರ ಕರ್ನಾಟಕ ಜನಪದ ಗೀತ ಮೇಳಗಳು,** ವಿಮೋಚನಾ ಪ್ರಕಾಶನ ಅಥಣಿ ೧೯೯೯.
* ವಿಜಯಕುಮಾರ. ಕಟಗಿಹಳ್ಳಿಮಠ, **ಗೊಂದಲಿಗರು; ಮಹಿಳಾ ಸಂಸ್ಕೃತಿ,** ನೀಲಪರ್ವತ ಪ್ರಕಾಶನ ಧಾರವಾಡ, ೨೦೧೦.
* ವೀರಣ್ಣ ದಂಡೆ, **ದೇಸಿ ಸಂಪುಟ-೨,** ಭಾಗ್ಯಶ್ರೀ ಎಂಟರ್ ಪ್ರೈಸಸ್ ವಿಜಯನಗರ
* ವಿಜಯದೇವಿ, **ಸಾಹಿತ್ಯ ಪ್ರಜ್ಞೆಮತ್ತು ಮಹಿಳೆ,** ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು ಗುಲ್ಬರ್ಗಾ ೨೦೦೭.
* ವಿಜಯಶ್ರೀ.ಸಬರದ, **ಮಹಿಳೆ ಶೊಷಣೆ ಸವಾಲುಗಳು,** ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ ೨೦೦೫
* ವೆಂಕಟಗಿರಿ.ದಳವಾಯಿ(ಸಂ), **ಸಂಸ್ಕೃತಿ ಮಹಿಳಾ ಮಾಲಿಕೆ ಸಂಪುಟ ೬,** ಗೀತಾ ನಾಗಭೂಷಣ (ಪ್ರ.ಸಂ) ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರ.
* ಶಂಕರಾವ್ ಚ. ನ. **ಸಮಾಜಶಾಸ್ತ್ರದ ಮೂಲ ತತ್ವಗಳು,** ಜೈ ಭಾರತ್ ಪ್ರಕಾಶನ ಮಂಗಳೂರ, ೨೦೧೧.
* ಶಾಂತಾ. ಇಮ್ರಾಪೂರ, **ಮಹಿಳೆ ಸಾಹಿತ್ಯ ಸಂಸ್ಕೃತಿ,** ತ್ವರಿತ ಮುದ್ರಣ ಕಾಗದಗೇರಿ ಓಣಿ ಗದಗ, ೨೦೦೧.
* ಶಿವಾನಂದ. ಲ. ಪಾಚಂಗಿ, **ಗೋಂದಳಿ,** ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರ, ೨೦೦೮.
* ಶಿವಪ್ರಕಾಶ ಎಂ.ಎಂ.**ನಾಡೋಜ ಮುದೇನೂರ ಸಂಗಣ್ಣ,** ಪ್ರಸಾರಾಂಗ ಕನ್ನಡ ವಿ. ವಿ.ಹಂಪಿ ೨೦೧೦
* ಶಿವರುದ್ರಪ್ಪ ಜಿ.ಎಸ್.(ಸಂ) **ಕರ್ನಾಟಕ ಜಾನಪದ,** ಬೆಂಗಳೂರ ವಿ.ವಿ.ಬೆಂಗಳೂರ, ೧೯೮೧.
* ಶಿವನಂಜಯ್ಯ.ಡಿ, **ಜನಪದ ಸಾಹಿತ್ಯದಲ್ಲಿ ಬಂಡಾಯದ ನೆಲೆಗಳು,** ಗಾಯತ್ರಿ ಎಂಟರ್ ಪ್ರೈಸಸ್ ಮೈಸೂರ, ೨೦೦೭.
* ಸಂಧ್ಯಾ ರೆಡ್ಡಿ ಕೆ. ಆರ್.**ಕನ್ನಡ ಜನಪದ ಕಥೆಗಳು.** ಕ.ಸಾ.ಪರಿಷತ್ ಬೆಂಗಳೂರ, ೧೯೮೦.
* ಸಂಧ್ಯಾ ರೆಡ್ಡಿ ಕೆ.ಆರ್.(ಸಂ) **ಮಹಿಳಾ ಜಾನಪದ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು. ೨೦೦೩.
* ಸಿದ್ದಲಿಂಗಯ್ಯ, **ಗ್ರಾಮದೇವತೆಗಳು,** ಮೂಲ ಭಾರತಿ ಪ್ರಕಾಶನ ಚಾಮರಾಜಪೇಟೆ ಬೆಂಗಳೂರ ೧೯೯೭.

* ಸಿದ್ಧರಾಮಯ್ಯ ಎಸ್.ಜಿ. ಸಂದ್ಯಾ ರೆಡ್ಡಿ ಕೆ.ಆರ್, **ಸುವರ್ಣ ಜನಪದ ಕಾವ್ಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ ಭವನ ಬೆಂಗಳೂರು.೨೦೦೬.
* ಸಿಂಪಿ ಲಿಂಗಣ್ಣ, **ಉತ್ತರ ಕರ್ನಾಟಕ ಜನಪದ ಕಥೆಗಳು** ಸಾಹಿತ್ಯ ಅಕೆಡಮಿ ೧೯೭೨.
* ಸೋಮಶೇಖರ. ಇಮ್ರಾಪೂರ, **ಜಾನಪದ ಅವಲೋಕನ,** ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೨.
* ಹಳ್ಳಿಕೇರಿ ಎಫ್.ಟಿ. ಮತ್ತು ರವಿಂದ್ರನಾಥ ಕೆ. **ದಶಕದ ಕನ್ನಡ ಸಾಹಿತ್ಯ** ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೨.
* ಹನುಮಂತಪ್ಪ. ಬಳ್ಳಕೆರೆ, **ಕೆರೆ ಹೊನ್ನಮ್ಮ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ ಬೆಂಗಳೂರು ೧೯೯೪.
* ಹರಿಲಾಲ ಪವಾರ, **ಜನಪದ ಸಾಹಿತ್ಯಕ್ಕೆ ವಿಜಾಪುರ ಜಿಲ್ಲೆಯ ಕೊಡುಗೆ,** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ ೨೦೦೨.
* ಹೆಂಡಿ ಬಿ. ಬಿ. **ಆಯ್ದ ಜನಪದ ಕಥನ ಗೀತೆಗಳು,** ಕ.ವಿ.ವಿ. ಧಾರವಾಡ ೧೯೭೮.
* ಹೆಬ್ಬಾಲೆ. ಕೆ. ನಾಗೇಶ.**ಜಾನಪದ ಕರ್ನಾಟಕ,** ಸಂಪುಟ ೫ ಸಂಚಿಕೆ ೨. ಪ್ರಸಾರಾಂಗ ಕ.ವಿ.ವಿ. ಹಂಪಿ ೨೦೦೬.

**ಮಹಾ ಪ್ರಬಂಧಗಳು**

* ದೇವೇಂದ್ರ ಕುಮಾರ. ಸಿ. ಹಕಾರಿ, **ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದು:ಖಾಂತ ನಿರೂಪಣೆ-ಒಂದು ಸಾಂಸ್ಕೃತಿಕ ಅಧ್ಯಯನ,** ಕನ್ನಡ ಅಧ್ಯಯನ ಪೀಠ ಕ.ವಿ.ವಿ. ಧಾರವಾಡ. ೧೯೭೯
* ನಿಂಗಣ್ಣ ಸಣ್ಣಕ್ಕಿ, **ಕನಾಟಕದ ಗೊಂದಲಿಗರು ಹಾಗೂ ಅವರ ಸಾಹಿತ್ಯ,** ಕ.ವಿ.ವಿ. ಧಾರವಾಡ. ೧೯೮೨
* ಪ್ರತಿಮಾ ಆರ್, **ಉತ್ತರ ಕರ್ನಾಟಕದಲ್ಲಿ ಜಾನಪದ ಕಥನಗೀತೆಗಳಲ್ಲಿ ಸ್ತ್ರೀ ಸಂವೇದನೆ,** ಕ.ವಿ.ವಿ. ಧಾರವಾಡ, ೨೦೦೭.
* ವೀರೇಶ.ಶೇ.ಬಡಿಗೇರ. **ಉತ್ತರ ಕರ್ನಾಟಕದ ಜನಪದ ಗೀತಮೇಳಗಳು-ಒಂದು ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿ.ವಿ. ಹಂಪಿ. ೧೯೯೬.
* ಶರ್ಮಾ ಎಸ್.ಎಲ್. **ಉತ್ತರ ಕರ್ನಾಟಕ ಜಾನಪದ ಧಾರ್ಮಿಕ ಕಲೆಗಳು-ಒಂದು ಅಧ್ಯಯನ** ಕ.ವಿ.ವಿ. ಧಾರವಾಡ. ೨೦೦೪.
* ಸುಖದೇವ ಎಲ್ ಶರ್ಮಾ, **ಉತ್ತರ ಕರ್ನಾಟಕ ಜನಪದ ಧಾರ್ಮಿಕ ಕಲೆಗಳು,** ಕ.ವಿ.ವಿ. ಧಾರವಾಡ. ೨೦೦೪.
* ಸಜ್ಜನ ಎಸ್.ಜಿ. **'ಕ್ರಿಯಾತ್ಮಕ ಜನಪದ ಗೀತೆಗಳು'** ಕ.ವಿ.ವಿ. ಧಾರವಾಡ, ೨೦೦೮.

**ಲೇಖನಗಳು : ದಿನ ಪತ್ರಿಕೆಗಳು**

೧. ಕನ್ನಡ ಪ್ರಭ ದಿನಪತ್ರಕೆ ೨೮-೦೩-೨೦೧೨ ಪು, ೦೭ರ ಲೇಖನ -"ಹಸನಾಗಬೇಕಿದೆ ಲೋಕಕ್ಕೆ ಭವಿಷ್ಯ ಹೇಳುವ ಗೊಂದಲಿಗರ ಬದುಕು"-ಕೆ.ವ್ಹಿ ಪ್ರಭಾಕರ

೨. ಹೊಸ ದಿಗಂತ ದಿನ ಪತ್ರಕೆ ೦೩-೦೯-೨೦೧೪ ಮಂದಾರ ಸಿರಿಯಲ್ಲಿ ಪು:೦೨ "ಬುಡಬುಡಕೆಯವರು", ಕೊಲೆ ಬಸವ.

೩. ಪ್ರಜಾವಾಣಿ ದಿನಪತ್ರಿಕೆ-೨೯-೧೧-೨೦೧೨ ರ ಕಾಮನ ಬಿಲ್ಲು ದಲ್ಲಿಯ ಲೇಖನ "ವೀರಗಾಸೆ ವೀರರು".

೪. "ಗುಪ್ತ ಚಾರ" ವಾರ ಪತ್ರಿಕೆ- ಪಿ.ಡಿ.ಸುಗತೆ ೫-೦೪-೨೦೧೦ ರಿಂದ ೨೦೧೨ರ ವರೆಗಿನ ಪತ್ರಿಕೆಗಳು.

೫. ಪ್ರಜಾವಾಣಿ, ಸಾಪ್ತಾಹಿಕ ಪುರವಣಿ ೧೭-೧೧-೨೦೧೩ "ಕಮಲ್ ಪರೇರ".

೬. ಸಂಯುಕ್ತ ಕರ್ನಾಟಕ ೨೪-೧೦-೨೦೧೫ ಪು.೮, "ಸಾಲು ಮರಗಳ ರಕ್ಷಕಿ ಅದಿದೇವತೆ ದುರಗಮ್ಮ"

೭. ಹೊಸ ದಿಗಂತ ೧೫-೦೯-೨೦೧೪ ಪು: ೯ "ತತ್ವಪದಗಳು ಗಟ್ಟಿ ಸಾಹಿತ್ಯಕ್ಕೆ ನಿದರ್ಶನ"

೮. ಕನ್ನಡ ಪ್ರಭ ದಿನ ಪತ್ರಿಕೆ ೨-೧೦-೧೪ ಪು: ೪ "ಹಾಲಕ್ಕಿ ಬೆಳದಿಂಗಳು"

**ಅಂತರ್‌ಜಾಲದ ಲೇಖನಗಳು**

* ಅಂತರ್ಜಾಲದ ಕಣಜದಲ್ಲಿ "ಗೊಂದಲಿಗ ಸಮುದಾಯ : ಮಹಿಳಾ ಸಂಸ್ಕೃತಿ"-ಲೇಖಕರು, ವಿಜಯಕುಮಾರ ಕಟಗಿಹಳ್ಳಿಮಠ.
* ವಿಕಿಪಿಡಿಯಾ ಶಬ್ಧಕೋಶದಲ್ಲಿ ಶಬ್ಧಗಳ ಮಾಹಿತಿ ಸಂಗ್ರಹಣೆ.
* ವಿಕಿಪಿಡಿಯಾ ವಿಶ್ವಕೋಶದಲ್ಲಿ ವಾರಕರಿಯ ಬಗ್ಗೆ ಮಾಹಿತಿ ಸಂಗ್ರಹಣೆ.

## ಮಾಹಿತಿದಾರರ ಮತ್ತು ಕಲಾವಿದರ ವಿವರಗಳು

| ಕ್ರಸಂ. | ಕಲಾವಿದರ ಹೆಸರು | ವಯಸ್ಸು | ಶಿಕ್ಷಣ | ಧರ್ಮ | ವೃತ್ತಿ | ಉಪವೃತ್ತಿ | ವಿಳಾಸ |
|---|---|---|---|---|---|---|---|
| ೧ | ಸಂಗಪ್ಪ ದುಂಡಪ್ಪ ಗೊಂದಳಿ | ೪೪ | ೫ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಕಥೆಗಾರ | ಕೃಷಿ | ಊರು ಯಲ್ಪಾರಟ್ಟಿ, ತಾ:ರಾಯಬಾಗ, |
| ೨ | ಸದಾಶಿವ ರಾಯಪ್ಪ ಗೊಂದಳಿ | ೩೫ | ೪ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಹಿಮ್ಮೇಳಿಗ | ಕೃಷಿ | ಊರು ಯಲ್ಪಾರಟ್ಟಿ, ತಾ:ರಾಯಬಾಗ, |
| ೩ | ವಿಠ್ಠಲ ಗಣಪತಿ ಗೊಂದಳಿ | ೪೧ | ೧೦ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಕಥೆಗಾರ | ಬಾಂಡೆ ವ್ಯಾಪಾರ | ಊರು ಮುಧೋಳ, ತಾ: ಮುಧೋಳ |
| ೪ | ಸುಭಾಸ ಯಲ್ಲಪ್ಪ ಗೊಂದಳಿ | ೫೫ | ೩ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಹಿಮ್ಮೇಳಿಗ | --- | ಊರು ಮುಧೋಳ, ತಾ: ಮುಧೋಳ |
| ೫ | ರಾಮು ಯಲ್ಲಪ್ಪ ಇಂಗಳೆ | ೩೭ | ೫ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಕಥೆಗಾರ | --- | ಊರು ರಾಂಪೂರ, ತಾ: ಜಮಖಂಡಿ. |
| ೬ | ಯಲ್ಲಪ್ಪ ಕೆಂಚಪ್ಪ ಸುಗತೆ | ೬೦ | --- | ಗೊಂದಳಿ | ಗೊಂದಲ ಹಾಕುವುದು ಹಿಮ್ಮೇಳಿಗ | --- | ಊರು ತೊದಲಬಾಗಿ, ತಾ: ಜಮಖಂಡಿ. |
| ೭ | ರಮೇಶ ರಾಮಕೃಷ್ಣ ಗೊಂದಳಿ | ೩೫ | ೪ನೇ ತರಗತಿ | ಗೊಂದಳಿ | ಗೊಂದಲ ಹಾಕುವುದು ಕಥೆಗಾರ | --- | ಊರು ಕಬ್ಬೂರ, ತಾ: ಚಿಕ್ಕೋಡಿ. |
| ೮ | ಮಾರುತಿ ಸಿದ್ದು ಗೊಂದಳಿ | ೫೦ | --- | ಗೊಂದಳಿ | ಗೊಂದಲ ಹಾಕುವುದು ಹಿಮ್ಮೇಳಿಗ | --- | ಊರು ತೊದಲಬಾಗಿ, ತಾ: ಜಮಖಂಡಿ. |
| ೯ | ಈಶ್ವರ ಬಾಳು ಪವಾರ. | ೬೪ | ೩ನೇ ತರಗತಿ | ಮರಾಠ | ಗೊಂದಲ ಹಾಕುವುದು ಹಿಮ್ಮೇಳಿಗ | ಪೂಜಾರಿ | ಊರು ರಾಯಬಾಗ, ತಾ: ರಾಯಬಾಗ. |
| ೧೦ | ಕನಕಪ್ಪ ದ್ಯಾಮಣ್ಣ ಗುಡಕರ | ೫೮ | ೪ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಕಥೆಗಾರ | --- | ಊರು ಕುಂದಗೋಳ, ತಾ:ನವಲಗುಂದ. |
| ೧೧ | ಮಾರುತಿ ಶಾಂತಪ್ಪ ಗುಡಕರ | ೪೨ | ೭ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಹಿಮ್ಮೇಳಿಗ | ಬಾಂಡೆ ವ್ಯಾಪಾರ | ಊರು ಕುಂದಗೋಳ, ತಾ:ನವಲಗುಂದ. |
| ೧೨ | ಶಾಂತಪ್ಪ ದ್ಯಾಮಣ್ಣ ಗುಡಕರ | ೫೨ | --- | ಗೊಂದಲಿಗ | ಗೊಂದಲ ಹಾಕುವುದು ಕಥೆಗಾರ | | ಊರು ಕುಂದಗೋಳ |
| ೧೩ | ವೆಂಕಪ್ಪ ಅಂಬಾಜಿ ಸುಗತೇಕರ | ೭೨ | - | ಗೊಂದಲಿಗ | ಗೊಂದಲ ಹಾಕುವುದು ಕಥೆಗಾರ | -- | ಊರು ನವನಗರ, ಬಾಗಲಕೋಟ. |
| ೧೪ | ಹಣಮಂತ ವೆಂಕಪ್ಪ ಸುಗತೇಕರ | ೪೯ | ೭ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಹಿಮ್ಮೇಳಿಗ | -- | ಊರು ನವನಗರ, ಬಾಗಲಕೋಟ. |
| ೧೫ | ಭೋಜರಾಜ ಗೊಂದಳಿ | ೫೫ | ೫ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಕಥೆಗಾರ | ಜ್ಯೋತಿಷ | ಊರು ಕೋಡಿಹಾಳ, ತಾ:ಹುನಗುಂದ. |
| ೧೬ | ಪಾಂಡುರಂಗ ಅಂಬಾಜಿ ಸುಗತೇಕರ. | ೬೯ | ೩ನೇ ತರಗತಿ | ಗೊಂದಲಿಗ | ಗೊಂದಲ ಹಾಕುವುದು ಕಥೆಗಾರ | -- | ಊರು ನವನಗರ, ಬಾಗಲಕೋಟ. |

| ಕ್ರಸಂ. | ಹೆಸರು | ವಯಸ್ಸು | ಧರ್ಮ | ಶಿಕ್ಷಣ | ವೃತ್ತಿ | ವಿಳಾಸ |
|---|---|---|---|---|---|---|
| ೧ | ಮುರಳಿಧರ ಎಸ್ ಸೂರ್ಯವಂಶಿ | ೬೭ | ಗೊಂದಳಿ | ಪಿಯುಸಿ | ಪಿಎಸ್ಐ (ನಿವೃತ್ತಿ) | ಊರು: ಸೆಕ್ಟರ ನಂ.೩೩, ನವನಗರ, ಬಾಗಲಕೋಟ. |
| ೨ | ಕಮಲಾಬಾಯಿ ಮು ಸೂರ್ಯವಂಶಿ | ೫೭ | ಗೊಂದಳಿ | ೭ನೇ ತರಗತಿ | ಮನೆಗೆಲಸ | ಊರು: ಸೆಕ್ಟರ ನಂ.೩೩, ನವನಗರ, ಬಾಗಲಕೋಟ. |
| ೩ | ಚಂದ್ರಹಾಸ ಗಿಡ್ಡಪ್ಪ ಸಿಂಗದ | ೪೨ | ಗೊಂದಳಿ | ಪಿಯುಸಿ | ಕಂಡಕ್ಟರ್ (ಗೊಂದಳಿ ಸಮಾಜದ ಅಧ್ಯಕ್ಷರು.) | ಊರು: ವಾರ್ಡ ನಂ.೦೬, ಸಿಂಗದ ಓಣಿ, ಇಲಕಲ್ |
| ೪ | ಪದ್ಮಾಬಾಯಿ ರಾ. ಸೂಳಿಬಾವಿ | ೭೦ | ಬ್ರಾಹ್ಮಣ | -- | ಮನೆಗೆಲಸ | ಊರು: ೧೧ ನೇ ಕ್ರಾಸ್ ವಿದ್ಯಾಗಿರಿ, ಬಾಗಲಕೋಟ. |
| ೫ | ಹನುಮೇಶ ರಾ ಸೂಳಿಬಾವಿ | ೪೮ | ಬ್ರಾಹ್ಮಣ | ಬಿ.ಇ. ಸಿವ್ಹಿಲ್ | ಇಂಜನಿಯರ | ಊರು: ೧೧ ನೇ ಕ್ರಾಸ್ ವಿದ್ಯಾಗಿರಿ, ಬಾಗಲಕೋಟ. |
| ೬ | ರಮೇಶ ಸಿಂಗದ | ೪೫ | ಗೊಂದಳಿ | ಬಿ.ಎ. | ದೈಹಿಕ ಶಿಕ್ಷಕರು | ಊರು: ಗಣೇಶಗುಡಿ, ಬೆಳಗಾಂವಿ. |
| ೭ | ಯಲ್ಲಪ್ಪ ಇಂಗಳೆ | ೬೮ | ಗೊಂದಳಿ | -- | ಬಾಂಡೆ ವ್ಯಾಪಾರ | ಊರು: ಜಮಖಂಡಿ. |
| ೮ | ಅಂಬುಬಾಯಿ ತುಕಾರಾಮ ಜೋಶಿ | ೭೦ | ಗೊಂದಳಿ | -- | ಮನೆಗೆಲಸ | ಊರು: ಸೆಕ್ಟರ ನಂ.೧೫, ನವನಗರ, ಬಾಗಲಕೋಟ. |
| ೯ | ಸುಧಾಕರ ದುಮ್ಮಾಳ | ೫೫ | ಗೊಂದಳಿ | ಬಿ.ಎ. | ನೌಕರಿ | ಊರು: ಕೊಲ್ಲಾಪೂರ. |
| ೧೦ | ರವೀಂದ್ರಬಾಬು ಎನ್. ಜೋಶಿ | ೫೦ | ಗೊಂದಳಿ | ಡಿಪ್ಲೋಮಾ ಮೆಕ್ಯಾನಿಕಲ್ | ಇಂಜನಿಯರ | ಊರು: ೬ನೇ ಕ್ರಾಸ್ ವಿದ್ಯಾಗಿರಿ, ಬಾಗಲಕೋಟ. |



ಸಂಡೂರಿನ ಗೊಂದಳಿ ಕಲಾವಿದರು.



ಗೊಂದಿಲಿಗರ ಆಟ,ಮಹಾರಾಷ್ಟ್ರ



ಕವಡಿ ಸರ ಮತ್ತು ಚೌಡಿಕೆ. ವಾದ್ಯ



ಗೊಂದಳ ಪೂಜೆ

ಗೊಂದಳಿ ಆಟ, ದೇವಿ ವೇಷದಲ್ಲಿರುವ ಬಾಲಕಿ ಮಹಾರಾಷ್ಟ್ರ



ಪತ್ತಾ ಆಡುವುದು, ಮಹಾರಾಷ್ಟ್ರ



ಕ್ಷತ್ರೀಯ ಮಹಾಸಭೆಯಲ್ಲಿ ಗೊಂದಳಿ ಕಲಾವಿದರು




ಸಂಕೇಶ್ವರ ಗೊಂದಳಿ ಕಲಾವಿದರು

